# ನರಸಿಂಹ ಪದಾರ್ಥ ೧

## ಮೂಲ ವಿಶ್ಲೇಷಣೆ



ಕೆ.ಆರ್. ನರಸಿಂಹನ್

ಕೋಲಾರ ಪತ್ರಿಕೆ ಪ್ರಕಾಶನ, ಕೋಲಾರ

**Narasimha Padartha** - a religious book written by K.R. Narasimhan, Principal, Govt. First Grade College, Shirahatti. S/o K.N. Raghavendra Rao, Suryanarayana Temple, Mulbagal - 563 131. Publication: Kolara Patrike Prakashana, 2nd Cross, Gowripet, Kolar

Copies : 1000
First Edition : 2001
Pages : 8+224+4
Price : Rupees **Eighty (80/-)**








Published with the financial assistance of
**TIRUMALA TIRUPATHI DEVASTHANAMS**
under their scheme
AID TO PUBLISH RELIGIOUS BOOKS

ಪುಟಗಳು : 8+224+4
ಬೆಲೆ : **80** ರೂ.

ಮುಖಪುಟ: ಪಿ. ಚಂದ್ರಪ್ರಕಾಶ್

ಪ್ರತಿಗಳಿಗೆ ವಿಚಾರಿಸಿ: **ಕೋಲಾರ ಪತ್ರಿಕೆ ಕಾರ್ಯಾಲಯ**
2ನೇ ರಸ್ತೆ, ಗೌರಿಪೇಟೆ
ಕೋಲಾರ - 563 101

ಮುದ್ರಣ : ಸುಮನ ಆಫ್‌ಸೆಟ್, ಕೋಲಾರ

# ಮೊದಲ ಮಾತು

ಶ್ರೀಮತ್ಪಯೋನಿಧಿ ನಿಕೇತನ ಚಕ್ರಪಾಣೇ|
ಭೋಗೀಂದ್ರ ಭೋಗಮಣಿರಂಜಿತ ಪುಣ್ಯಮೂರ್ತೇ||
ಯೋಗೀಶ ಶಾಶ್ವತ ಶರಣ್ಯ ಭವಾಬ್ಧಿಪೋತ|
ಲಕ್ಷ್ಮೀನೃಸಿಂಹ ಮಮದೇಹಿ ಕರಾವಲಂಬಮ್||

ಶ್ರೀ ಶಂಕರ ಭಗವತ್ಪಾದರಂತೆ, ನಾನೂ ಸಹ ಈ ನರಸಿಂಹ ಪದಾರ್ಥಕ್ಕೆ ಮೊದಲ ಮಾತು ಬರೆಯಲು ಮೊದಲು ಆ ಭಗವಂತನಲ್ಲಿ ಕೈಗಳ ಆಸರೆಯನ್ನು ಕೊಟ್ಟು ಮುನ್ನಡೆಸು ಎಂದು ಪ್ರಾರ್ಥಿಸುತ್ತೇನೆ.

ವಿಷ್ಣುವಿನ ದಶಾವತಾರಗಳಲ್ಲಿ ನರಸಿಂಹ ಅವತಾರ ತುಂಬಾ ವಿಶಿಷ್ಟವಾದುದು. ಮಾನವ ಶರೀರ, ಸಿಂಹಮುಖ ಹೊಂದಿದ ವಿಚಿತ್ರ ಆಕಾರ ನರಸಿಂಹನದು. ಶಿಷ್ಟ ರಕ್ಷಣೆಗಾಗಿ ಅವತರಿಸಿದ ನರಸಿಂಹ ಸದಾ ಉಗ್ರನೇ ಆಗಿರಬೇಕಿಲ್ಲ. ಆತ ಯೋಗ ನರಸಿಂಹ, ಭೋಗ ನರಸಿಂಹನೂ ಆಗಿದ್ದಾನೆ. ಸರ್ವತ್ರ ವ್ಯಾಪ್ತನಾದ ಪರಮಾತ್ಮ ಭಕ್ತ ಪ್ರಹ್ಲಾದನ ಅನುಗ್ರಹಕ್ಕಾಗಿ, ಹಿರಣ್ಯಕಶಿಪುವನ್ನು ವಧಿಸಲು ಆತನಿಗೆ ನೀಡಿದ್ದ ವರಕ್ಕೆ ಅನುಸಾರವಾಗಿ ಪ್ರಾಣಿಯೂ ಅಲ್ಲದ, ಮನುಷ್ಯನೂ ಅಲ್ಲದ ರೂಪದಿಂದ ಅವತರಿಸಿ, ಆಯುಧ ಬಳಸದೆ, ಮನೆಯ ಒಳಗೂ ಅಲ್ಲ, ಹೊರಗೂ ಅಲ್ಲ ಎನ್ನುವಂತೆ ತನ್ನ ನಖಗಳಿಂದ ಆತನನ್ನು ವಧಿಸುತ್ತಾನೆ. ನರಸಿಂಹಾವತಾರದ ಕಾರ್ಯ ಅಲ್ಲಿಗೆ ಸಮಾಪ್ತಿ ಆಗುತ್ತದೆ. ಆನಂತರ ಭಕ್ತರ ಕಲ್ಪನೆಗೆ ಅನುಸಾರವಾಗಿ ನರಸಿಂಹನ ವಿವಿಧ ಆಕಾರಗಳು ರೂಪುಗೊಂಡಿವೆ ಎಂಬುದು ಸರ್ವವೇದ್ಯ.

ನರಸಿಂಹ ಪದಾರ್ಥದ ಕರ್ತೃ ಕೆ.ಆರ್. ನರಸಿಂಹನ್ ಅವರಿಂದ ವಿರಚಿತವಾದ ಕೋಲಾರ ಜಿಲ್ಲೆಯ ವೆಂಕಟೇಶ್ವರಸ್ವಾಮಿ ಮತ್ತು ಇತರ ವಿಷ್ಣು ದೇವಾಲಯಗಳು ಪುಸ್ತಕದ ಮುನ್ನುಡಿಯಲ್ಲಿ ಶ್ರೀ ಎನ್.ವಿ. ಗೋವಿಂದರಾಜನ್ ಅವರು, ಈ ಲೇಖಕರಿಂದ ಇದೇ ರೀತಿಯ ಆಧ್ಯಾತ್ಮಿಕ, ಲೌಕಿಕ ಕೃತಿಗಳು ಹೊರಬರಲಿ ಎಂದು ಆಶಿಸಿದ್ದು, ಹದಿನೈದು ವರ್ಷಗಳ ನಂತರ ಕಾರ್ಯಗತವಾಗಿದೆ.

ಈ ಕೃತಿಯ ಶೀರ್ಷಿಕೆಯು ಸಹ ನರಸಿಂಹ ಅವತಾರದಂತೆ ವಿಶೇಷವಾಗಿದೆ- ನರಸಿಂಹ ಪದಾರ್ಥ. ಪುಸ್ತಕವು ನರಸಿಂಹ ಪದದ ಅರ್ಥ ತಿಳಿಸುತ್ತೆ ಎಂಬುದು. ಪದಾರ್ಥ ಅಂದರೆ ವಸ್ತು, ವಿಷಯ. ಲೇಖನದ ವಸ್ತು ನರಸಿಂಹ ಎಂಬುದೂ ಆಗುತ್ತೆ.

ಪದಾರ್ಥ ಅಂದರೆ ಇಂಗ್ಲೀಷಿನಲ್ಲಿ Material ಎಂದಾಗಿ, ಪಾರಮಾರ್ಥಿಕವಲ್ಲದ, ಪ್ರಾಪಂಚಿಕ ವಿಷಯಗಳು ಎಂದಾಗುತ್ತದೆ. ಈ ಪುಸ್ತಕದಲ್ಲಿ ನರಸಿಂಹನ್ ಅವರು ಆಧ್ಯಾತ್ಮ ವಿಷಯಗಳ ಜೊತೆಗೆ ಲೌಕಿಕ ವಿಚಾರಗಳನ್ನು- ಆಲಯಗಳ ಬಗೆಗೆ - ಸವಿಸ್ತಾರವಾಗಿ ತಿಳಿಸಿದ್ದಾರೆ.

ಪದಾರ್ಥಕ್ಕೆ ವ್ಯಂಜನ, ಮೇಲೋಗರ ಎಂಬ ಅರ್ಥವೂ ಇದೆ. 'ನರಸಿಂಹ' ಭೋಜನಕ್ಕೆ ಈ ಪುಸ್ತಕ ಮೇಲೋಗರದಂತೆ ಎಂಬ ಅಭಿಪ್ರಾಯವೂ ಉಂಟಾಗುತ್ತದೆ. ಹೀಗಾಗಿ ನೃಸಿಂಹ ಪದಾರ್ಥ ವೈಶಿಷ್ಟ್ಯತೆಯಿಂದ ಕೂಡಿದೆ ಎನ್ನಲಡ್ಡಿಯಿಲ್ಲ.

ಜಟಿಲವಾದ ಪೌರಾಣಿಕ, ಆಧ್ಯಾತ್ಮಿಕ ವಿಚಾರಗಳನ್ನು ಸಮಗ್ರವಾಗಿ ಪರಿಶೀಲಿಸಿ ಜನ ಸಾಮಾನ್ಯರಿಗೆ ತಿಳಿಯುವಂತೆ ಬರೆಯುವುದು ಕಷ್ಟಕರವಾದುದು. ಆದರೂ ನರಸಿಂಹನ್ ಅವರು ಜನತೆಗೆ ಅರ್ಥವಾಗುವ ರೀತಿಯಲ್ಲಿ ನರಸಿಂಹ ಪದಾರ್ಥದ ತತ್ವಾದರ್ಶಗಳನ್ನು ಉಣ ಬಡಿಸಿದ್ದಾರೆ. ಪಾಮರರ ಸಂಶಯಗಳಿಗೆ ಪರಿಹಾರ ಕಂಡು ಹಿಡಿಯಲು ಯತ್ನಿಸಿದ್ದಾರೆ.

ನರಸಿಂಹಾವತಾರ ಕತೆಯು ಹರಿವಂಶ, ವಿಷ್ಣುಪುರಾಣ, ನರಸಿಂಹ ಪುರಾಣ, ಭಾಗವತಗಳಲ್ಲಿ ಹೇಗೆ ಮೂಡಿ ಬಂದಿದೆ ಎಂಬುದನ್ನು ವಿವೇಚಿಸಿ, ವ್ಯತ್ಯಾಸ ಬೆಳವಣಿಗೆಗಳನ್ನು ಚಿತ್ರಿಸಿದ್ದಾರೆ. ವೇದೋಪನಿಷತ್ತುಗಳಲ್ಲಿ ನರಸಿಂಹಾವತಾರದ ಕತೆಯನ್ನು ಬಣ್ಣಿಸಿದ್ದಾರೆ.

ವಿಷ್ಣು ಪುರಾಣದಲ್ಲಿ ಬರುವ ನರಸಿಂಹಾವತಾರದ ಕತೆ ಸ್ವಲ್ಪ ವಿಶಿಷ್ಟವಾದುದಾಗಿದೆ. ನರಸಿಂಹ ಎಂದಾಕ್ಷಣ ಹಿರಣ್ಯಕಶಿಪು ವಧೆ ಕಣ್ಮುಂದೆ ಬರುತ್ತದೆ. ಆದರೆ ಇಲ್ಲಿ ಸೌಮ್ಯಮೂರ್ತಿ ನರಸಿಂಹ ಹಿರಣ್ಯಕಶಿಪುವಿನ ಮನೋಭಾವವನ್ನು ತಿದ್ದಿ, ಬದಲಿಸಿ, ಆತನನ್ನು ನರಸಿಂಹ ಭಕ್ತನನ್ನಾಗಿಸಿ, ಆನಂತರ ಸಾಯುಜ್ಯ ಕರುಣಿಸುತ್ತಾನೆ.

ಈ ರೀತಿ ಬೇರೆ ಬೇರೆ ದೃಷ್ಟಿಕೋನಗಳಿಂದ ನರಸಿಂಹನನ್ನು ಚಿತ್ರಿಸಲಾಗಿದೆ. ಭಾಗವತ, ಪುರಾಣಗಳ ಜೊತೆಗೆ ಆಚಾರ್ಯರ ಸ್ತೋತ್ರಗಳಲ್ಲಿ, ಅನ್ನಮಾಚಾರ್ಯರ, ದಾಸರ ಕೀರ್ತನೆಗಳಲ್ಲಿರುವ ನರಸಿಂಹ ರೂಪದ ವಿವರಣೆಯನ್ನು ನಮಗೆ ನೀಡಿದ್ದಾರೆ. ಜಾನಪದ ಕಲ್ಪನೆಯ ವಿವರವನ್ನೂ ಕೊಟ್ಟಿದ್ದಾರೆ.

ದೇಶದ ಉದ್ದಗಲಕ್ಕೂ ಹರಡಿಕೊಂಡಿರುವ ನರಸಿಂಹ ಆರಾಧನೆಯ ವಿಶೇಷತೆಯನ್ನು ರೂಪ-ಸ್ವರೂಪಗಳನ್ನೂ, ಆಲಯಗಳನ್ನೂ ಚಿತ್ರಗಳೊಡನೆ ನೀಡಿರುವುದು ಚೆನ್ನಾಗಿದೆ. ದೇವಾಲಯಗಳ ಭಾಗದ ವಿವರಣೆ ಇನ್ನಷ್ಟು ಇದ್ದಿದ್ದರೆ, ಮತ್ತಷ್ಟು ಉಪಯುಕ್ತವಾಗುತ್ತಿತ್ತು ಎಂಬ ಅನಿಸಿಕೆ ನನ್ನದು. ನಾವು ಕಂಡು, ಕೇಳದ ಎಷ್ಟೋ ನರಸಿಂಹಗಳ ವಿವರಣೆ ಇಲ್ಲಿ ಲಭ್ಯವಿದೆ.

ಒಟ್ಟಾರೆ ನರಸಿಂಹ ತತ್ತ್ವ ಆದರ್ಶ ಅರಿಯುವ ಕುತೂಹಲಿಗಳಿಗೆ, ನರಸಿಂಹ ದೇವಾಲಯಗಳಿಗೆ ಭೇಟಿ ನೀಡಿ, ಶಿಲ್ಪಕಲೆ, ಅವತಾರದ ವಿಶೇಷತೆಗಳನ್ನು ನೋಡ ಬಯಸುವವರಿಗೆ ಈ ನರಸಿಂಹ ಪದಾರ್ಥ ಮಾರ್ಗದರ್ಶಿಯಾಗಿದೆ ಎಂದರೆ ಉತ್ಪ್ರೇಕ್ಷೆಯಿಲ್ಲ.

ಕೋಲಾರ
ವಿಕ್ರಮ ಸಂವತ್ಸರ
ಹೋಳಿ ಹುಣ್ಣಿಮೆ

**ಕೆ. ಪ್ರಹ್ಲಾದರಾವ್**
**ಸಂಪಾದಕ, ಕೋಲಾರ ಪತ್ರಿಕೆ**

# ಗ್ರಂಥಕರ್ತನ ನುಡಿ

ಸತ್ಯಜ್ಞಾನಸುಖಸ್ವರೂಪಮಮಲಂ ಕ್ಷೀರಾಬ್ಧಿಮಧ್ಯೇ ಸ್ಥಿತಂ ।
ಯೋಗಾರೂಢಮತಿಪ್ರಸನ್ನವದನಂ ಭೂಷಾ ಸಹಸ್ರೋಜ್ವಲಂ ॥
ತ್ರ್ಯಕ್ಷಂ ಚಕ್ರಪಿನಾಕ ಸಾ ಭಯಂಕರಂ ಬಿಭ್ರಾಣಮರ್ಕಚ್ಛವಿಂ ।
ಛತ್ರೀಭೂತ ಫಣೀಂದ್ರಮಿಂದುಧವಲಂ ಲಕ್ಷ್ಮೀನೃಸಿಂಹಂ ಭಜೇ ॥

'ನರಸಿಂಹ ಪದಾರ್ಥ'ವೆಂಬ ಹೆಸರಿನ ಎರಡು ಪುಸ್ತಕಗಳನ್ನು ಪ್ರತ್ಯೇಕ ಭಾಗಗಳಲ್ಲಿ ನೀಡಲಾಗುತ್ತಿದೆ. ಕೃತಿಯ ಹೆಸರೇ ಸ್ವಲ್ಪ ವಿಭಿನ್ನವೆಂದು ತೋರಬಹುದು. ಆದರೆ ಗ್ರಂಥದ ಒಳಗೆ ಪ್ರವೇಶಿಸಿ ಪರಾಮರ್ಶಿಸುವ ಸಹೃದಯ ಬಂಧುಗಳಿಗೆ ಹೆಸರಿನ ಗೂಢಾರ್ಥವು ಭಾಸವಾಗಬಹುದೆಂದು ಭಾವಿಸುತ್ತೇನೆ. ಮನಸ್ಸಿನ ಸಣ್ಣ ಆಲೋಚನೆಯೊಂದು 'ನರಸಿಂಹ ಪದಾರ್ಥ' ದಂತಹ ಕೃತಿಯವರೆಗೆ ಸಾಗಿ ಬಂದಿರುವ ಮಾರ್ಗವು ಬೆರಗುಗೊಳಿಸುವುದೇ ಆಗಿದೆ. ಈ ದಾರಿಯ ಉದ್ದಕ್ಕೂ ಅಮೂಲ್ಯ ಗ್ರಂಥ ಸಂಪತ್ತು, ಸಮಾನಚಿಂತಕರ ಉಪಯುಕ್ತ ನೆರವು, ಸಮಯದ ಸದುಪಯೋಗಗಳು ಮುಪ್ಪುರಿಗೊಂಡು ಕೃತಿಗೊಂದು ಬಂಧವನ್ನೊದಗಿಸಿರುವುದಾದರೆ ಸಾರ್ಥಕವೆಂದು ತಿಳಿಯುತ್ತೇನೆ. ಸಹಜಃ ರೀತಿಯಲ್ಲಿ ಬರದೆ, ಅದ್ಭುತ ರೂಪ-ಸ್ವಭಾವಗಳಿಂದ ಕಂಭದಿಂದ್ಧ ಮೂಡಿಬಂದ ನರಸಿಂಹನ ಅವತಾರ ಮರ್ಮವನ್ನು ಅರಿತುಕೊಳ್ಳುವ ಪ್ರಯತ್ನವು ಇಲ್ಲಿದೆ.

'ನರಸಿಂಹ' ಎಂದ ಕೂಡಲೇ ವಿಚಿತ್ರವಾದ, ಉಗ್ರಸ್ವಭಾವದಿಂದೊಡಗೂಡಿದ ಆಕಾರವು ಅಬಾಲವೃದ್ಧರಾದಿಯಾಗಿ ಸರ್ವರ ಮುಂದೆ ಸಾದರಪಡುವಂತಾಗುತ್ತದೆ. ಪುರಾಣಗಳು, ಸಂಹಿತೆಗಳು, ಆಗಮಗಳು, ಆಚಾರಕೃತಿಗಳು, ಶಿಲ್ಪಶಾಸ್ತ್ರ ಗ್ರಂಥಗಳು, ಪೂಜಾವಿಧಾನದ ಕೈಪಿಡಿಗಳು, ಪುರಾತನ ನೂತನ ಸಾಹಿತ್ಯ ಸಮುದಾಯವು ನರಸಿಂಹನ ವಿಚಾರವಾಗಿ ಅಪಾರ ವಿಷಯಗಳನ್ನು ಹೊರಹಾಕುತ್ತವೆ. ನರಸಿಂಹನ ರಹಸ್ಯವನ್ನು ಬಿಚ್ಚಿಹೇಳುವ, ಆತನ ಅವತಾರದ ಮಹಿಮೆಗೆ ಅರ್ಥಸ್ಪಷ್ಟತೆಯನ್ನು ನೀಡುವ ಕಾರ್ಯಸಾಧನೆ ಮಾಡಿವೆ. ಇವುಗಳನ್ನು ಪರಿಶೀಲಿಸಿ, ಸಾಧ್ಯವಾದ ಕಡೆ ಅಧ್ಯಯನ ನಡೆಸಿ, ಅದರ ಫಲವನ್ನು ಅಧ್ಯಾತ್ಮ ಹಾದಿಯ ಬದುಕನ್ನು ಅಪೇಕ್ಷಿಸುವವರಿಗೆ ನೀಡಬೇಕೆಂಬ ಹಂಬಲವು ಈ ಕೃತಿಗಳ ಹಿನ್ನೆಲೆಯಲ್ಲಿ ಅಡಕವಾಗಿದೆಯೆಂಬುದು ಅಹಂಕಾರದ ಮಾತಲ್ಲ.

'ನರಸಿಂಹ ಪದಾರ್ಥ'ದ ಮೊದಲನೆಯ ಭಾಗದಲ್ಲಿ ರೂಪವಿಶ್ಲೇಷಣೆಗೆ ಮುಖ್ಯ ಗಮನವನ್ನು ನೀಡಲಾಗಿದೆ. ನರಸಿಂಹಾವತಾರದ ಹಿನ್ನೆಲೆಯಲ್ಲಿನ ತತ್ತ್ವವನ್ನು ಅರಿತುಕೊಳ್ಳುವುದಕ್ಕೆ ಅನುವಾಗುವ ವಿವಿಧ ಮಾರ್ಗಗಳನ್ನು ಇಲ್ಲಿನ ಅಧ್ಯಾಯಗಳಲ್ಲಿ ಕಾಣಿಸಲಾಗಿದೆ. ಇವುಗಳಲ್ಲಿ ಪುರಾಣದ ಪಾತ್ರವು ಪ್ರಧಾನವಾಗಿದ್ದು ಮುಂಚೂಣಿಯಲ್ಲಿದೆ. ನಂತರ ದಾರ್ಶನಿಕ ಪರಂಪರೆಯಂತೆ ಕಂಡುಬರುವ ಕೀರ್ತನ ಸಾಹಿತ್ಯವಿದೆ. ಕನ್ನಡ ಮತ್ತು ತೆಲುಗು ಭಾಷೆಗಳ ಉತ್ತಮ ಪ್ರಾತಿನಿಧಿಕ ಕೃತಿಗಳ ಮೂಲಕವಾಗಿ ನರಸಿಂಹನನ್ನು ತೋರಿಸುವ ಪ್ರಯತ್ನವು ಇದರಲ್ಲಿದೆ. ಕ್ವಚಿತ್ತಾಗಿ ತಮಿಳು ಪಾಶುರಗಳ ಬಳಕೆಯಿರುತ್ತದೆ.

ಭಗವಂತನನ್ನು ಭಕ್ತಿಯ ಸ್ತೋತ್ರವಿಲ್ಲದೆ ಅರಿತುಕೊಳ್ಳುವುದು ದೂರದ ಮಾತೇ ಸರಿ. ಆದ್ದರಿಂದ ಸ್ತೋತ್ರಸಾಹಿತ್ಯವಾಹಿನಿಯನ್ನು ಇಲ್ಲಿನ ಮತ್ತೊಂದು ಪ್ರಧಾನ ಅಂಶವಾಗಿ ನಿರೂಪಿಸಲಾಗಿರುತ್ತದೆ.

ಅಧ್ಯಾತ್ಮದ ಹಾದಿಯನ್ನು ಸುಗಮಗೊಳಿಸುವಲ್ಲಿ ಧಾರ್ಮಿಕ ಗ್ರಂಥಗಳು ನಿರ್ವಹಿಸುತ್ತಿರುವ ಪಾತ್ರವು ಪ್ರಮುಖವಾದದ್ದೆಂದು ಹೇಳಬಹುದು. ಆದರೆ ಇಂತಹ ಕೃತಿಗಳನ್ನು ಕಟ್ಟುವ ಕೆಲಸ ಮಾತ್ರ ಕಠಿಣವಾದದ್ದು. ಲಭ್ಯವಿರುವ ಆಕರಗಳನ್ನು ಅಭ್ಯಾಸ ಮಾಡಿ ಕೃತಿಯ ಹಿನ್ನೆಲೆಗೆ ಅದನ್ನು ಎಚ್ಚರಿಕೆಯಿಂದ ಬಳಸಿಕೊಳ್ಳುವ ಕಾರ್ಯವೊಂದೆಡೆಯಾದರೆ, ಅಲಭ್ಯ ಆಕರಗಳ ಕೊರತೆಯಿಂದ ಗ್ರಂಥ ಪರಿಪೂರ್ಣವಾಗುವುದಿಲ್ಲವೇನೋ ಎಂಬ ಆತಂಕ ಮತ್ತೊಂದು ಕಡೆ. ಚಾಟುವಿಠಲನಾಥನ ಭಾಗವತ, ನರಸಿಂಹ ತಾಪನೀಯ ಉಪನಿಷತ್ ಗಳಂತಹ ಸಹಾಯಕ ಸಾಮಗ್ರಿಗೆ ಅನ್ವಯವಾಗುವಂತೆ ಈ ಮಾತುಗಳನ್ನು ಹೇಳಲಾಗಿದೆ.

ಈ ಕೃತಿಯ ಅಂತರ್ಯದ ಮಾತುಗಳನ್ನಷ್ಟೆ ಹೇಳುವುದು ಸರಿಯಾಗಲಾರದು. ಬಾಹ್ಯರಚನೆಯ ಕೆಲವು ಸಂಗತಿಗಳ ಬಗ್ಗೆ-ರೂಪವಿನ್ಯಾಸ, ಮುದ್ರಣಸಿದ್ಧತೆ, ಮುದ್ರಣ ಕಾರ್ಯ, ಒಟ್ಟು ಕಟ್ಟಡ ಇತ್ಯಾದಿ-ಆಡಬೇಕಾದದ್ದು ಸಾಕಷ್ಟಿದೆ. ಅದರ ಸ್ಥೂಲವಿವರವನ್ನಷ್ಟೇ ಇಲ್ಲಿ ನೀಡಲಾಗಿದೆ. ಕೋಲಾರಪತ್ರಿಕೆ ಸಂಪಾದಕರಾದ ಶ್ರೀ ಕೆ. ಪ್ರಹ್ಲಾದರಾವ್ ಅವರು ನನ್ನ ಎಲ್ಲ ಬರಹಗಳಿಗೆ ರೂಪಕೊಟ್ಟವರಾಗಿದ್ದಾರೆ. ಪ್ರಕಾಶಕರಾದ ಶ್ರೀಮತಿ ಶ್ರೀವಾಣಿ ಪ್ರಹ್ಲಾದರಾವ್ ಅವರಿಗೆ ನನ್ನ ಅನಂತ ಧನ್ಯವಾದಗಳು. ಪುಸ್ತಕಕ್ಕೆ ತಿಲಕವನ್ನಿಟ್ಟು ಕ್ರಿಯಾತ್ಮಕ ಶಕ್ತಿಯನ್ನು ತುಂಬಿಕೊಟ್ಟಿರುವ ಶ್ರೀ ಬಿ.ಎನ್. ಶ್ರೀನಿವಾಸನ್‌ರವರಿಗೆ ಕೃತಜ್ಞತೆಗಳು.

ಆರ್ಥಿಕ ನೆರವು ನೀಡಿ ಪುಸ್ತಕ ಪ್ರಕಟಣೆ ಭಾರವನ್ನು ಹಗುರಗೊಳಿಸಿದ ತಿರುಪತಿ-ತಿರುಮಲೆ ದೇವಾಲಯ ದೇವಸ್ಥಾನ ಸಮಿತಿಯವರಿಗೆ, ಸಂಪಾದಕರಾದ ಡಾ. ಎನ್.ಎಸ್. ರಾಮಮೂರ್ತಿ ಅವರಿಗೆ ಮತ್ತು ಶ್ರೀ ಆದ್ಯರಾಮಾಚಾರ್ಯರಿಗೆ ಹೃದಯಪೂರ್ವಕ ನಮನಗಳನ್ನು ಸಲ್ಲಿಸುತ್ತೇನೆ. ರಕ್ಷಾಪುಟವನ್ನು ವಿನ್ಯಾಸಗೊಳಿಸಿದ ಶ್ರೀ ಪಿ. ಚಂದ್ರಪ್ರಕಾಶ್ ಅಭಿನಂದನ ಅರ್ಹರು. ಛಾಯಾಚಿತ್ರಗಳನ್ನು ಒದಗಿಸಿದ ಗೆಳೆಯ ಶ್ರೀ ಕೆ.ಎಸ್. ನಾಗರಾಜ್, ಶ್ರೀ ಅ.ನಾ. ಪ್ರಹ್ಲಾದರಾವ್ ಇವರಿಗೆ ವಂದನೆಗಳು. ಕೋಲಾರ ಪತ್ರಿಕೆಯ ಬಳಗದವರಾದ ಶ್ರೀ ಎಚ್.ಕೆ. ರಾಘವೇಂದ್ರ, ಕು. ರಾಧಾ ಮತ್ತು ಮುದ್ರಕ ಶ್ರೀ ನಾಗೇಶ್ ಅವರ ಸೇವೆ ಶ್ಲಾಘನೀಯವಾದದ್ದು.

ಶಿರಹಟ್ಟಿ ಕಾಲೇಜಿನ ಸಿಬ್ಬಂದಿ ವರ್ಗ, ಕಾಲೇಜು ಶಿಕ್ಷಣ ಇಲಾಖೆಯ ಜಂಟಿ ನಿರ್ದೇಶಕಿ ಡಾ. ಜಾನಕಿ, ಕೋಲಾರದ ವಕೀಲ ಶ್ರೀ ಬಿ.ಎಸ್. ವಾಸುದೇವಮೂರ್ತಿ ಇವರ ಪ್ರೋತ್ಸಾಹದ ಸ್ಮರಣೆ ಇಲ್ಲದೆ ನನ್ನ ಮಾತುಗಳಿಗೆ ಪುಷ್ಟಿದೊರೆಯಲಾರದು. ನನ್ನ ಕೃತಿಯ ಕಾರ್ಯಕ್ಕೆ ಪ್ರೋತ್ಸಾಹ ನೀಡಿದ ಕುರುಡಮಲೆ ಕುಟುಂಬ ವರ್ಗದವರಿಗೆ ಕೃತಜ್ಞತೆಗಳು.

- ಕೆ.ಆರ್. ನರಸಿಂಹನ್

# ಪರಿವಿಡಿ



# ನರಸಿಂಹ ಪದಾರ್ಥ-1

## (ರೂಪ ವಿಶ್ಲೇಷಣೆ)

### ಉಪಕ್ರಮಣಿಕೆ

*ಉದಯರವಿ ಸಹಸ್ರದ್ಯೋತಿತಂ ರೂಕ್ಷ ವೀಕ್ಷಂ*
*ಪ್ರಲಯ ಜಲಧಿನಾದಂ ಕಲ್ಪಕೃದ್ವಹ್ನಿ ವಕ್ತ್ರಮ್*
*ಸುರಪತಿರಿಪು ವಕ್ಷಚ್ಛೇದ ರಕ್ತೋಕ್ಷಿತಾಂಗಂ*
*ಪ್ರಣತ ಭಯಹರಂ ತಂ ನಾರಸಿಂಹಂ ನತೋಽಸ್ಮಿ*

ದೇವರ ಆರಾಧನೆಗೆ ನಾವಿಂದು ಅನೇಕ ರೂಪಗಳನ್ನು ಕಂಡುಕೊಂಡಿದ್ದೇವೆ. ನಿರಾಕಾರನಾದ ಭಗವಂತನು ನಮ್ಮನ್ನು ಅನುಗ್ರಹಿಸಲು ಸಾಕಾರವಾಗಿ ಕಂಗೊಳಿಸಿದ್ದಾನೆ. ಜೀವರುಗಳನ್ನು ಮೇಲೆತ್ತಲು ಲೆಕ್ಕವಿಲ್ಲದಷ್ಟು ಅವತಾರಗಳನ್ನು ಧಾರಣ ಮಾಡಿರುತ್ತಾನೆ. ದೇವಾಲಯಗಳಲ್ಲಿ ಅರ್ಚಾರೂಪದಿಂದ ನೆಲೆಸಿ ಆರಾಧನೆಯನ್ನು ಸ್ವೀಕರಿಸಲು ಸಿದ್ಧನಾಗಿದ್ದಾನೆ. ಕೋಟಿ ಕೋಟಿ ಜೀವಿಗಳ ಹೃದಯದಲ್ಲಿ ತುಂಬಿ ನಿತ್ಯ ನಿರಂತರವಾಗಿ ಅನುಗ್ರಹಿಸಿದ್ದಾನೆ. ಹೀಗೆ ಒಳ-ಹೊರಗೆ ತುಂಬಿ ನಿಂತ "ಅವನನ್ನು" ತಿಳಿಯುವುದು ಮಾನವ ಜೀವನಕ್ಕೆ ಪ್ರಸ್ತುತವಾದ ಕರ್ತವ್ಯವಾಗಿದೆ.

ದೇವರ ಇರುವಿಕೆಯನ್ನು ನಮ್ಮ ನಾಡಿನ ವೇದ ವೇದಾಂಗಗಳು ಬಣ್ಣಿಸುತ್ತಿವೆ. ಜಾನಪದ ಮೂಲಗಳು ಈ ಜೀವ-ದೇವ ಸಂಬಂಧವನ್ನು ಅರಿಯುವಲ್ಲಿ ಸುಳಿವುಗಳನ್ನು ನೀಡುತ್ತಿವೆ. ವಿವಿಧ ಸಂಸ್ಕೃತಿ ನಾಗರಿಕತೆಗಳು ಈತನನ್ನು ಮಾತಿನಲ್ಲಿ-ರೂಪದಲ್ಲಿ-ಕಡೆದು ನಿಲ್ಲಿಸಲು ಪ್ರಯತ್ನಿಸಿವೆ. ಇತಿಹಾಸ ಪುರಾಣಗಳು ಭಗವಂತನನ್ನು ಬಣ್ಣಿಸುವ ಕಥೆಗಳ ಹಂದರವನ್ನೇ ನಿರ್ಮಿಸಿವೆ. ಒಟ್ಟಿನಲ್ಲಿ ಮನುಷ್ಯನ ಇಡೀ ಅಸ್ತಿತ್ವವೇ ಈ ಒಂದು ಸರ್ವಂಭರನಾದ ಸೃಷ್ಟಿಕರ್ತನನ್ನು ಅರಿಯಲು ಅನಾದಿಯಿಂದಲೂ ಪ್ರಯತ್ನಿಸುತ್ತ ನಡೆದಿದೆಯೆಂಬುದನ್ನು ಗುರುತಿಸುವುದು ಕಷ್ಟವೇನಲ್ಲ.

ದೇವರನ್ನು ಕುರಿತ ಆದಿ ಮಾನವನ ಕಲ್ಪನೆ ತುಂಬ ವಿಚಿತ್ರವಾದದ್ದು. ಆತನಿಗೆ ಒಬ್ಬ ಸರ್ವಶಕ್ತ-ಸರ್ವ ಸೃಷ್ಟಿಕರ್ತ-ಸಂಹಾರಕರ್ತ-ಸರ್ವಂಭರ ದೇವರ ಬಗ್ಗೆ ತಿಳಿದಿತ್ತೋ ಇಲ್ಲವೋ ಆದರೆ ತನ್ನ ಸುತ್ತಲೂ ವಿಚಿತ್ರವಾದ ಅದ್ಭುತವಾದ ತನ್ನ ಅರಿವಿನ ಅಳತೆಗೆ ಸಿಗದ ಶಕ್ತಿಗಳು ಚಟುವಟಿಕೆಯಿಂದಿರುವುದಾಗಿಯೂ, ಅವುಗಳು ತನ್ನ ಜೀವನವನ್ನು ಪ್ರಭಾವಿಸಿ, ತಾನು ನೆನೆಯದಂತಹ ಪರಿಣಾಮಗಳನ್ನುಂಟು ಮಾಡಲು ಶಕ್ತವಾಗಿರುವುದಾಗಿಯೂ ತಿಳಿದಿದ್ದನು. ಹೀಗಾಗಿಯೇ ಆ ಶಕ್ತಿಗಳ, ತತ್ತ್ವಗಳ ದಯೆಯನ್ನು, ಕೃಪೆಯನ್ನು ಬಯಸಿ, ಅವುಗಳನ್ನು ತೃಪ್ತಿಗೊಳಿಸಿ, ಅವುಗಳ ಮೂಲಕ ತನ್ನ ಜೀವನವನ್ನು ಸುಗಮಗೊಳಿಸಿಕೊಳ್ಳಲು, ತಕ್ಕ ವಿಧಿ ವಿಧಾನಗಳನ್ನು ಅನ್ವೇಷಿಸತೊಡಗಿದ. ಲೋಕದಲ್ಲಿ ತಾನು ಇರುವುದೆಂದು ಭಾವಿಸಿದ ಪ್ರಾಕೃತಿಕ ಶಕ್ತಿಗಳನ್ನು ಪ್ರಾರ್ಥನೆಯ ಮೂಲಕ, ಸ್ತುತಿಯ ಮೂಲಕ, ಆರಾಧನೆಯ ಮೂಲಕ ಒಲಿಸಿಕೊಂಡು ತನಗೆ ಉಂಟಾಗಬಹುದಾದ ಉಪದ್ರವಗಳನ್ನು ನಿವಾರಿಸಿಕೊಳ್ಳಲೂ, ಸಂಪತ್ತು, ಸಂತಸಗಳನ್ನು ಹೆಚ್ಚಿಸಿಕೊಳ್ಳಲೂ ಬಯಸಿದ. ಹೀಗಾಗಿ ಗಿಡಮರ ಬಳ್ಳಿಗಳನ್ನೂ ಗಿರಿ, ವನ, ನದಿಗಳನ್ನೂ, ಭೂಮಿ, ಚಂದ್ರ, ಸೂರ್ಯ, ಅಗ್ನಿ, ಮಳೆಗಳನ್ನೂ ಆರಾಧಿಸಿ, ಅವುಗಳಿಗೆ ತನಗೆ ಪ್ರಿಯವಾದ ವಸ್ತುಗಳನ್ನು ನಿವೇದಿಸಿ, ಒಂದು ಪೂಜಾ ಪದ್ಧತಿಯನ್ನು-ಆರಾಧನಾ ವಿಧಾನವನ್ನು ಉಂಟುಮಾಡಿಕೊಂಡ. ಮನುಷ್ಯನ ಸಂಘಜೀವನದ ಬೆಳವಣಿಗೆ ಆದಂತೆ, ಸಾಮಾಜಿಕ ಕಟ್ಟಳೆಗಳು ಹೆಚ್ಚಾದಂತೆ, ಅವನ ಅರಿವಿನ ಪರಿಧಿ ವಿಸ್ತರಿಸಿದಂತೆ, ಹಲವು ಹನ್ನೊಂದು ಪೂಜಾ ಪದ್ಧತಿಗಳು ಬೆಳೆದವು. ದೇವರ ಬಗ್ಗೆ ಮನುಷ್ಯನ ವಿಚಾರಗಳೂ ಮಥನ ಹೊಂದಿ ಸ್ಪಷ್ಟ, ಖಚಿತ ರೇಖೆಗಳನ್ನು, ವರ್ಣಗಳನ್ನು, ರೂಪಗಳನ್ನು ತಳೆಯತೊಡಗಿದವು.

## ಸಿಂಧೂ ಸಂಸ್ಕೃತಿ

ಜಗತ್ತಿನ ವಿವಿಧ ಭಾಗಗಳಲ್ಲಿ ಬೇರೆ ಬೇರೆ ಜನಾಂಗಗಳು ತಮ್ಮದೇ ಆದ ಸಾಮಾಜಿಕ ಜೀವನವನ್ನು ರೂಪಿಸಿಕೊಳ್ಳುತ್ತ ನಡೆದಂತೆ ಅವುಗಳನ್ನು ಆಯಾಯಾ ಪ್ರದೇಶದ ಜೀವನ ಪದ್ಧತಿಗಳನ್ನು ಅಧ್ಯಯನಾನುಕೂಲಿಯಾಗಿ ಹೆಸರಿಸಲಾಯಿತು. ಭಾರತದಲ್ಲಿ ಸಿಂಧೂ ನದಿಯ ಸುತ್ತಮುತ್ತಲಲ್ಲಿ ಜೀವನ ಪಲ್ಲವಿಸಿದ್ದುದನ್ನು ಸಿಂಧೂ ಸಂಸ್ಕೃತಿಯೆಂದು ಗುರುತಿಸಲಾಯಿತು. ಇಪ್ಪತ್ತನೆಯ ಶತಮಾನದ ಮೊದಲ ಭಾಗದಲ್ಲಿನವರೆಗೆ ಇಂತಹ ಒಂದು ಸಂಸ್ಕೃತಿಯ ಇರುವಿಕೆಯೇ ತಿಳಿದಿರಲಿಲ್ಲವಾಗಿ, ಭಾರತದ ಜನಜೀವನವನ್ನು ಅಧ್ಯಯನ ಮಾಡಲು ಗಂಗಾ-ಯಮುನಾ ನದಿಯ ದಡಗಳಲ್ಲಿ ವಿಕಸಿತವಾದ ವೇದಕಾಲೀನ ಸಮಾಜವನ್ನೇ ಪ್ರಾಚೀನವೆನ್ನಲಾಗುತ್ತಿದ್ದಿತು. ಇಲ್ಲಿಯೂ- ಇಲ್ಲಿನ ಕೃಷಿ ಆಧಾರಿತ ಸಮಾಜದ ಕಾರಣಕರ್ತರಾದ ಆರ್ಯರನ್ನು ಭಾರತದಿಂದ ಹೊರಗಡೆಯವರೆಂದು ಗುರುತಿಸುತ್ತ ನಡೆಯಲಾಗಿದ್ದಿತು. ಹೊಸ ಹೊಸ ಆಧಾರಗಳಿಂದ ಆರ್ಯರೂ ಭಾರತದ ಮೂಲನಿವಾಸಿಗಳೇ ಎಂಬ ವಾದ ಬೆಳೆಯುತೊಡಗಿದಾಗಲೇ, ಸಿಂಧೂ ಕೊಳ್ಳದ ಹರಪ್ಪ, ಮೊಹಂಜೋದಾರೋಗಳ ಉತ್ಖನನಗಳು ನಡೆದು ಭಾರತದಲ್ಲಿಯೂ ಪ್ರಾಚೀನ ಸಂಸ್ಕೃತಿಯ ವಿಕಸನದ ವಿವರ

ತಿಳಿದಂತೆ ಆಯಿತು. ಅಷ್ಟೇ ಅಲ್ಲದೆ ಇಲ್ಲಿನ ದೈವಕಲ್ಪನೆ, ಪೂಜಾ ಪದ್ಧತಿಗಳು ವೇದಕಾಲೀನ ಪೂಜಾ ಪದ್ಧತಿ, ದೈವ ಕಲ್ಪನೆಗಳಿಗೆ ಪೂರ್ತಿ ಬೇರೆಯಾಗದೆ ಅವುಗಳ ಮೂಲ ರೂಪವೆಂಬಂತಿದ್ದವು ಎಂಬುದು ಮುಖ್ಯವಾಗುತ್ತದೆ. ಪಶುಪತಿ ಶಿವ, ನರಮೃಗಗಳು ಆರಾಧನೆಯ ವಸ್ತುಗಳಾಗಿದ್ದವು ಎಂಬುದಿಲ್ಲಿ ಗಮನಾರ್ಹ. ವೇದಕಾಲೀನ ದೇವತೆಗಳ ಆರಾಧನೆಯ ರೀತಿಯ ಪ್ರಾರ್ಥನೆ, ಸ್ತುತಿಗಳು ನಮಗೆ ದೊರೆತಿಲ್ಲವಾದರೂ, ಸಗುಣ ದೇವತಾರಾಧನೆಯು ಇದ್ದಿತೆಂಬುದೂ, ಆ ಕಾಲದ ಹಾಗೂ ಅದರ ಹಿಂದು ಮುಂದಿನ ಸಾವಿರ ವರ್ಷಗಳಲ್ಲಿ ಜಗತ್ತಿನ ಇತರ ನಾಗರಿಕತೆಗಳಲ್ಲಿಯೂ ಇಂತಹವೇ ಆದ ಜಾನಪದೀಯ ದೈವತಗಳ, ಪ್ರಕೃತಿಯಲ್ಲಿ ಸಹಜವಾಗಿ ಕಾಣಿಸಿಕೊಳ್ಳುವ ಶಕ್ತಿಗಳಿಗಿಂತ ಬೇರೆಯಾದ, ಆದರೆ ಹೆಚ್ಚು ಶಾಸ್ತ್ರೀಯ ಆಧಾರ ಬಯಸದ ರೂಪಗಳು ಕಂಡುಬರುತ್ತವೆ ಎಂಬುದೂ ನಿಜ. ಸಿಂಧೂ ಕೊಳ್ಳದಲ್ಲಿನ (ನರಮೃಗ) ಮಹಿಷ ಮುಖದ ಮೂರ್ತಿಗಳೆ ಅಮೆರಿಕಾದ ಪ್ರಾಚೀನ ನಾಗರಿಕತೆಗಳಲ್ಲಿಯೂ ಕಾಣಬಹುದೆಂಬುದು ಇಲ್ಲಿ ಉಲ್ಲೇಖನೀಯ. ಇಂದು ನಾವು ದೇಶದ ಉದ್ದಗಲಕ್ಕೆ ಅಸಂಖ್ಯಾತವಾಗಿ ಕಾಣುವ ದೇಗುಲಗಳನ್ನು ಸಿಂಧೂ ಕೊಳ್ಳದ ನಾಗರಿಕತೆಯಲ್ಲಿ ಕಾಣಲಾರೆವು. ಹಾಗೆ ನೋಡಿದರೆ ಆರ್ಯರದ್ದೆನ್ನುವ ವೇದಕಾಲೀನ ಸಂಸ್ಕೃತಿಯಲ್ಲಿಯೂ ಗುಡಿದೇಗುಲಗಳ ವಿವರಗಳಿಲ್ಲ. ದೇವರು ಇದ್ದರೂ ದೇವಾಲಯ ನಮ್ಮವರೆಗೆ ಬಂದಿಲ್ಲವೆಂಬುದು ಒಂದು ಮಾತಾದರೆ ದೇವಾಲಯಗಳೇ ಅಗತ್ಯವಿರದೆ ಬಯಲೇ ಆಲಯವಾಗಿದ್ದಿರಬೇಕು ಎಂಬುದು ಇತರ ಸಮಕಾಲೀನ ನಾಗರಿಕತೆಗಳ ಅಧ್ಯಯನದಿಂದಲೂ ಸ್ಪಷ್ಟವಾಗುತ್ತದೆ. ಆದರೆ ಪೂಜಾ ವಿಧಾನ ಮಾತ್ರ ಪ್ರಸ್ಫುಟಗೊಳ್ಳುತ್ತ, ಬೆಳೆಯುತ್ತ, ಹೆಚ್ಚು ಹೆಚ್ಚು ಅರ್ಥವಂತಿಕೆಯನ್ನು ಪಡೆಯುತ್ತ ನಡೆದಿತ್ತು ಎನ್ನುವುದು ವೈದಿಕ ಸಾಹಿತ್ಯದ ಸಾಮಗಾನದ ಗುಂಜನದಲ್ಲಿ, ಪ್ರಾರ್ಥನೆಯ ಪದ್ಯಗಳಲ್ಲಿ, ಮಂತ್ರಗಳ ಮಾಂತ್ರಿಕ ಆಕರ್ಷಣೆಯಲ್ಲಿ ಮನದಟ್ಟಾಗುತ್ತದೆ.

## ವೈದಿಕ ಸಾಹಿತ್ಯ

ಆರ್ಯರು ದ್ರಷ್ಟಾರರಾಗಿ ಅಕ್ಷರ ರೂಪಕ್ಕಿಳಿಸಿದ ವೈದಿಕ ಸಾಹಿತ್ಯಕ್ಕೆ ಜಗತ್ತಿನ ಜಿಜ್ಞಾಸಾ ಸಾಹಿತ್ಯದಲ್ಲಿ ಅಪಾರವಾದ ಮನ್ನಣೆಯಿದೆ. ಜಗತ್ತು ಬಾಲ್ಯದಲ್ಲಿದ್ದಾಗ ಭಾರತ ಪ್ರೌಢ ಜಿಜ್ಞಾಸೆ, ಮಿಮಾಂಸೆಯ ಹಾದಿಯಲ್ಲಿ ಮುಂದುವರೆಯುತ್ತಿದ್ದಿತೆಂಬುದು ಇಲ್ಲಿನ ಸಂಭಾಷಣೆಗಳಿಂದಲೂ, ಸ್ತೋತ್ರಗಳಿಂದಲೂ ವರ್ಣನೆಗಳಿಂದಲೂ ತಿಳಿಯುತ್ತದೆ. ದೇವತೆಗಳ ಆರಾಧನೆಯಲ್ಲಿ ಅಗ್ನಿಯನ್ನು ರಾಯಭಾರಿಯನ್ನಾಗಿ ಬಳಸಿದರು. ಇಂದ್ರ, ವರುಣ, ವಾಯು, ರುದ್ರರನ್ನು ಕಂಡುಕೊಂಡರು. ಯಜ್ಞವನ್ನು ಮಾಡುತ್ತ, ತಮಗೆ ಪ್ರಿಯವಾದ ವಸ್ತುಗಳನ್ನು ದೇವತೆಗಳಿಗೆ ಅರ್ಪಿಸುತ್ತ, ಅವರ ಅನುಗ್ರಹವನ್ನು ಪಡೆಯಲು ಯತ್ನಿಸಿದರು. "ಯಜ್ಞೇನ ಯಜ್ಞಮಯಜಂತ ದೇವಾಃ-" ಎಂಬ ಋಗ್ವೇದದ ಪುರುಷ ಸೂಕ್ತದ ಮಾತಿಗೆ ಮನ್ನಣೆ ದೊರೆಯಿತು. ಯಜ್ಞದ ಮೇಲ್ಪಂಕ್ತಿ ಹಾಕಿ ಕೊಟ್ಟವರು ದೇವತೆಗಳೆಂದೇ ಅವರು ತಿಳಿದರು. ಅಸಂಖ್ಯಾತವಾದ ಯಜ್ಞವೇದಿಗಳು ಹುಟ್ಟಿಕೊಂಡವು. ದಿನನಿತ್ಯ ಯಜ್ಞದ ಕಾರ್ಯಕ್ರಮ

ಮುಂದುವರೆದು, ಇಂದೂ ಸಹ ಅನೇಕ ಕಡೆಗಳಲ್ಲಿ ಈ ಯಜ್ಞವೇದಿಗಳ ಅವಶೇಷಗಳನ್ನು ಕಾಣಬಹುದಾದಷ್ಟು ಹೆಚ್ಚಿನ ಪ್ರಾಚುರ್ಯ ಪಡೆಯಿತು. 'ಯಜ್ಞ ಧೂಮದಿಂದ ಆಕಾಶವೆಲ್ಲ ತುಂಬಿ ಕೀರ್ತಿ ಕಪ್ಪಾಯಿತಂತೆ' ಎಂಬುದು ಅಂದಿನಿಂದ ಸಾವಿರಾರು ವರ್ಷಗಳಾದ ನಂತರವೂ ಯಜ್ಞ ಪ್ರಸ್ತುತವೂ, ಪ್ರಚಲಿತವೂ ಆಗಿತ್ತೆನ್ನಲು ಹೇಳುವ ಕವಿಸಾಕ್ಷಿ.

ಭಗವಂತನ ಸೇವೆಯನ್ನು ಮಾಡುವ ಉದ್ದೇಶದಿಂದ, ಮನಸ್ಸಿನ ರಾಗ ದ್ವೇಷಾದಿಗಳನ್ನು ತೊರೆದು ಮಾಡುವ ಕಾರ್ಯಗಳೆಲ್ಲವನ್ನೂ ಯಜ್ಞವೆಂದು ಕರೆಯಲಾಗಿದೆ. ಇದರಿಂದ ಸ್ವಧರ್ಮದ ಆಚರಣೆ ಆಗುವುದಲ್ಲದೆ ಪರಮಾತ್ಮನ ಸ್ಮರಣೆಯೂ ಸಾಧ್ಯ. ಇದರ ವಿವರಗಳನ್ನು ಭಗವಂತನೇ ವಿವರಿಸಿದ್ದಾನೆ.

*ದ್ರವ್ಯಯಜ್ಞಾಸ್ತಪೋ ಯಜ್ಞಾ ಯೋಗ ಯಜ್ಞಾಸ್ತಥಾಪರೇ /*
*ಸ್ವಾಧ್ಯಾಯ ಜ್ಞಾನ ಯಜ್ಞಾಶ್ಚ ಯತಯಃ ಸಂಶಿತ ವ್ರತಾಃ //*

ಇಂತಹ ವಿವಿಧ ರೀತಿಯ ಯಜ್ಞಗಳನ್ನು ಮಾಡುವುದರಿಂದ ದೇವತೆಗಳು ಪ್ರೀತ ರಾಗುತ್ತಾರೆ. ಆದರಿಂದ ದೇವತೆಗಳು ನಿಮ್ಮನ್ನು ಅನುಗ್ರಹಿಸುತ್ತಾರೆ ಎಂದೂ ಹೇಳಲಾಗಿದೆ.

ಯಜ್ಞದ ಪರಿಕಲ್ಪನೆಯು ಚಿಂತನಶೀಲವಾದದ್ದು. ಪ್ರಾಚೀನ ವಿಧಿ-ವಿಧಾನಗಳಿಗೆ ಸೇರಿದ ಈ ಪವಿತ್ರ ಕಾರ್ಯವನ್ನು ನಮ್ಮ ಪೂರ್ವಜರು ನಡೆಸಿಕೊಂಡು ಬಂದರು. ಇಲ್ಲಿ ಸರ್ವದೇವತಾತ್ಮಕವಾದ ಸಂಬಂಧಗಳುಂಟು. ಯಾಗಾದಿಗಳಿಂದ ಲೋಕ ಕಲ್ಯಾಣವಾಗುತ್ತದೆ. ಪ್ರಸ್ತುತ ಸಂದರ್ಭದಲ್ಲಿ ನೋಡುವುದಾದರೆ ಹಿರಣ್ಯ ಕಶ್ಯಪನಲ್ಲಿ ಕಾಣುವ ಯಜ್ಞ ಪಶು ವಿನಂತಿದ್ದ ಪಶುತ್ವದ ವಧೆಗೆ ನರಸಿಂಹಾವತಾರವೇ ಸಾಧನವಾದದ್ದು, ಸೂಕ್ತವಾದದ್ದು-ಎಂದು ಹೇಳಬೇಕು.

## ದಶಾವತಾರ

ದೇವರು ಒಳ್ಳೆಯದನ್ನು ಒಳ್ಳೆಯವರನ್ನು ರಕ್ಷಿಸುತ್ತಾನೆ. ಕೆಟ್ಟವರನ್ನು ಕೆಟ್ಟದ್ದನ್ನು ನಾಶ ಮಾಡುತ್ತಾನೆ ಎಂಬುದು ಪರಂಪರೆಯ ನಂಬಿಕೆ. ಅದಕ್ಕಾಗಿಯೇ ವಿವಿಧ ಅವತಾರಗಳನ್ನು ತಾಳಿ ಭೂಮಿಗಿಳಿದು ಬರುವನೆಂದು ಹೇಳಿದರು. ಎಲ್ಲ ರೀತಿಯ ಅವತಾರಗಳೂ ಉಂಟು. ಮೀನಾಗಿ, ಆಮೆಯಾಗಿ, ವರಾಹವಾಗಿ ಎಂದು-ಇಂತಹದೇ ರೂಪ ತಳೆಯಬೇಕೆಂ ದಿಲ್ಲ. ಸಾವಿರಾರು ರೂಪಗಳು ಇದ್ದರೂ ಹತ್ತು ಅವತಾರಗಳನ್ನು ಪ್ರಧಾನವಾಗಿ ಪರಿಗಣಿ ಸಿದರು.

*ಮತ್ಸ್ಯ ಕೂರ್ಮೋ ವರಾಹಶ್ಚ ನರಸಿಂಹೋ ಅಥ ವಾಮನಃ /*
*ರಾಮೋ ರಾಮಶ್ಚ ಕೃಷ್ಣಶ್ಚ ಬುದ್ಧಃ ಕಲ್ಕೀ ಚ ತೇ ದಶಃ //*

ಈ ಹತ್ತು ಅವತಾರಗಳನ್ನು ಹಲವು ಹನ್ನೊಂದು ರೀತಿಯಲ್ಲಿ ಹಾಡಿ, ಹೊಗಳಿ, ಚಿತ್ರಿಸಿ, ರೂಪಿಸಿ, ಕಣ್ಣ ಮುಂದೆ ಕಟ್ಟಿಕೊಡಲಾಗಿದೆ. ಇಲ್ಲಿನ ಪ್ರತಿಯೊಂದು ಅವತಾರವೂ

ಶಿಷ್ಟರಕ್ಷಣ ದುಷ್ಟಶಿಕ್ಷಣಕ್ಕೆ ಹೆಸರು ಪಡೆದದ್ದೇ. ಕೃಷ್ಣಾವತಾರ ಕಾಲದಲ್ಲಿ ತತ್ತ್ವಶಾಸ್ತ್ರ ರಹಸ್ಯವನ್ನು-ಜೀವನ ಧರ್ಮಯೋಗವನ್ನು- ಅರ್ಜುನನಿಗೆ ಉಪದೇಶ ಮಾಡುತ್ತ ಶ್ರೀಕೃಷ್ಣ ತಾನೇ ಘೋಷಿಸುತ್ತಾನೆ.

*ಯದಾ ಯದಾಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ /*
*ಅಭ್ಯುತ್ಥಾನಮಧರ್ಮಸ್ಯ ತದಾತ್ಮಾನಂ ಸೃಜಾಮ್ಯಹಮ್ //*

ಇಲ್ಲಿ ಅವತಾರದಲ್ಲಿ ಬೆಳವಣಿಗೆಯ ಆರೋಹಣ ಕ್ರಮವನ್ನು ಗುರುತಿಸುವುದು ಸ್ವಾರಸ್ಯಕರ. ಜಲಚರ, ಉಭಯಚರ, ಭೂಚರಗಳಾಗಿ ಅವತಾರಾನುಕ್ರಮಣಿಕೆ ಆಗಿರುವುದನ್ನು ಗಮನಿಸಿದರೆ ವಿಕಾಸವಾದಕ್ಕೆ ಇಂಬುಗೊಡುವಂತೆ ಆಗುವುದಷ್ಟೇ ಅಲ್ಲ ಬೌದ್ಧಿಕ ವಿಕಾಸದ ಗುರುತುಗಳನ್ನೂ ಕಾಣಬಹುದಾಗಿದೆ. ಜೊತೆಗೇ ಅವತಾರಗಳ ಸ್ವರೂಪ ಅವಧಿಗಳು. ರಾಮಕೃಷ್ಣಾವತಾರಗಳು ಪೂರ್ಣಾವತಾರಗಳಾಗಿ ಗುರುತಿಸಲ್ಪಟ್ಟಿದ್ದು, ವಾಮನಾವತಾರ ದಿಂದಲೂ ಮಾತುಕತೆ ಸಾಹಿತ್ಯಗಳು ಹೆಚ್ಚಾಗುತ್ತವೆಯಾದರೂ ಮೊದಲವತಾರಗಳಲ್ಲಿ ಕ್ರಿಯೆ ಮುಖ್ಯವೇ ಹೊರತು ಅದರ ಹಿನ್ನೆಲೆಯ ಬೆಳವಣಿಗೆಯಲ್ಲವಾಗಿ, ಇಲ್ಲೆಲ್ಲ ಅವ ತಾರದ ಅವಧಿ ಕಡಮೆಯೆನ್ನಬೇಕು. ಸಮುದ್ರವನ್ನು ಕಡೆಯುವ ಅಮೃತವನ್ನು ಪಡೆಯುವ ದೇವಾಸುರ ಪ್ರಯತ್ನದ ಹಿನ್ನೆಲೆಯಲ್ಲಿ ಕೂರ್ಮಕಾಲ ವ್ಯವಧಿ ದೀರ್ಘವೆನ್ನಿಸಬಹುದಾದರೂ ಅದೊಂದು ರೀತಿಯ ನೈಷ್ಕರ್ಮ್ಯವೆಂದು ಹೇಳಬಹುದಾದ ಸ್ತಬ್ಧಕ್ರಿಯೆಯದಾಗಿರುತ್ತದೆ ಎಂಬುದು ಮುಖ್ಯ. ಹೀಗಾಗಿ ಅವತಾರ ವಿವರಗಳಲ್ಲಿ ಕಾಲ-ದೇಶ-ಕಾರಣಗಳ ಸೀಮೆಗಳನ್ನು ಗುರುತಿಸಬಹುದಾಗಿದೆ.

## ಪುರಾಣ ಪ್ರಪಂಚ

ಅವತಾರ ರಹಸ್ಯಗಳನ್ನು, ವಿವರಗಳನ್ನು, ಸೂಕ್ಷ್ಮಗಳನ್ನು ವಿವರಿಸಲೆಂದೇ ಪುರಾಣ ಸಾಹಿತ್ಯವೂ ಸೃಷ್ಟಿಯಾಗಿದೆ. ರಾಮ-ಕೃಷ್ಣರುಗಳ ಪೂರ್ಣಾವತಾರಗಳನ್ನು ರಾಮಾಯಣ, ಮಹಾಭಾರತಗಳು ಚಿತ್ರಿಸಿವೆ. ಅಂತೆಯೇ ಮತ್ಸ್ಯಪುರಾಣ, ಕೂರ್ಮ ಪುರಾಣ, ವಾಮನ ಪುರಾಣ, ವರಾಹ ಪುರಾಣ, ನರಸಿಂಹ ಪುರಾಣಗಳು ಆಯಾ ಅವತಾರ ವಿವರಗಳನ್ನೂ ಚಿತ್ರಿಸಿವೆ. ಭಗವಂತನ ವಿವಿಧ ಲೀಲಾ ವಿನೋದಗಳನ್ನು ಚಿತ್ರಿಸುವುದೇ ಪುರಾಣಗಳ ಉದ್ದೇಶವಾದರೂ, ಪಂಚ ಲಕ್ಷಣಗಳಿಂದ ಕೂಡಿರಬೇಕು ಪುರಾಣವೆಂಬ ಸ್ಥೂಲ ಲಕ್ಷಣ ದಿಂದಾಗಿ ಸರ್ಗ, ಪ್ರತಿಸರ್ಗ, ವಂಶವರ್ಣನೆ, ಮನ್ವಂತರ ವರ್ಣನೆ, ವಂಶಗಳ ಚರಿತ್ರೆಗಳಿಗೆ ಪ್ರಾಧಾನ್ಯವೆಂದಾಯಿತು. ಹದಿನೆಂಟು ಪುರಾಣಗಳೂ, ನೂರಕ್ಕೂಮೀರಿದ ಉಪಪುರಾಣಗಳೂ ಸೃಷ್ಟಿಯಾದವು. ಅವುಗಳಲ್ಲಿ ಭಾಗವತ ಪುರಾಣವಂತೂ ಭಗವಂತನ ಅವತಾರಗಳ ವಿವ ರಣೆ ನೀಡಲೆಂದೇ ಉಂಟಾದದ್ದು ಎಂದು ಹೇಳಲಾಗಿದೆ. ವೇದಗಳನ್ನು ವಿಂಗಡಿಸಿ ಭಾರತವನ್ನು ಹೇಳಿ ಬರೆಯಿಸಿದರೂ ವ್ಯಾಸರ ಮನಸ್ಸಿಗೆ ಯಾವುದೋ ಮುಜುಗರ. ಒಂದು ಅತೃಪ್ತ ಭಾವ. ತಮ್ಮ ತೊಳಲಾಟವನ್ನವರು ನಾರದರಿಗೆ ತಿಳಿಸಿದಾಗ ನಾರದರ

ಮಾತಿನಂತೆ ಹರಿಯವತಾರ ವರ್ಣನಾ ಕಾವ್ಯವಾದ ಭಾಗವತದ ರಚನೆ ಮಾಡಿದರಂತೆ. ಹನ್ನೆರಡು ಸ್ಕಂಧಗಳ ಈ ಗ್ರಂಥದಲ್ಲಿ ವಿಷ್ಣುವಿನ ಹತ್ತು ಅವತಾರದ-ಅದರಲ್ಲಿಯೂ ಹೆಚ್ಚಿನ ಭಾಗದಲ್ಲಿ ಕೃಷ್ಣಾವತಾರದ ವಿವರಗಳಿವೆ. ವಿಷ್ಣು ಪುರಾಣ ಇನ್ನೊಂದು ಅವತಾರ ವಿವರದ ಗ್ರಂಥ. ವೇದಗಳಲ್ಲಿ ಪುರುಷಸೂಕ್ತದಂತೆ, ಧರ್ಮಶಾಸ್ತ್ರಗಳಲ್ಲಿ ಮನುಧರ್ಮ ಶಾಸ್ತ್ರದಂತೆ, ಭಾರತದಲ್ಲಿ ಗೀತೆಯಂತೆ, ಪುರಾಣಗಳಲ್ಲಿ ವಿಷ್ಣು ಪುರಾಣ ಎಂಬ ಪ್ರಶಸ್ತಿಯಿದೆ. ಹದಿನೆಂಟು ಪುರಾಣಗಳು ಎಂದು ಹೆಸರಾಗಿ ಅವುಗಳಲ್ಲಿ ಕೆಲವು ಹರಿಯವತಾರಗಳನ್ನೇ ಹೆಸರುಗಳಾಗಿ ಹೊಂದಿದ್ದರೂ- ವಿಷ್ಣು ಪುರಾಣ, ಭಾಗವತ ಪುರಾಣಗಳಾದ ಮೇಲೆ ಮತ್ಸ್ಯ, ಕೂರ್ಮ, ವರಾಹ, ವಾಮನ ಹೆಸರುಗಳಿವೆಯಾದರೂ- ನಾರದೀಯ, ನಾರಸಿಂಹ ಮೊದಲಾದವು ಉಪಪುರಾಣಗಳ ಸಾಲಿನಲ್ಲಿ ಬರುತ್ತವೆ. ಹೀಗಾಗಿ ದಶಾವತಾರಗಳ ವಿವರಗಳನ್ನು ಉಪ ಪುರಾಣಗಳಲ್ಲಿಯೂ ಕಾಣಬಹುದು.

ವೇದೋಪನಿಷತ್ತುಗಳಿಗೂ, ರಾಮಾಯಣ, ಭಾರತಗಳಿಗೂ ಅವುಗಳ ರಚನಾ ಕಾಲದ ಬಗ್ಗೆ "ಇದಮಿತ್ಥಂ" ಎಂದು ಹೇಳಬಹುದಾದ ಒಂದು ಕಾಲದ ಗುರುತುಗಳು ಕಂಡು ಬರುವುದಿಲ್ಲವಾದರೂ ಪುರಾಣಗಳು ಅವುಗಳಿಂದ ಈಚಿನ ಕಾಲದಲ್ಲಿ ಎಂದರೆ ಇತಿಹಾಸದ ಕಾಲಕ್ಕೆ ಬಂದು ಕ್ರಿಸ್ತಶಕದ ಆದಿಯ ಶತಕಗಳಲ್ಲಿ ರಚನೆಯಾಗಿರಬೇಕು. ಇವುಗಳ ಕಾಲವೂ ಬಹುದೀರ್ಘವಾದುದು. ಒಟ್ಟಿನಲ್ಲಿ ಉಪಪುರಾಣಗಳಲ್ಲಿ ನಾರಸಿಂಹ ಪುರಾಣವನ್ನು ಪ್ರಾಚೀನತಮ ಪುರಾಣವೆಂದು, ಭವಿಷ್ಯ ಪುರಾಣ ತೀರ ಇತ್ತೀಚಿನದೆಂದು ಹೇಳಲಾಗಿದೆ.

## ನರಸಿಂಹಾವತಾರ

ಹರಿಯವತಾರಗಳಲ್ಲಿ ನಮ್ಮ ಮುಂದೆ ಮಾನವ ರೂಪದಲ್ಲಿ ಕಂಡು ಬರುವ ಅವತಾರಗಳೆಂದರೆ ವಾಮನ, ಪರಶುರಾಮ, ರಾಮ, ಕೃಷ್ಣ ಹಾಗೂ ಬುದ್ಧ ಮತ್ತು ಕಲ್ಕಿ ಇವರ ಜೀವನ ಚರಿತ್ರೆಗಳು, ಚಿತ್ರಗಳು ನಮ್ಮ ಮುಂದೆ ಸಹಜವಾದ ರೂಪದಲ್ಲಿ ಸಾಹಿತ್ಯದ ಮೂಲಕವಾಗಿ ಆದರ್ಶದ ಬದುಕಿನಂತೆ ಕಂಡು ಬರುತ್ತವೆ. ಕಾಲದ ದೃಷ್ಟಿಯಿಂದ ನಾವು ಈ ಅವತಾರಗಳಿಗೆ ಸಮೀಪವಾಗಿವೆಯೋ ಒಟ್ಟಿನಲ್ಲಿ ಈ ದ್ವಿತೀಯಾರ್ಧದ ಅವತಾರಗಳು ಮೊದಲ ಐದು ಅವತಾರಗಳಿಗಿಂತ ಬೇರೆಯಾದದ್ದು.

ವಾಮನನಲ್ಲಿ- ಕುಬ್ಜರೂಪದಲ್ಲಿ - ತ್ರಿವಿಕ್ರಮನ ಅಗಾಧ ಪ್ರಮಾಣದ ಬೀಜವನ್ನು ಕಾಣಬಹುದಾದರೆ ಪರಶುರಾಮನಲ್ಲಿ ಪರಾಕ್ರಮ ಹಾಗೂ ಪರಿಭ್ರಮಣಗಳಿವೆ. ರಾಮನಲ್ಲಿ ಪಿತೃವಾಕ್ಯ ಪರಿಪಾಲನೆಯ ಆದರ್ಶವನ್ನು, ಮರ್ಯಾದಾ ಪುರುಷೋತ್ತಮತ್ವವನ್ನು, ಆದರ್ಶದ ಪಾಠವನ್ನು ಕಾಣುವಂತೆ ಇದ್ದರೆ ಕೃಷ್ಣನ ಕೌಟಿಲ್ಯ-ಸಂದರ್ಭಕ್ಕೆ ತಕ್ಕ ಆಗತ್ಯವನ್ನು -ಬೋಧಿಸುವಂತಿದೆ. ಬುದ್ಧನ ಧೀರ ಗಾಂಭೀರ್ಯಗಳು ಪ್ರತ್ಯೇಕವಾಗಿಯೇ ಎದ್ದು ನಿಲ್ಲುತ್ತವೆ.

ದಶಾವತಾರಗಳಲ್ಲಿ ವಿಶೇಷವಾಗಿ ಪೂಜೆ ಸಲ್ಲುತ್ತಿರುವುದು ರಾಮ ಮತ್ತು ಕೃಷ್ಣರಿಗೆ ಎಂದು ಹೇಳಬಹುದು. ಈ ಆರಾಧ್ಯ ಮೂರ್ತಿಗಳಿಗಾಗಿ ಹಲವು ಹನ್ನೊಂದು ವಿಧದ ಆಲಯಗಳನ್ನು ನಿರ್ಮಿಸಲಾಗಿದೆ. ಇವರ ನಂತರದ ಸ್ಥಾನದಲ್ಲಿ ನರಸಿಂಹಾವತಾರವಿದೆ. ರಾಮನವಮಿ, ಕೃಷ್ಣಜಯಂತಿಗಳಂತೆ ನರಸಿಂಹ ಜಯಂತಿಯೂ ಆಚರಣೆಯಲ್ಲಿರುವುದಾಗಿದೆ. ಇವರ ನಂತರದ ಸ್ಥಾನದಲ್ಲಿ ವರಾಹ ದೇವಾಲಯಗಳು ವಿರಳವಾಗಿದ್ದರೂ ವಿಶೇಷ ಆದರಕ್ಕೆ ಪಾತ್ರವಾದ ಅವತಾರವಾಗಿದೆ. ನಮ್ಮ ಆಳರಸರು ತಾವು ಹೊರತಂದ ನಾಣ್ಯಗಳಲ್ಲಿ ವರಾಹನ ಚಿತ್ರವನ್ನು ಬಳಸಿ ವರಾಹ ಲಾಂಛನವನ್ನು ತಮ್ಮ ಅಧಿಕೃತ ರಾಜಮುದ್ರೆಯಾಗಿ ಬಳಸಿ ಗೌರವ ನೀಡಿರುತ್ತಾರೆ. ವಿವಿಧ ದೇವಾಲಯಗಳಲ್ಲಿ ವರಾಹಶಿಲ್ಪಗಳಿರುವುದೇ ಅಲ್ಲದೆ ನರಸಿಂಹ ಅವತಾರವನ್ನೂ ವರಾಹಾವತಾರದೊಡನೆ ಸೇರಿಸಿ ವರಾಹ ನರಸಿಂಹ ಎಂಬ ಜೋಡಿ ಪದವನ್ನೂ ಅದೇ ಹೆಸರಿನ ದೇವತಾ ರೂಪವನ್ನೂ ಪೂಜೆ ಮಾಡುವುದಿದೆ.

ಇಲ್ಲಿ ಅವತಾರಗಳೆರಡರ ಹಿನ್ನೆಲೆಯ ಹತ್ತಿರದ ಸಂಬಂಧವನ್ನು ಗುರುತಿಸಬಹುದಾಗಿದೆ. ಹಿರಣ್ಯಾಕ್ಷ-ಹಿರಣ್ಯಕಶಿಪುಗಳು ಸೋದರರು. ಒಂದೇ ರೀತಿಯ ತಾಮಸ ಗುಣ ಹೊಂದಿದವರು. ಹಿರಣ್ಯಾಕ್ಷನು ಭೂಮಿಯನ್ನು ಚಾಪೆಯಂತೆ ಗುಡಿಸಿ ಪಾತಾಳಕ್ಕೊಯ್ದಾಗ ಸ್ವಾಮಿ ವರಾಹಾವತಾರದಿಂದ ಜಗದೋದ್ಧಾರಣ ಮಾಡಿದ. ನಂತರ ಹಿರಣ್ಯಕಶ್ಯಪನ ವಧಾರ್ಥವಾಗಿ ಉಂಟಾದದ್ದು ನರಸಿಂಹಾವತಾರ. ಹೀಗಾಗಿ ಕಾಲೈಕ್ಯ ಕ್ರಿಯೈಕ್ಯ ಗಮ್ಯೈಕ್ಯಗಳನ್ನು ಕಾಣುವಂತಾಗಿ "ವರಾಹ ನರಸಿಂಹ" ಎಂಬ ಸಮಸ್ತ ಪದ ಅರ್ಥಪೂರ್ಣವಾಗುತ್ತದೆ.

ದಶಾವತಾರಗಳಲ್ಲಿ ನಾಲ್ಕನೆಯದಾಗಿ ಮತ್ತು ಅವತಾರಗಳ ನಡುವೆ ನಾಯಕ ರತ್ನವಾಗಿ ಕಂಗೊಳಿಸುತ್ತಿರುವುದೇ ನರಸಿಂಹಾವತಾರವೆಂದು ನಿಸ್ಸಂದೇಹವಾಗಿ ಹೇಳಬಹುದು. ನೀರು-ನೆಲಗಳಿಗೆ ಅತೀತವಾಗಿ, ಮನುಷ್ಯ-ಪ್ರಾಣಿ ಸಂಬಂಧಗಳನ್ನು ದಾಟಿ, ಮತ್ತೊಂದು ಹೊಸ ತತ್ತ್ವವನ್ನು ಪ್ರತಿಪಾದಿಸುವಂತೆ ಕಂಡುಬರುವ ನರಸಿಂಹನ ರೂಪ, ಸ್ವಭಾವ, ಕ್ರಿಯೆಗಳಿಗೆ ನಮ್ಮ ಭಾರತೀಯ ಸಂಸ್ಕೃತಿಯಲ್ಲಿ ಪ್ರತ್ಯೇಕವಾದ ಮನ್ನಣೆಯಿದೆ. ಹರಿಯ ಮತ್ತೊಂದು ರೂಪವಾದ ನರಹರಿಯ ಉಪಾಖ್ಯಾನ ವಿಸ್ತೃತವಾಗಿರುವಂತೆ ವಿಚಾರಪೂರಿತ ವಾದದ್ದೂ ಕೂಡಾ ಆಗಿದೆ.

ಭಗವದ್ಗೀತೆಯಲ್ಲಿ ಸೃಷ್ಟಿಯಲ್ಲಿನ ವಿವರಗಳನ್ನು ನೀಡುತ್ತ ಶ್ರೀಕೃಷ್ಣನು ತಾನು ಎಲ್ಲದರಲ್ಲಿಯೂ ಇರುವಂತಹವನೆಂದು ಘೋಷಿಸಿದರೂ ಸೃಷ್ಟಿಯಲ್ಲಿ ಕಂಡುಬರುವ ಬೇರೆ ಬೇರೆ ಬಗೆಯ ವಿಷಯಗಳಲ್ಲಿ ಶ್ರೇಷ್ಠತಮವಾದದ್ದು ತಾನೆಂದು ಅರ್ಜುನನಿಗೆ ಹೇಳುವಾಗ "ಮೃಗಾಣಾಂ ಮೃಗೇಂದ್ರೋಽಹಂ" ಎಂದು ಹೇಳಿದ್ದಾನೆ. ಸಿಂಹ ವನರಾಜನಾದದ್ದು ಪ್ರಾಣಿಗಳಲ್ಲಿ ಅತ್ಯಂತ ಶ್ರೇಷ್ಠವಾದದ್ದು ಎಂಬುದು ಈ ಉಕ್ತಿಯಲ್ಲಿ ಸ್ಪಷ್ಟವಾಗಿದೆ. ಇಲ್ಲಿ ಮನುಷ್ಯ ದೇಹದಲ್ಲಿ ಸಿಂಹದ ತಲೆಯಿದ್ದು, ಹೃದಯ ಮನುಷ್ಯನದ್ದಾಗಿದ್ದರೆ ತಲೆ ಸಿಂಹದ್ದೆಂಬುದು ಗಮನಾರ್ಹ ಅಂಶವಾಗುತ್ತದೆ.

## ಅವತಾರ ವೈವಿಧ್ಯ

ಹರಿಯ ಹತ್ತವತಾರಗಳೂ, ಇತರತ್ರ ೨೪ ಅವತಾರಗಳೂ ಗೌಣ, ಪೂರ್ಣ, ಅಂಶ, ಆವೇಶ ಇತ್ಯಾದಿ ಗುಣವ್ಯತ್ಯಯದಿಂದ ಉಂಟಾಗುವ ವಿಭವಾವತಾರಗಳೆಂದು ಹೇಳಲಾಗಿದೆ. ಪರಮ ಪುರುಷನಾದ ಹರಿಯು ಪಂಚ ಮೂರ್ತಿಗಳಾಗಿರುವನೆಂಬುದು ಆರ್ಷವಾಕ್ಕು. ಪರ, ವ್ಯೂಹ, ವಿಭವ, ಅಂತರ್ಯಾಮಿ, ಅರ್ಚೆಗಳು ಅವನು ಪ್ರಕಟವಾಗುವ ರೂಪಗಳು. ಪರಾವತಾರವು ವೈಕುಂಠದಲ್ಲಿ ವಿರಾಜಮಾನನಾದ ವಿಷ್ಣುವಿನ ನಿತ್ಯವಿಭೂತಿ. ಅಲ್ಲಿ ಆತನ ಸುತ್ತ ನಿತ್ಯಮುಕ್ತರು, ಅನಂತ, ಗರುಡ, ವಿಷ್ವಕ್ಸೇನರೇ ಮೊದಲಾದವರು ಸದಾ ಓಲೈಸುತ್ತಿರುವವರು. ಜಗತ್ತಿನ ಸೃಷ್ಟಿ-ಸ್ಥಿತಿ- ಲಯ ಕಾರ್ಯಗಳಲ್ಲಿ ಆತ ಕೈಗೊಳ್ಳುವ ರೂಪಗಳು ವ್ಯೂಹಗಳು. ಭಾಗವತ ಪಂಥದಲ್ಲಿ ಇವರನ್ನು ಐವರು ವೃಷ್ಣಿಕುಲದವರೆನ್ನಲಾಗಿದೆ. ವಾಯುಪುರಾಣದ ವಿವರ ಹೀಗೆ-

*ಮನುಷ್ಯಾಕೃತೀನ್ ದೇವಾನ್, ಕೀರ್ತ್ಯಮಾನಾನ್ನಿಬೋಧತಾ /*
*ಸಂಕರ್ಷಣೋ ವಾಸುದೇವಃ ಪ್ರದ್ಯುಮ್ನ ಸಾಂಬ ಏವಚ /*
*ಅನಿರುದ್ಧಶ್ಚ ಪಂಚೈತೇ ವಂಶವೀರಾಃ ಪ್ರಕೀರ್ತಿತಃ //*

ಈ ಐವರಲ್ಲಿ ಸಾಂಬನ ಪೂಜೆ ಕಾಲಾನುಕ್ರಮದಲ್ಲಿ ಕಳೆದುಹೋಯಿತು. ನಾಲ್ಕು ಮಂದಿ ಮಾತ್ರವಷ್ಟೇ ಉಳಿದರು. ಇವರಲ್ಲಿಯೂ ವಾಸುದೇವನ ಸ್ಥಾನ ಪ್ರತ್ಯೇಕವಾಗುಳಿಯಿತು. ಈತ ವ್ಯೂಹಗಳಿಗೆ ಬುನಾದಿ ಆಗಬಲ್ಲನೇ ಹೊರತು ಈತನೇ ವ್ಯೂಹನಾಗಲಾರ ಎನ್ನಲಾಯಿತು. ಕಡೆಗೆ ಪಂಚ ವ್ಯೂಹದಲ್ಲಿ ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧರು ಮಾತ್ರ ಉಳಿದರು.

ವಾಸುದೇವನ ಆರು ಗುಣಗಳು ಮೊದಲಿಗೆ ಇದ್ದು ಎರಡೆರಡು ಗುಣಗಳ ಮೂರು ಭಾಗವಾಯಿತು. ಜ್ಞಾನ ಬಲಗಳು ಸಂಕರ್ಷಣನಲ್ಲಿ, ಐಶ್ವರ್ಯ, ವೀರ್ಯಗಳು ಪ್ರದ್ಯುಮ್ನನಲ್ಲಿ ಗುರುತಿಸುವುದಾದರೆ ಅನಿರುದ್ಧನಲ್ಲಿ ಮಿಕ್ಕ ಶಕ್ತಿ ತೇಜಸ್ಸುಗಳನ್ನು ಗುರುತಿಸಲಾಯಿತು.

ವಿಷ್ಣುವಿನ ವಿಭವಾವತಾರಗಳಾದ ದಶಾವತಾರಗಳ ಸಂಬಂಧದಲ್ಲಿ ನೋಡಿದರೆ, ಈ ವ್ಯೂಹ ರಚನೆಯನ್ನು ಬಿಡಿಸಿ ಹೇಳಬಹುದು. ವಾಸುದೇವನ ರೂಪಾಂತರದಲ್ಲಿ ವಾಮನ, ಕೃಷ್ಣ ಅವತಾರಗಳು ಕಂಡು ಬಂದರೆ ಮತ್ಸ್ಯ, ಕೂರ್ಮ, ಪರಶುರಾಮ, ದಶರಥರಾಮ, ಹಾಗೂ ಕಲ್ಕಿ ಅವತಾರಗಳು ಸಂಕರ್ಷಣ ರೂಪದಲ್ಲಿ ಕಂಡುಬರುವುವು. ಬೌದ್ಧಾವತಾರವು ಪ್ರದ್ಯುಮ್ನ ರೂಪಾಂತರವಾದರೆ ವರಾಹ, ನಾರಸಿಂಹ ಅವತಾರಗಳು ಅನಿರುದ್ಧ ರೂಪದವುಗಳು. ಉತ್ತರ ಭಾರತದ ಪ್ರಾಚೀನ ಶಿಲ್ಪವೊಂದರಲ್ಲಿ ಈ ನಾಲ್ಕೂ ರೂಪಗಳನ್ನು ಕಾಣಿಸಲಾಗಿದ್ದು ಇದನ್ನು ಚತುರ್ಮೂರ್ತಿ ಎಂದು ಹೇಳಲಾಗಿದೆ. ಕುಶಾನರ ಕಾಲಕ್ಕೆ ಸೇರಿದ ಈ ರೂಪವು ಚತುರ್ಭುಜದಿಂದಾದದ್ದು.

ಹರಿಯು ಅಣು, ರೇಣು, ತೃಣ, ಕಾಷ್ಠಗಳಲ್ಲಿ ಎಲ್ಲೆಲ್ಲಿಯೂ ವ್ಯಾಪಿಸಿ ಆವರಿಸಿಕೊಂಡು ಎಲ್ಲದರ ಒಳಗೂ ಇರುತ್ತಾನೆ ಎಂಬುದು ಆರ್ಷಸಿದ್ಧವಾಕ್ಯ. ಅದರಂತೆ ಚೇತನರ ಹೃದಯ ಕಮಲಗಳಲ್ಲಿ ಸರ್ವದಾ ನೆಲೆಸಿ ದಯೆಯಿಂದ ದಿಕ್‌ಸೂಚನೆ ಕೊಡುವ ಅವನ ರೂಪವೇ ಅಂತರ್ಯಾಮಿ ರೂಪ. ಅಂತರ್ಯಾಮಿಯ ಉಪದೇಶವನ್ನು ಅನುಸರಿಸಿ ಉಜ್ಜೀವಿಸಬೇಕೆಂದು ಭಗವದ್ ಗೀತೆಯಲ್ಲಿ ಭಗವಂತ ತಾನೇ ಮಧ್ಯಮ ಪಾಂಡವನಿಗೆ ತಿಳಿಸಿದ್ದಾನೆ.

## ಅರ್ಚಾವತಾರ

ಹರಿಯವತಾರಗಳಲ್ಲಿ ಹೊರಗಣ ಜಗತ್ತಿನಲ್ಲಿ ಪ್ರಮುಖವಾದದ್ದು ಅರ್ಚಾವತಾರ. ಸರ್ವೇಶ್ವರನು ಎಲ್ಲೆಲ್ಲಿಯೂ ಇದ್ದರೂ ಒಂದು ನಿರ್ದಿಷ್ಟ ಸ್ಥಳದಲ್ಲಿ, ರೂಪದಲ್ಲಿ ಆಕಾರ ತಳೆದು ಮಾನವನ ಎಲ್ಲ ಪೂಜೆ, ಅರ್ಚನೆ, ಆರಾಧನೆಯನ್ನು ಒಪ್ಪಿಕೊಂಡು, ಅವನ ಪ್ರಾರ್ಥನೆ, ಸ್ತುತಿ, ಕೀರ್ತನೆಗಳಿಗೆ ಸ್ಪಂದಿಸುತ್ತ "ಭಕ್ತ ಸುಲಭ" ಎಂಬ ಬಿರುದನ್ನು ಪಡೆದು, ಸದಾ ಸರ್ವದಾ ಅನುಗ್ರಹ ಮಾತ್ರವನ್ನೇ ಮಾಡುತ್ತ ಇರುವ ಅವತಾರ ಸ್ವರೂಪವೇ ಅರ್ಚಾವತಾರ.

ಸಗುಣಾರಾಧನೆಯ ಈ ಪದ್ಧತಿಯಲ್ಲಿ ಸ್ವಾಮಿ ಮನೆಯಲ್ಲಿ, ಮಠದಲ್ಲಿ, ಗುಡಿಯಲ್ಲಿ, ಗಿರಿಯಲ್ಲಿ, ಮಂಟಪದಲ್ಲಿ, ಬಯಲಲ್ಲಿ- ನಿಂತು, ಕುಳಿತು, ಮಲಗಿ ಭಕ್ತರ ಎಲ್ಲ ಸೇವೆಗಳನ್ನು ಷೋಡಶೋಪಚಾರಗಳನ್ನು, ಸ್ನಾನ, ಶಯ್ಯೆಗಳನ್ನು ಸ್ವೀಕರಿಸುತ್ತಾನೆ. ಅರ್ಚಾವತಾರವು ಸ್ವಯಂವ್ಯಕ್ತ, ದೈವ, ಮಾನುಷ, ಸಿದ್ಧ- ಎಂದು ಅವತಾರ ಸ್ವರೂಪವು ತಯಾರಾಗುವ ವಿಧಾನವನ್ನು ಅನುಸರಿಸಿ ನಾಲ್ಕು ಬಗೆಯವೆಂದು ಹೇಳಲಾಗಿದೆ. ಇಂತಹ ಅರ್ಚಾವತಾರದ ಪ್ರತಿಮೆಯನ್ನೇ ಆದಿಯಿಂದಲೂ ನಂಬಿಕೊಂಡು, ನಡೆದುಕೊಂಡು, ನೆಚ್ಚಿಕೊಂಡು ಬರಲಾಗಿದೆಯೆಂದರೆ- ಅದನ್ನೇ ತಾನು ಕತ್ತಲಿನಿಂದ ಬೆಳಕಿಗೆ ನಡೆಯುವ ಹಾದಿಯಲ್ಲಿ ಕೈ ಹಿಡಿದು ನಡೆಸೆಂದು ಬೇಡಿಕೊಂಡು ಬರಲಾಗಿದೆ ಯೆಂದರೆ- ಅದರ ಪ್ರಾಧಾನ್ಯದ ಅರಿವಾಗುವುದರಲ್ಲಿ ಸಂದೇಹವಿಲ್ಲ.

ಕಾಲ, ದೇಶ, ಭಾಷಾ ಭೇದವಿರಬಹುದಾದರೂ ಮಾನವ ಸ್ವಭಾವದ ಐಕ್ಯತೆಯಿಂದಾಗಿ ಅರ್ಚಾಮೂರ್ತಿಗಳ ರೂಪದಲ್ಲಿಯೂ ಏಕರೂಪತೆ ಕಾಣಿಸಿಕೊಂಡು ಬಂದಿದೆಯೆಂದರೆ ಅತಿಶಯವಿಲ್ಲ. ಅದರಂತೆ ಇಂದು ನಾವು ನಾಡಿನ ಸುತ್ತಲೂ ರಾಮ, ಕೃಷ್ಣ, ನರಸಿಂಹ, ವೆಂಕಟೇಶ್ವರ, ಶಿವ, ಶಕ್ತಿ, ಹನುಮ, ಮುರುಘರುಗಳ ವಿವಿಧ ರೂಪ ನಾಮಗಳ ವಿಗ್ರಹಗಳ ಪೂಜೆಯನ್ನು ಕಾಣುತ್ತೇವೆ.

ಅದರಲ್ಲಿಯೂ ಮೊದಲ ನಾಲ್ಕು ವೈಷ್ಣವ ರೂಪಗಳ ಆಲಯಗಳ ವ್ಯಾಪ್ತಿ ಹಿರಿದು ಎಂದೇ ಹೇಳಬೇಕು.

# ನರಸಿಂಹ ದೇವರು

*ಕೃತೇತು ನರಸಿಂಹೋಽಭೂ ತ್ತ್ರೇತಾಯಾಂ ರಘುನಂದನಃ /*
*ದ್ವಾಪರೇ ವಾಸುದೇವಶ್ಚ ಕಲೌ ವೇಂಕಟನಾಯಕಃ //*

ಕೃತಯುಗಕ್ಕೆ ನರಸಿಂಹಾವತಾರವು ಶ್ರೇಷ್ಠವಾದದ್ದು. ನಂತರ ತ್ರೇತಾ, ದ್ವಾಪರ ಯುಗಗಳಲ್ಲಿ ರಾಮ-ಕೃಷ್ಣರ ಅವತಾರವಾಯಿತು. ಇಂದು ಸರ್ವವ್ಯಾಪಿಯಾಗಿ, ಸಾರ್ವತ್ರಿಕ ವಾಗಿ ಭಾರತದಲ್ಲಿಯೇ ಅಲ್ಲದೆ ಅಮೆರಿಕಾ, ಇಂಗ್ಲೆಂಡ್, ಆಸ್ಟ್ರೇಲಿಯಾಗಳಲ್ಲಿಯೂ - ಕಲಿಯುಗದಲ್ಲಿ- ವೆಂಕಟೇಶ್ವರ ಸ್ವಾಮಿಯು ಅತಿ ಮಹತ್ವದ ದೇವರಾಗಿ ಅನುಗ್ರಹಿಸಿ ನಡೆದಿದ್ದಾನೆ- ಮನುಷ್ಯರನ್ನು ಸೃಷ್ಟಿಯನ್ನು ನಡೆಸುತ್ತಿದ್ದಾನೆ ಎಂಬುದರಲ್ಲಿ ಅತಿಶಯವಿಲ್ಲ.

ಇಲ್ಲಿನ ಚಿಂತನೆಯ ಆರೋಹಣ ಕ್ರಮವೂ ಜೀವ ವಿಕಾಸದ ರೀತಿಯಲ್ಲಿಯೇ ಇದೆಯೆಂಬುದನ್ನು ಗಮನಿಸಬೇಕು. ಈ ದಿಸೆಯಲ್ಲಿ ಅವತಾರಗಳ ಹಾಗೂ ಯುಗಾಂತರಗಳ ದೇವತಾ ಪೂಜಾಪದ್ಧತಿಯ ಬೆಳವಣಿಗೆಯನ್ನು ಅಧ್ಯಯನ ಮಾಡಬಹುದಾಗಿದೆ.

ನಮ್ಮ ನಾಡಿನ ಮೂರ್ತಿ ಶಿಲ್ಪದ ಚರಿತ್ರೆಯಲ್ಲಿ ನರಸಿಂಹನ ಶಿಲ್ಪವು ರೋಚಕವಾದ ಸಂಗತಿಯನ್ನು ಹೊರಚೆಲ್ಲುವಂತಿದೆ. ಈತನ ರೂಪವು ರೋಮಾಂಚನವನ್ನು ಉಂಟು ಮಾಡುತ್ತದೆ. ನರಸಿಂಹನ ದರ್ಶನದಿಂದಾಗಿ ಆಸ್ತಿಕ-ನಾಸ್ತಿಕ ಭೇದವಿಲ್ಲದೆ ಎಲ್ಲರಿಗೂ ಬೆರಗುಂಟಾಗುವುದು ಸಹಜ. ವೈದಿಕರು, ತಾಂತ್ರಿಕರು, ಆದಿವಾಸಿಗಳು-ಹೀಗೆ ಅನೇಕ ಜನಾಂಗಗಳವರು ನರಸಿಂಹನ ಆರಾಧನೆ ಮಾಡುತ್ತಾರೆ. ಲಕ್ಷಾಂತರ ಜನರ ಆಕರ್ಷಣ ಕ್ಷೇತ್ರವಾದ ಒರಿಸ್ಸಾದ ಪುರಿಯಲ್ಲಿರುವ ವಿಗ್ರಹವನ್ನು ಜಗನ್ನಾಥನೆಂದು ಕರೆದರೂ ನರಸಿಂಹನೆಂದೇ ಐತಿಹ್ಯವಿರುವುದನ್ನು ಕೇಳಿದಾಗ ಮೇಲಿನ ಮಾತಿಗೆ ಪುಷ್ಟಿ ದೊರೆಯು ವಂತಾಗುತ್ತದೆ. ಶಬರರು, ಪುಳಿಂದರು ಮೊದಲಾದ ವನಜೀವಿಗಳೂ ನರಸಿಂಹನನ್ನು ಆರಾಧಿಸುವುದನ್ನು ಕಾಣಬಹುದಾಗಿದೆ.

ನರಸಿಂಹನನ್ನು ರುದ್ರಾಂಶನೆಂದು ಕಾಣಲಾಗುತ್ತದೆ. ರುದ್ರನ ಅಂಶವು ಈತನಲ್ಲಿರು ವುದನ್ನು ಈತನಿಗಿರುವ ತ್ರಿನೇತ್ರದಿಂದ ಸ್ಪಷ್ಟವಾಗುತ್ತದೆ. ಶೈವರೂ ನರಸಿಂಹನನ್ನು ಆರಾಧಿಸು ವುದು ಅಲ್ಲಲ್ಲಿ ಕಂಡುಬರುತ್ತದೆ. ಶಕ್ತಿ ಪಂಥದ ಅನುಯಾಯಿಗಳಿಗೆ ನರಸಿಂಹನ ಸ್ತ್ರೀರೂಪವು ಆರಾಧ್ಯ. ನಾರಸಿಂಹಿಯೆಂಬ ಹೆಸರನ್ನಿತ್ತು ಶಾಕ್ತೇಯರು ಈ ರೂಪವನ್ನು ಆರಾಧಿಸುವರೆಂದು ತಿಳಿದುಬರುತ್ತದೆ. ನರಸಿಂಹೋಪಾಸನೆಯು ತುಂಬ ಗಹನವಾದ, ಅಷ್ಟೇ ಪರಿಣಾಮಕಾರಿಯಾದ ಆರಾಧನೆಗಳ ಸಾಲಿಗೆ ಸೇರುತ್ತದೆ. ಶಾಸ್ತ್ರಕೃತಿಗಳಲ್ಲಿ ಇದರ ಬಗ್ಗೆ ಉಲ್ಲೇಖಗಳಿವೆ. ಇಂತಹ ಉಪಾಸನೆಯಿಂದ ಇಹ-ಪರಗಳೆರಡರ ಶ್ರೇಯಸ್ಸು ಸಾಧ್ಯವೆಂದು ಹೇಳುತ್ತಾರೆ. ಆಚಾರ್ಯ ಪರಂಪರೆಯಲ್ಲಿ ಬಂದ ಅದ್ವೈತಾಚಾರ್ಯ ಶಂಕರರ ಶಿಷ್ಯರಾದ ಪದ್ಮಪಾದರು ನೃಸಿಂಹೋಪಾಸನೆಯ ಮೂಲಕ 'ದುಷ್ಪರಿಣಾಮಗಳನ್ನು ದಾಟಲು ಸಾಧ್ಯವಾದದ್ದು ತಿಳಿದು ಬರುತ್ತದೆ.

## ಆರಾಧನೆ

*ಉಗ್ರಂ ವೀರಂ ಮಹಾವಿಷ್ಣುಂ ಜ್ವಲಂತಂ ಸರ್ವತೋಮುಖಮ್ /*
*ನೃಸಿಂಹಂ ಭೀಷಣಂ ಭದ್ರಂ ಮೃತ್ಯುಮೃತ್ಯುಂ ನಮಾಮ್ಯಹಮ್ //*

ಮಹಾವಿಷ್ಣುವಿನ ಅವತಾರವಾದ ನೃಸಿಂಹನ ಆರಾಧನಾ ಸಮಯದಲ್ಲಿ ಹೇಳಲಾಗುವ ಈ ಧ್ಯಾನಶ್ಲೋಕದಲ್ಲಿ ಭಕ್ತನ ಭಯನಿವಾರಣೆಯ ಪ್ರಾರ್ಥನೆಯಿದೆ. ಇದು ಪುರಾಣೋಕ್ತ ಮಂತ್ರವೂ ಹೌದು.

ಹಿಂದೆಯೇ ಹೇಳಲಾದಂತೆ ಪ್ರತಿ ಅವತಾರ ಮಹಿಮೆಯನ್ನೂ ಪ್ರತ್ಯೇಕವಾದ ಪುರಾಣಗಳ ಮೂಲಕ, ರಾಮಾಯಣ, ಮಹಾಭಾರತ ಮೊದಲಾದ ಕಾವ್ಯೇತಿಹಾಸಗಳಲ್ಲಿ ವಿವರವಾಗಿ ನಿರೂಪಿಸಲಾಗಿದೆ. ಪುರಾಣಗಳಲ್ಲಿ ನರಸಿಂಹಾವತಾರಕ್ಕೆ ಮಹತ್ವದ ಸ್ಥಾನವಿದೆ. ರಾಮಾಯಣ, ಭಾರತ, ಭಾಗವತಗಳಲ್ಲಿ ಮಾನವರೂಪ ಧರಿಸಿದ ದೇವಮಾನವ ವ್ಯಕ್ತಿಗಳನ್ನು ಆದರ್ಶದ ನೆಲೆಗೆ ಏರಿಸಿ, ಪೂಜನೀಯರಾಗುವಂತೆ ಮಾಡಲಾಗಿದೆ. ನರಸಿಂಹ ಹೇಳಿಕೇಳಿ ನರ-ಮೃಗ ರೂಪಿ. ಪುರಾಣಗಳು ಈ ಅವತಾರವನ್ನು ಆರಾಧನೆ ಮಾಡಿವೆ. ಮೃಗ-ಮಾನವ ಸಂಬಂಧವನ್ನೂ ಬೆಸುಗೆ ಹಾಕಿದಂತಿದೆ. ಈ ಸಮ್ಮಿಶ್ರ ರೂಪದ ಅವತಾರದ ಅಂತರಂಗವನ್ನು ವಿಷ್ಣುಪುರಾಣ, ಭಾಗವತ ಪುರಾಣ, ನರಸಿಂಹ ಪುರಾಣಗಳು ಸ್ಥೂಲ, ಸೂಕ್ಷ್ಮ ಪರಿಧಿಗಳಲ್ಲಿ ಪ್ರಸ್ತುತ ಪಡಿಸಿವೆ. ಅವುಗಳನ್ನು ಪ್ರತ್ಯೇಕ ವಿವರಗಳೊಡನೆ ಮುಂದಿನ ಅಧ್ಯಾಯಗಳಲ್ಲಿ ನೋಡಬಹುದಾಗಿದೆ.

ನರಸಿಂಹಾರಾಧನೆಯು ಭಾರತದಲ್ಲಿ ಪ್ರಚಲಿತವಾಗುವ ಹೊತ್ತಿಗಾಗಲೇ ಮೂರ್ತಿ ಪೂಜೆ ಬಲವಾಗಿ ತಳವೂರಿತ್ತೆಂದು ತಿಳಿದುಬರುತ್ತದೆ. ಮೂರ್ತಿ ಪೂಜೆಯನ್ನು ಸೈಂಧವ ವೈದಿಕ •ಸಂಸ್ಕೃತಿಗಳ ಸಮನ್ವಯದಿಂದ ಸಾಧಿಸಿಕೊಳ್ಳಲಾಗಿದೆ. ಇದರ ವಿಧಿ ವಿಧಾನದ ವಿವರಗಳನ್ನು ಆಗಮಗಳಲ್ಲಿ ವಿವರಿಸಲಾಗಿದೆ. ಪಾಂಚರಾತ್ರ ಮತ್ತು ವೈಖಾನಸಗಳೆಂಬೆರಡು ವೈಷ್ಣವಾಗಮಗಳು. ವೈಖಾನಸವು ತುಸು ಹಳೆಯದು. ವಿಖನಸಾಚಾರ್ಯರು ಬ್ರಹ್ಮಮಾನಸ ಪುತ್ರರೆಂದು ಪರಿಗಣಿಸಿ ಅವರನ್ನು ಬ್ರಹ್ಮ, ವಿಷ್ಣುಗಳ ಒಟ್ಟಿಗೇ ಸೇರಿಸಲಾಗಿದೆ. ಪಾಂಚರಾತ್ರ ನಂತರದ್ದು ಎನ್ನಬೇಕು.

ಶ್ರೀವೈಷ್ಣವ ಆಚಾರ್ಯರಲ್ಲಿ ಸ್ತೋತ್ರರತ್ನವನ್ನು ಬರೆದ ಯಾಮುನಾಚಾರ್ಯರು ಪಾಂಚರಾತ್ರವನ್ನು ಸಮರ್ಥಿಸಿ "ಆಗಮ ಪ್ರಾಮಾಣ್ಯ"ವೆಂಬ ಒಂದು ಕೃತಿಯನ್ನು ಬರೆದಿರುವರೆಂಬುದನ್ನು ನೆನೆಯಬಹುದು. ಅದಕ್ಕಿಂತ ಹಿಂದಿನದು ವೈಖಾನಸ ಆಗಮ ಎಂದಷ್ಟೆ ಹೇಳಬರುತ್ತದೆ. ಜೊತೆಗೆ ತಂತ್ರಸಾರವೂ ಆರಾಧನೆಯ ಪದ್ಧತಿಯಾಗಿ ಉಂಟು. ನಮ್ಮ ದೇವಾಲಯಗಳ ಅರ್ಚಾಮೂರ್ತಿಗಳಿಗೆ ಆಯಾ ಧರ್ಮದ ಅಭಿವ್ಯಕ್ತ ರೂಪವಾಗಿ ಪ್ರಾತಿನಿಧ್ಯವಿದೆ. ಧರ್ಮದ ಜೊತೆ ಜೊತೆಗೇ ಬೆಳೆದು ಬಂದ ಈ ಪ್ರತಿಮಾ ರೂಪಗಳ ಮೂಲಕವಾಗಿ ಭವ್ಯವಾದ ಸಾಂಸ್ಕೃತಿಕ ಪರಂಪರೆಯೊಂದು ಪ್ರಜ್ವಲಿಸುತ್ತಿರುವುದನ್ನು

ಪ್ರಸ್ತುತ ಸಂದರ್ಭದಲ್ಲಿ ಮನದಟ್ಟುಮಾಡಿಕೊಳ್ಳಬಹುದು. ದೇವಾಲಯಗಳಲ್ಲಿ ವಿವಿಧ ಪಂಥಗಳಿಗೆ ಸೇರಿದ ದೇವರುಗಳನ್ನು ಆರಾಧಿಸಿಕೊಂಡು ಬರಲಾಗಿದೆ. ಆಗಮಗಳು ಪ್ರಾಚುರ್ಯ ಪಡೆದಂತೆಲ್ಲ ಈ ಮೂರ್ತಿಗಳ ಪ್ರಾಧಾನ್ಯ ಹೆಚ್ಚಿದ ಹಾಗೆ ತಿಳಿದು ಬರುತ್ತದೆ. ಆರಾಧನಾ ಪದ್ಧತಿಗೆ ಮೂಲವಾಗಿ ಮೂರ್ತಿಗಳ ಕೆತ್ತನೆಯ ವಿಷಯವಾದ ಶಿಲ್ಪಶಾಸ್ತ್ರಾಗಮಗಳೂ ಬೆಳೆದು ಬಂದವು ಎನ್ನಬೇಕು. ವಿಗ್ರಹ ಪ್ರತಿಷ್ಠಾವಿಧಿ, ಪೂಜಾವಿಧಾನ, ಉತ್ಸವ ವಿಧಾನಗಳು ಕ್ರಮೇಣ ಬೆಳೆದು ಬಂದಂತೆ ಶಿಲ್ಪಶಾಸ್ತ್ರದ ವಿಕಾಸವನ್ನೂ ಗಮನಿಸಬಹುದಾಗಿದೆ. ಕ್ರಿಸ್ತಶಕದ ಆರಂಭದಿಂದ ಒಂದು ಸಹಸ್ರಮಾನ ಕಾಲದಲ್ಲಿ ಶಿಲ್ಪಶಾಸ್ತ್ರವೂ, ಪೂಜಾ ವಿಧಾನವೂ ಬೆಳೆದು ಪರಿಪಕ್ವಗೊಂಡದ್ದನ್ನು ರಾಜವಂಶಗಳ, ತೀರ್ಥಕ್ಷೇತ್ರಗಳ, ಆಲಯ ವಾಸ್ತುಶಿಲ್ಪದ ಆರಾಧನೆಯ ಆಗಮಗಳ ಅಧ್ಯಯನದಿಂದ ತಿಳಿಯಬಹುದು.

ಉತ್ತರ ಭಾರತದಲ್ಲಿ ಇತಿಹಾಸಕಾಲದಲ್ಲಿ ಸಾಮಾಜಿಕ ಅಲ್ಲೋಲ ಕಲ್ಲೋಲಗಳೂ, ಧಾರ್ಮಿಕ ಏಳುಬೀಳುಗಳೂ, ರಾಜಕೀಯ ಗೊಂದಲಗಳೂ ಉಂಟಾಗಿ ಭಕ್ತಿಪಂಥದ ಹೊರತಾಗಿ ಯಾವುದೇ ವಾಸ್ತುವಿನ, ಶಿಲ್ಪದ ಗಟ್ಟಿನೆಲೆಗಳುಂಟಾಗಲು ಅವಕಾಶ ಅಷ್ಟಾಗಿ ದೊರೆಯಲಿಲ್ಲ. ಅಲ್ಲಿನ ಆಲಯದ ಅರ್ಚಾಮೂರ್ತಿಗಳೂ, ಆಲಯ ವಾಸ್ತು ಶಿಲ್ಪಗಳೂ ದಕ್ಷಿಣ ಭಾರತದ ತತ್ಸಂಬಂಧಿ ಬೆಳವಣಿಗೆಗೆ ಹೋಲಿಸಿದಾಗ ಕ್ವಚಿತ್ ಎಂದೇ ತೀರ್ಮಾನಿಸಬೇಕು. ಅಲ್ಲಿನ ಸಮಾಜಗಳು ನರಸಿಂಹನ ಆರಾಧನೆಗೆ ವಿಷ್ಣುವಿನ ಮೂರ್ತಿಗಳನ್ನೇ ಆಯ್ದುಕೊಂಡವು. ಎಲ್ಲೋ ಒಂದೆರಡು ಕಡೆ- ಬದರಿ ಹಾದಿಯ ಜೋಷಿ ಮಠದಲ್ಲಿ ಶಂಕರಾಚಾರ್ಯರು ಸ್ಥಾಪಿಸಿದ ನರಸಿಂಹ ದೇವಾಲಯದಂತಹವುಗಳನ್ನು ಬಿಟ್ಟರೆ ಪ್ರಾಚೀನವೆನ್ನ ಬಹುದಾದ ನರಸಿಂಹ ಆಲಯಗಳು ಕಡಮೆ. ಹೀಗಾಗಿ ನಾರಾಯಣ ಮೂರ್ತಿಯಲ್ಲೇ ನರಹರಿಯ ಮೂರ್ತಿಯ ಪೂಜೆ ಆಯಿತು. ಇವುಗಳ ಮೂಲಕವಾಗಿಯೇ ನರಸಿಂಹ ಭಕ್ತಿಯ ಅಭಿವ್ಯಕ್ತಿ ಆಯಿತು. ನರಸಿಂಹ ಮಹತಾನಂತಹ ಭಕ್ತಪಂಥಿಯ ವೈಷ್ಣವ ಪ್ರೇಮವೂ ಬಹುತೇಕ ನಾರಾಯಣ ನಾಮದಿಂದಲೇ ಹೊರಹೊಮ್ಮಿತು.

ದಕ್ಷಿಣದ ದೇವಾಲಯಗಳಲ್ಲಿರುವ ಹಾಗೆ ನರಸಿಂಹನ ನಿರ್ದಿಷ್ಟ ಆಕಾರದ ಅರ್ಚಾ ಮೂರ್ತಿಗಳನ್ನು ಉತ್ತರದಲ್ಲಿ ಕಾಣಲಾರೆವು. ಅಲ್ಲಿನ ದೇವಾಲಯಗಳ ಅಧ್ಯಯನಕ್ಕೆ ದಕ್ಷಿಣದಲ್ಲಿನ ದೇವಾಲಯಗಳಿಗೆ ದಕ್ಕುವಂತಹ ಪ್ರಾಧಾನ್ಯತೆ ದೊರೆಯುವುದಿಲ್ಲವೆಂದೇ ಹೇಳಬೇಕಾಗುತ್ತದೆ.

## ನರಸಿಂಹ ರೂಪ

ನರಸಿಂಹನ ರೂಪ ವಿಶ್ಲೇಷಣೆಯನ್ನು ಸಂಹಿತೆಗಳಲ್ಲಿ ಕಾಣಬಹುದು. ನರಸಿಂಹನ ಎಪ್ಪತ್ತಕ್ಕೂ ಹೆಚ್ಚಾದ ರೂಪಗಳ ಹೆಸರುಗಳನ್ನು "ವಿಹಗೇಂದ್ರ ಸಂಹಿತೆ" ತಿಳಿಸುತ್ತದೆ. ಇವುಗಳಲ್ಲಿ ಕೆಲವು ಉಗ್ರ, ಘೋರ, ಅಟ್ಟಹಾಸ, ಆವೇಶ, ದಾರಣವಾಗಿವೆ. ಇವೆಲ್ಲವೂ ನರಸಿಂಹನ ಪರಾಕ್ರಮವನ್ನು ಯುದ್ಧಗುಣವನ್ನು ವಿವರಿಸುವಂತಹವುಗಳು.

ನರಸಿಂಹನು ಸಹಜವಾಗಿ ಶಾಂತ, ಸೌಮ್ಯ ಸ್ವಭಾವಗಳಿಂದ ಕೂಡಿದವನಾಗಿದ್ದರೂ ಆತ ಈ ಲೋಕಕ್ಕೆ ದಿಢೀರನೆ ಬಂದ ಕಾರ್ಯಕಾರಣದ ಹಿನ್ನೆಲೆಯಲ್ಲಿ ಆತನ ಶೌರ್ಯಾದಿ ರಾಜಸ ಗುಣಗಳ ಪ್ರಕಟವಾಯಿತೆಂದು ವಿಹಗೇಂದ್ರ ಸಂಹಿತೆಯಿಂದ ತಿಳಿಯಬಹುದು.

ನರಸಿಂಹ ಏಕ ಮುಖದವನೆಂಬುದು ಎಲ್ಲ ವಿವರಣಾ ಸಾಹಿತ್ಯದಲ್ಲಿಯೂ ದೊರೆಯುವ ವಿಚಾರವಾಗಿದೆ. ಸಿಂಹದ ಮುಖವನ್ನು ಧರಿಸಿದ ಕಾರಣದಿಂದಾಗಿ ಈತನನ್ನು ಪಂಚಾನನ, ಪಂಚಾಸ್ಯ ಪಂಚಮುಖಿ ಎಂದು ಐದು ಮುಖಗಳನ್ನು ಗುರುತಿಸಲಾಗಿದೆ. ಇಂತಹ ಐಮುಖಿ ನೃಸಿಂಹ ಶಿಲ್ಪ ದೊರೆಯುವಂತಿಲ್ಲವಾದರೂ ಈಶ್ವರ ಸಂಹಿತೆಯಲ್ಲಿ ಈ ಉಲ್ಲೇಖವಿದೆ. ಪಂಚಾನನ ಪುಣ್ಯಶೋಭಿತನೆಂಬುದನ್ನು ಕ್ರಮವಾಗಿ ನಾಲ್ಕೂ ದಿಕ್ಕಿನ ನಾಲ್ಕು ಮುಖಗಳು ಹಾಗೂ ಆಕಾಶ ನೋಡುವ ಐದನೆಯ ಮುಖವನ್ನು ಗುರುತಿಸಲಾಗಿದೆ. ಇದರ ಜೊತೆಗೇ ಗಂಡಭೇರುಂಡ ನರಸಿಂಹನ ಎಂಟು ಮುಖ ಶಬ್ದಚಿತ್ರವೂ ಉಂಟು. ಅಷ್ಟಮುಖಗಳಿಗೆ ತಕ್ಕಂತೆ ಹದಿನಾರು ಕೈಗಳುಂಟು. ಏಕ ಮುಖಿ ನೃಸಿಂಹನಿಗೇ ಎರಡು, ನಾಲ್ಕು, ಎಂಟು, ಹದಿನಾರು ಕೈಗಳು ಇರುವುದುಂಟು.

ಸಾತ್ವತ ಸಂಹಿತೆಯಲ್ಲಿ ನರಸಿಂಹನನ್ನು ಕುರಿತು 'ಧ್ಯಾಯೇತ್ ಏಕವಕ್ತ್ರಂ' ಎಂದು ಹೇಳಲಾಗಿದೆ. ನರಸಿಂಹನು ಒಂದೇ ಮುಖದವನೆಂಬುದು ಇದರಿಂದ ಸ್ಪಷ್ಟವಾಗುತ್ತದೆ. ಕರಾಳ ದಂಷ್ಟ್ರಗಳು ಬಾಯ ಮೂಲಕ ಹೊರಬಂದಿರುತ್ತವೆ. ಮುಖದಲೆಲ್ಲ ಸಿಂಹ ಕೇಸರಗಳು ತುಂಬಿಕೊಂಡಿದ್ದು ಈ ಬಗ್ಗೆ ಸ್ತೋತ್ರ ಸಾಹಿತ್ಯದ ತುಂಬ ಬಣ್ಣನೆಯಾಗಿದೆ. 'ಜ್ವಾಲಾಮಾಲಾ ಕಾಲ ಮುಖೋಜ್ವಲ ಕೇಸರ ಮಂಡಲಃ' ಎಂಬ ಮಾತು ಆಕರ್ಷಕ ಚಿತ್ರವನ್ನುಂಟು ಮಾಡುತ್ತದೆ. ಮಹಾ ಸಿಂಹವನ್ನು ಹೋಲುವ ಈತನ ಮುಖದಲ್ಲಿ ಮೂರು ಕಣ್ಣುಗಳೂ ಇರುವುದುಂಟು. ಇವುಗಳನ್ನು ಸೂರ್ಯ ಚಂದ್ರ ಅಗ್ನಿಗಳೆಂದು ಬಣ್ಣಿಸುವರು. 'ಬಿಭರ್ತಿ ನೇತ್ರಾಣಿ ಹುತಾಶನಾರ್ಕ ಪ್ರಭಾಂಚಿತಮ್' ಎಂಬ ಮಾತಿದೆ.

## ನರಸಿಂಹ ತತ್ತ್ವ

ನರಸಿಂಹನಿಗೆ ಎರಡರಿಂದ ಹದಿನಾರು ಕೈಗಳನ್ನು ಆರೋಪಿಸಲಾಗಿದೆ. ದ್ವಿಬಾಹು ನರಸಿಂಹ ರೂಪ ಕ್ವಚಿತ್ತು. ಕೆಲವಾರು ಪ್ರಾಚೀನ ರೂಪಗಳಲ್ಲಿ ಈ ಚಿತ್ರಣವಿದೆ. ಕುಬಟೂರು, ಮಹಾಕೂಟ, ಬನವಾಸಿ, ಹಲಸಿ ಮೊದಲಾದೆಡೆಗಳಲ್ಲಿ ಇಂತಹ ಮೂರ್ತಿಗಳನ್ನು ಕಾಣಬಹುದು. ಈ ಮೂರ್ತಿಗಳಲ್ಲಿ ಇಲ್ಲಿನ ಪ್ರಾದೇಶಿಕ ವೈಲಕ್ಷಣ್ಯಗಳೂ ಸೇರಿವೆ. ತಿರು ಮಲೆಯ ಆಲಯದ ತಿರುಮಲರಾಯ ಮಂಟಪದ ಕಂಬದ ಮೇಲಿರುವ ಸ್ಥಾನಕ ದ್ವಿಬಾಹು ನರಸಿಂಹನ ರೂಪವು ವಿಶಿಷ್ಟವಾದದ್ದು. ಇಲ್ಲಿ ನರಸಿಂಹನ ಬಲಬದಿಯಲ್ಲಿ ಪ್ರಹ್ಲಾದನ ಚಿತ್ರವೂ ಇದ್ದು ಪ್ರಹ್ಲಾದನ ತಲೆಯ ಮೇಲೆ ದೇವರು ಆಶೀರ್ವಾದನದ ಕೈಯಿಟ್ಟಂತಹ ಪರಮ ಭಾಗವತ ಚಿತ್ರವನ್ನು ಬಿಡಿಸಲಾಗಿದೆ. ಇವೆಲ್ಲ ರೂಪಗಳಿಂದಾಗಿ ಮಾನವ ರೂಪಿಯೊಬ್ಬ ಮಹಾನ್ ದೈವ ರೂಪಿಯಾದಂತೆ ಕಲ್ಪಿಸಿಕೊಳ್ಳಬಹುದಾಗಿದೆ.

ನರಸಿಂಹನ ಸಾಮಾನ್ಯರೂಪವು ನಾಲ್ಕು ಕೈಗಳಿಂದ ಶೋಭಿತವಾಗಿರುತ್ತದೆ. ಈ ನಾಲ್ಕು ಕೈಗಳಲ್ಲಿ ಶಂಖ, ಚಕ್ರ ಆಯುಧಗಳಿದ್ದು ಅಭಯ ವರದ ಮುದ್ರೆಗಳಿರುವುದು ಸಾಮಾನ್ಯ. ಹಿರಣ್ಯಕಶ್ಯಪನೊಡನೆ ಹೋರಾಟದಲ್ಲಿ ತೊಡಗಿದ ನರಸಿಂಹ ನಾಲ್ಕು ಕೈಗಳನ್ನು ಹೊಂದಿರುವುದು ಸಹಜ. ಎಂಟು ಕೈಗಳ ಸಮರ ಮೂರ್ತಿಯೂ ಉಂಟು. ಹಿರಣ್ಯವಧಾ ಸಂದರ್ಭದಲ್ಲಿ ನರಸಿಂಹನಿಗೆ ಎಂಟು ಹದಿನಾರು ಕೈಗಳಿರುವುದೂ ಉಂಟು. ಶಂಖ, ಚಕ್ರ, ಗದಾ, ಪದ್ಮಗಳೊಡನೆ ಬಿಲ್ಲು, ಬಾಣ, ಪರಶು, ಅಂಕುಶಗಳಿರುವುದೂ ಉಂಟು. ಎರಡು ಕೈಗಳು ಹಿರಣ್ಯನ ಹೊಟ್ಟೆಯನ್ನು ಬಗೆಯುತ್ತಿರುವಂತೆಯೂ, ಎರಡು ಕೈಗಳು ತಲೆಯ ಮೇಲೆತ್ತಿ ಕರುಳ ಹಾರವನ್ನು ಹಾಕಿಕೊಳ್ಳುತ್ತಿರುವಂತೆಯೂ ಒಂದು ಕೈ ರಾಕ್ಷಸನ ಕಾಲುಗಳನ್ನೂ ಮತ್ತೊಂದು ಕೈ ತಲೆಯನ್ನೂ ಹಿಡಿದಿರುವಂತೆ ಚಿತ್ರಿತವಾಗುವುದು ಸಾಮಾನ್ಯ. ಭಗವಂತನ ಚತುರ್ವಿಂಶತಿ ಅವತಾರಗಳನ್ನು ಗುರುತಿಸುವಾಗ ನರಸಿಂಹನಿಗೆ ನಾಲ್ಕು ಕೈಗಳಲ್ಲಿ ಮೇಲೆ ಬಲದಿಂದ ಪದ್ಮ, ಗದಾ, ಶಂಖ, ಚಕ್ರಗಳು ಅನುಕ್ರಮವಾಗಿ ಗಡಿಯಾರದಂತೆ ಇದ್ದರೂ ಮುಖ ಮಾತ್ರ ಮನುಷ್ಯರದ್ದೇ ಎಂಬುದು ಮುಖ್ಯ.

ವಿಷ್ವಕ್ಸೇನ ಸಂಹಿತೆಯಲ್ಲಿ ನರಸಿಂಹನ ಶರೀರವನ್ನು ಬಣ್ಣಿಸಲಾಗಿದೆ. ಇದು ಶ್ವೇತ ಪರ್ವತದ ಹಾಗಿದೆಯೆಂದು ಹೇಳಲಾಗಿದೆ. ಶುದ್ಧ ಸ್ಫಟಿಕದಂತೆ ನಿರ್ಮಲವಾಗಿದೆಯಂತೆ. ಈಶ್ವರ ಸಂಹಿತೆಯಲ್ಲಿ ಈತನ ಶರೀರವು ತುಷಾರದ ಹಾಗೆ ಹೊಳೆಯುತ್ತ ಮಲ್ಲಿಗೆಯ ಹೂವಿನಂತೆಯೂ, ಚಂದ್ರನಂತೆಯೂ ಶುಭ್ರವಾಗಿರುವುದೆಂದು ಹೇಳಲಾಗಿದೆ. ಸಾತ್ವತ ಸಂಹಿತೆಯು ಹೇಳುವಂತೆ ಈತನ ದೇಹವು ತನ್ನಿಂದಲೇ ಹೊರಟ ಜ್ವಾಲೆಗಳಿಂದ ಆವೃತ ವಾಗಿರುತ್ತದೆ. ಮಹಾ ಭೀಮಕಾಯನಾಗಿರುವ ನರಸಿಂಹನಿಗೆ ತನ್ನ ಸುತ್ತಲ ಜ್ವಾಲೆಗಳು ಒಂದು ರೀತಿಯ ಆವರಣವೂ, ಅಲಂಕರಣವೂ ಆಗಿದೆಯೆಂದರೆ ಅಡ್ಡಿಯಿಲ್ಲ.

ವಿಷ್ಣು ಧರ್ಮೋತ್ತರ ಪುರಾಣವು ನರಸಿಂಹನನ್ನು ವಿಷ್ಣುವಿನ ಸಂಕರ್ಷಣ ರೂಪದೊಡನೆ ಗುರುತಿಸುತ್ತದೆ. 'ಹರಿಸ್ಸಂಕರ್ಷಣ ರೂಪೇಣ ನರಸಿಂಹ ವಪುರ್ಧರಃ' ಎಂಬ ನುಡಿಯನ್ನು ಗಮನಿಸಬೇಕು. ಹಿರಣ್ಯಕಶ್ಯಪನು ಅಜ್ಞಾನದ ಪ್ರತೀಕವೆಂದೂ, ಇದನ್ನು ನಾಶಪಡಿಸುವ ಕಾರಣದಿಂದ ನರಸಿಂಹನ ಆಗಮನವಾಯಿತು ಎಂಬ ಅರ್ಥದ ವಾಕ್ಯವೊಂದು ಈ ಪುರಾಣದಲ್ಲಿ ಕಂಡು ಬರುತ್ತದೆ. ಕಾಯ-ವಚನ-ಮನಸ್ಸುಗಳಿಂದ ಉಂಟಾಗತಕ್ಕ ಪಾಪಗಳನ್ನು ನರಸಿಂಹ ರೂಪವನ್ನು ಧರಿಸಿರುವ ಸಂಕರ್ಷಣನು ಹರಿಸುವನೆಂದು ಇಲ್ಲಿ ಹೇಳಲಾಗಿದೆ. ಎಲ್ಲ ಅಜ್ಞಾನಗಳ ನಾಶಕರನಾದವನು ನರಸಿಂಹ. ಈ ನರಸಿಂಹನ ಕೇವಲ ರೂಪವು ಶುದ್ಧ ಜ್ಞಾನವನ್ನು ಉಂಟು ಮಾಡುವಂತಿರುವುದು. ಇದರಿಂದಾಗಿ ಕರ್ಮ ಸಂಯೋಗದಿಂದ ಉಂಟಾಗಬಹುದಾದ ಭೀತಿ ನಿವಾರಣೆಯಾಗುತ್ತದೆ.

ನರಸಿಂಹನ ಅಲಂಕಾರಕ್ಕೆ ವಿಶೇಷ ಗಮನವನ್ನು ಕೊಟ್ಟಿರುವುದನ್ನು ಸಂಹಿತೆಗಳು, ಪುರಾಣಗಳು ವಿವರಿಸುತ್ತವೆ. ಈತನು ಉಟ್ಟ ಬಟ್ಟೆಯು ಕೆಂಪಾಗಿದೆಯೆಂದು ಪಾದ್ಮ ಸಂಹಿತೆಯಲ್ಲಿ ಹೇಳಲಾಗಿದೆ. ಈತನನ್ನು ಕುರಿತಾದ ಸ್ತೋತ್ರಗಳು ಅರ್ಚನಾವಿವರಗಳೂ

ಸಹ ರಕ್ತ ವಸ್ತ್ರಧರಂ ಎಂದೇ ತಿಳಿಸುತ್ತವೆ. ವಿಷ್ಣು ಧರ್ಮೋತ್ತರದಲ್ಲಿ ಮಾತ್ರ ಈತ ನೀಲಿ ವಸ್ತ್ರಗಳನ್ನು ಧರಿಸಿರುವನೆನ್ನಲಾಗಿದೆ. ಸಾತ್ವತ ಸಂಹಿತೆಯಲ್ಲಿ ಪೀತವರ್ಣ ವಸ್ತ್ರಧಾರಿ ಯಾಗಿದ್ದಾನೆ. ಒಟ್ಟಿನಲ್ಲಿ ಮೂರು ವಿವಿಧ ಬಣ್ಣದ ವಸ್ತ್ರಗಳನ್ನು ನರಸಿಂಹನಿಗೆ ತೊಡಿಸಿ ರುವುದು ಕೂಡಾ ಅರ್ಥಪೂರ್ಣವಾಗಿದೆ.

ನರಸಿಂಹ ಶರೀರಕ್ಕೆ ರಕ್ತ ಚಂದನವನ್ನು ಲೇಪಿಸುತ್ತಾರೆ. ವಿಷ್ವಕ್ಸೇನ ಸಂಹಿತೆಯು ಈ ಅಂಶವನ್ನು ಖಚಿತಪಡಿಸುತ್ತದೆ. ಸಿಂಹಾಚಲದ ಸ್ವಾಮಿಯು ಸದಾಕಾಲ ಚಂದನಾ ವೃತನಾಗಿರುತ್ತಾನೆ. ಅಕ್ಷ ತದಿಗೆಯಂದು ಮಾತ್ರ ಇದರ ವಿಸರ್ಜನ. ಮರುಕ್ಷಣದಲ್ಲಿ ಮತ್ತೆ ಲೇಪನ. ಯಜ್ಞೋಪವೀತ ಧರಿಸಿದ ನರಸಿಂಹ ಶಿಲ್ಪಗಳನ್ನೂ ಕಾಣಬಹುದು. ಪ್ರಾಚೀನ ಶಿಲ್ಪಗಳು ಈ ರೀತಿಯಲ್ಲಿವೆ.

ನರಸಿಂಹ ಅಷ್ಟೋತ್ತರದಲ್ಲಿ ಬರುವ ಶ್ರೀವತ್ಸಾಂಕವೆಂಬ ನಾಮವಿಶೇಷಣವನ್ನು ಆಧರಿಸಿ ಹೇಳುವುದಾದರೆ ಇದು ವಿಷ್ಣುವಿನ ಸಾಮಾನ್ಯ ಗುಣವೂ ಆಗಿ ಕಂಡು ಬರುತ್ತದೆ. ಕೌಸ್ತುಭವಂತೂ ಇರಲೇಬೇಕು. ಉಳಿದ ಆಭರಣ, ಅಲಂಕಾರಗಳು ಆಯಾಕಾಲದ ಶಿಲ್ಪ ವಿಧಾನ ವೈವಿಧ್ಯಗಳಿಗೆ ಅನುಗುಣವಾಗಿ ಗಮನಕ್ಕೆ ಬರುತ್ತವೆ. ಹೊಯ್ಸಳರ ಕಾಲದ ನರಸಿಂಹ ಶಿಲ್ಪಗಳಂತೂ ಬಗೆಬಗೆಯ ಆಭರಣ ವಿವರಗಳಿಂದ ಮನ ಸೆಳೆಯುತ್ತವೆ.

ಮಹಾವಿಷ್ಣುವಿನ ಅವತಾರ ರೂಪಿಯಾದ ನರಸಿಂಹ ದೇವರಿಗೆ ಭಾರತ ದೇಶದಲ್ಲೆಲ್ಲ ಒಂದಲ್ಲ ಒಂದು ರೀತಿಯಲ್ಲಿ ಮನ್ನಣೆ ನೀಡುತ್ತ ಬರಲಾಗಿದೆ. ನಾಲ್ಕಾರು ರಾಜ್ಯಗಳಲ್ಲಿ ಯಂತೂ ಅತಿಶಯವಾದ, ವೈಭವದಿಂದ ನರಸಿಂಹನ ಆರಾಧನೆ ನಡೆದುಕೊಂಡು ಬಂದಿದೆ. ಪ್ರಧಾನವಾಗಿ ಕರ್ನಾಟಕ, ಆಂಧ್ರಪ್ರದೇಶ, ತಮಿಳುನಾಡುಗಳಲ್ಲಿ ಕ್ವಚಿತ್ತಾಗಿ ಮಹಾರಾಷ್ಟ್ರ, ಬಿಹಾರ, ಕೇರಳಗಳಲ್ಲಿ ಈ ಅವತಾರದ ರೂವಾರಿಗಳು ಮನ್ನಣೆ ಪಡೆದಿದ್ದಾರೆ. ಈ ರಾಜ್ಯಗಳಲ್ಲಿ ನಿತ್ಯೋತ್ಸವ, ವಾರೋತ್ಸವ, ಪಕ್ಷೋತ್ಸವ, ಮಾಸೋತ್ಸವ, ಸಂವತ್ಸರೋತ್ಸವ ಗಳಲ್ಲಿ ಆರಾಧಿಸಲ್ಪಡುವ ನರಸಿಂಹನ ರೂಪ ವಿಶ್ಲೇಷಣೆಯನ್ನು ವೇದ, ಪುರಾಣ, ಉಪ ನಿಷತ್‌ಗಳಿಂದಲೂ, ಇತಿಹಾಸ ಸಾಹಿತ್ಯ ಸ್ತೋತ್ರಗಳ ಮೂಲಕವಾಗಿಯೂ ಪರಿಶೀಲಿಸುವುದು ಪ್ರಸ್ತುತವಾಗಿದೆ.

## ಅರ್ಚಾ ಮೂರ್ತಿ

*ಶೈಲೀ ದಾರುಮಯೀ ಲೌಹೀ ಲೇಪ್ಯಾ ಲೇಖ್ಯಾ ಚ ಸೈಕತೀ /*
*ಮನೋಮಯೀ ಮಣಿಮಯೀ ಪ್ರತಿಮಾಷ್ಟ ವಿಧಾ ಸ್ಮೃತಾ //*

ಇಂದು ಕಂಡು ಬರುವ ಅರ್ಚಾಮೂರ್ತಿಗಳನ್ನು ಮೇಲಿನ ಶ್ಲೋಕದಲ್ಲಿ ತಿಳಿಸಿರುವಂತೆ ಎಂಟು ಬಗೆಯಾಗಿ ವಿಂಗಡಿಸಬಹುದು. ಕಲ್ಲು, ಮರ, ಲೋಹ, ಗಾರೆ, ಮಣ್ಣು, ಚಿತ್ರ, ಮನಸ್ಸು, ಮಣಿಗಳಿಂದ ಆದ ಮೂರ್ತಿಗಳು. ಕಲ್ಲು ಮತ್ತು ಲೋಹದ ಮೂರ್ತಿಗಳು

ಸಾಕಷ್ಟು ಪ್ರಮಾಣದಲ್ಲಿ ದೊರೆಯುತ್ತವೆ. ಇವುಗಳ ಬಗ್ಗೆ ಬೃಹತ್ ಕೋಶಗಳು ಪ್ರಚಾರಕ್ಕೆ ಬಂದಿವೆ. ಸಂಖ್ಯೆಯಲ್ಲಿ ಗಣನೀಯವಾಗಿರುವಂತೆ ತಮ್ಮ ರೂಪ, ಆಕಾರಗಳಲ್ಲಿ ಸಹ ಇವು ವಿಶಿಷ್ಟವಾಗಿವೆ. ದಾರು ಶಿಲ್ಪಕ್ಕೆ ಪುರಿಯ ಬಲಭದ್ರ, ಸುಭದ್ರ, ಕೃಷ್ಣಭದ್ರರನ್ನೂ ಉದಾಹರಿಸಬಹುದು. ಪ್ರಾಚೀನ ಜನಾಂಗಗಳವರು ಕಾಷ್ಠ ಶಿಲ್ಪಗಳನ್ನು ಪೂಜಿಸುತ್ತಿದ್ದರು. ಅರಮನೆಗಳಲ್ಲಿ ಇವು ಈಗಲೂ ಬಳಕೆಯಲ್ಲಿವೆ ಎನ್ನಬೇಕು. ಕಲ್ಲಿನಲ್ಲಿ ಮೂರ್ತಿಯನ್ನು ಕೊರೆಯುವುದಕ್ಕಿಂತ ಮೊದಲಿಗೆ ಹಾಗೂ ಕಲ್ಲಿನಲ್ಲಿ ಕೊರೆಯುವುದಕ್ಕಿಂತ ಸುಲಭವಾಗಿ ಸಿದ್ಧವಾಗುವ ದಾರು ಮೂರ್ತಿಗಳಿಗೆ ಮೊದಲು ಬಹಳ ಬೆಲೆಯಿದ್ದಿರಬೇಕು. ಆದರೂ ನಮ್ಮವರೆಗೆ ಬಂದಿರುವ ಮೂರ್ತಿಗಳು ಕ್ವಚಿತ್ತು, ಎಂದರೆ ಅದಕ್ಕೆ ಕಲ್ಲಿನ ಮೂರ್ತಿಗಳಿಗೆ ಹೋಲಿಸಿದರೆ ಮರದಿಂದ ಮಾಡಿದ ಮೂರ್ತಿಗಳ ಆಯಸ್ಸು ಕಡಮೆ ಎನ್ನುವುದು ಒಂದು ಕಾರಣವಾದರೆ ಬೆಂಕಿ, ನೀರು, ಶಸ್ತ್ರಗಳಿಂದ ಕಲ್ಲು ಹೆಚ್ಚು ಸುರಕ್ಷಿತ ಎಂಬುದೂ ಒಂದು ಕಾರಣವಾಗಿರಬಹುದು. ಹೀಗಾಗಿಯೇ ಕ್ರಿಸ್ತಪೂರ್ವದ ಮೂರ್ತಿಗಳ ಬಗ್ಗೆ ಹೆಚ್ಚಿಗೆ ಏನನ್ನೂ ಹೇಳಲಾಗದಷ್ಟು ಅಧ್ಯಯನ ಕೊರೆಯಾಗುತ್ತದೆ.

ಅರ್ಚಾ ಮೂರ್ತಿಗಳ ನಿರ್ಮಾಣದ ಹಿನ್ನೆಲೆಯಲ್ಲಿ ಒಂದು ದೇಶದ, ಕಾಲದ, ನಿರ್ದಿಷ್ಟ ಜನಾಂಗದ ಅಭಿರುಚಿ, ಆಕಾಂಕ್ಷೆ, ಆಲೋಚನೆಗಳು ಅಡಕವಾಗಿರುತ್ತವೆ. ವೆಂಕಟೇಶ್ವರ ಸ್ವಾಮಿ ಸ್ವಲ್ಪ ವ್ಯತ್ಯಾಸದಿಂದ ಚನ್ನಕೇಶವನಾಗಿ ಅರ್ಚನೆಗೊಳಗಾಗುತ್ತಾನೆ. ವರದರಾಜ, ಗೋವಿಂದರಾಜ, ವಿಷ್ಣುವಿನ ಅನೇಕ ರೂಪಗಳಂತೂ ವಿವಿಧ ನಾರಾಯಣರಾಗಿ ಪೂಜೆಗೊಳ್ಳು ತ್ತಿದ್ದಾರೆ.

ದೇವಾಲಯಗಳು ಶಿಲ್ಪಶಾಸ್ತ್ರಕ್ಕೆ ಅಧಿಕ ಮನ್ನಣೆ ನೀಡಿರುವ ತಾಣಗಳಾಗಿ ಶೋಭಿಸು ತ್ತಿವೆ. ನರಸಿಂಹ ಶಿಲ್ಪಗಳಿಗೆ ಸಂಬಂಧಿಸಿದ ಹಾಗೆ ಒಂದೆರಡು ವಿಚಾರಗಳು ಇಲ್ಲಿ ಉಲ್ಲೇಖನೀಯವಾದೀತು. ಮರದ ಟೊಂಗೆಯಲ್ಲಿ ಅಥವಾ ಪೊಟರೆಯಲ್ಲಿ ಆವಾಸಸ್ಥಾನ ವನ್ನು ಕಂಡುಕೊಂಡಿರುವ ವೃಕ್ಷ ರೂಪೀ ನರಸಿಂಹನ ಆರಾಧನೆಗೆ ಕೊಪ್ಪ ಕ್ಷೇತ್ರವು ಪ್ರಸಿದ್ಧವಾಗಿದ್ದರೆ, ಕೇವಲ ಒಂದು ಬಟ್ಟಲಿನ ಅಥವಾ ಸಾಲಿಗ್ರಾಮದ ಹಾಗೂ ಗುಂಡಾಗಿರುವ ಶಿಲೆಯನ್ನು ಶೀಬಿ ಹಾಗೂ ಕನಕಗಿರಿಯಲ್ಲಿ ಆರಾಧಿಸುತ್ತಾರೆ. ಸಿಂಹಾಚಲದ ವರಾಹ ನರಸಿಂಹನಂತೂ ಇತಿಹಾಸ ಪ್ರಸಿದ್ಧ. ಗುಹಾರೂಪದಲ್ಲಿ ಕೂಡ ಈತನ ಅಸ್ತಿತ್ವವನ್ನು ಕೆಲವೆಡೆ ಕಂಡುಕೊಳ್ಳಬಹುದಾಗಿದೆ.

ನರಸಿಂಹನ ಆರಾಧನೆ ಮೊದಲಿಗೆ ಪ್ರಕೃತಿಯಲ್ಲಿ ದೊರೆತ ರೂಪದಿಂದಲೇ ಆಗಿದ್ದಿರಬೇಕು. ಕಾಲಕ್ರಮದಲ್ಲಿ ಒಂದೊಂದಾಗಿ ಗೆರೆಗಳನ್ನು ಪಡೆದುಕೊಂಡು ಖಚಿತವಾದ ರೂಪವನ್ನು ಪಡೆದಿರುವುದನ್ನು ಕಾಣಬಹುದು.

> *ಮಾತಾ ನೃಸಿಂಹಶ್ಚ ಪಿತಾ ನೃಸಿಂಹಃ ಭ್ರಾತಾ ನೃಸಿಂಹಶ್ಚ ಸಖಾ ನೃಸಿಂಹಃ*
> *ವಿದ್ಯಾ ನೃಸಿಂಹಃ ದ್ರವಿಣಂ ನೃಸಿಂಹಃ ಸ್ವಾಮೀ ನೃಸಿಂಹಃ ಸಕಲಂ ನೃಸಿಂಹಃ*



## ಅಧ್ಯಾಯ - 1

# ಸಾಲಿಗ್ರಾಮ

ಮನುಷ್ಯ ಮೊದಲಿಗೆ ಪ್ರಕೃತಿಯಲ್ಲಿ ಸಿದ್ಧರೂಪದಲ್ಲಿ ದೊರೆತ ವಸ್ತು ವಿಷಯಗಳನ್ನೇ ದೇವರೆಂದು ತಿಳಿದು ಆರಾಧಿಸತೊಡಗಿದನೆಂಬುದನ್ನು ಎಲ್ಲ ಜನಾಂಗಗಳ ಚರಿತ್ರೆಯಲ್ಲಿಯೂ ಕಾಣಬಹುದು. ಸೂರ್ಯ, ಚಂದ್ರ, ನದಿ, ಬೆಟ್ಟ, ಮರ, ಹುಲ್ಲು ಎಲ್ಲವನ್ನೂ ಹಲವು ಹನ್ನೊಂದು ಕಾರಣಗಳಿಗಾಗಿ ಪೂಜಿಸುತ್ತ ಬಂದ ಮನುಷ್ಯ ತಾನು ಈ ದೈವಿಕ ವಸ್ತು ವ್ಯಕ್ತ ವಿಷಯಗಳಲ್ಲಿ ವಿಶ್ವಾಸದಿಂದ, ಪ್ರೀತಿಯಿಂದ, ಭಕ್ತಿಯಿಂದ ಮಿಗಿಲಾಗಿ ಭಯದಿಂದ, ನಡೆದುಕೊಳ್ಳುತ್ತ ಬಂದಂತೆ, ದೇವರ ಹೊಸ ಹೊಸ ರೂಪಗಳನ್ನು ಹುಡುಕುತ್ತ ಸ್ವಾಮಿಯ ಅನ್ವೇಷಣೆ ನಡೆದಂತೆಲ್ಲಾ ಸ್ವಾಮಿಯ ಸ್ವರೂಪವು ಸ್ಪಷ್ಟವಾಗುತ್ತ ನಡೆಯಿತು.

ನದಿಯನ್ನು, ನೀರನ್ನು ಪೂಜಿಸುತ್ತಿರುವಂತೆಯೇ ನೀರಿನೊಳಗೆ ಇರುವ ಶಿಲೆ ಯಲ್ಲಿಯೂ ದೇವರನ್ನು ಕಾಣುವ ಒಂದು ಪ್ರಯತ್ನ ಸಾಲಿಗ್ರಾಮ ಪೂಜೆಯಲ್ಲಿ ಸಾಕ್ಷಾತ್ಕಾರ ವಾಗಿದೆಯೆಂಬುದನ್ನು ತಿಳಿಯುವುದರಲ್ಲಿ ತೊಂದರೆಯೇನಿಲ್ಲ. ಸಾಲಿಗ್ರಾಮದಲ್ಲಿ ದೈವವನ್ನು ಕಾಣುವ ಪ್ರಯತ್ನ ಮನುಷ್ಯನ ಆದಿ ಪ್ರಯತ್ನಗಳಲ್ಲಿ ಒಂದು ಎಂಬುದನ್ನು ಅದರೊಂದಿಗೇ ಹೆಣೆದುಕೊಂಡು ಬಂದಿರುವ ತುಳಸಿಯ ಕಥೆಯಿಂದ ತಿಳಿಯಬಹುದು. ಇಂದಿನ ಮನುಷ್ಯನ ಬುದ್ಧಿಗೆ ನಿಲುಕದ - ದೇವರ ಸುಗುಣಗಳ ಸಾಲಿಗೆ ಅಪವಾದವೆನ್ನಬಹುದಾದ ಕಥೆ ತುಳಸಿಯ ಕಥೆ. ಅಂದಿಗೆ ಅದು ಸಹಜವು, ಸೂಕ್ತವೂ ಆಗಿದ್ದಿರಬೇಕು. ಅದನ್ನು ಪುರಾಣ ಸಮುಚ್ಚಯದಲ್ಲಿ ಉಳಿಸಿಕೊಂಡು ಬಂದಿರುವುದರಿಂದ ಬೆಳವಣಿಗೆಯ ಹಂತಗಳಲ್ಲಿ ಒಂದನ್ನು ಗುರುತಿಸಿದಂತೆ ಆಗುತ್ತದೆಯಷ್ಟೆ.

ಭಾರತೀಯರ ಮನೆಯಂಗಳದಲ್ಲಿ ಪವಿತ್ರವಾದ ತುಳಸಿಯನ್ನು ಬೆಳೆಸಿ ಪೂಜಿಸುವ 'ತರು ಪೂಜೆ' ಪದ್ಧತಿಯಿದ್ದರೆ, ಹಲವು ಸಂಪ್ರದಾಯ ನಿಷ್ಠರ ಮನೆಗಳಲ್ಲಿ ಸಾಲಿಗ್ರಾಮ ಸಂಪುಟವನ್ನು ಇಟ್ಟುಕೊಂಡು ಅದರ ನಿತ್ಯಪೂಜೆ ನಡೆಯುವುದನ್ನು ಕಾಣಬಹುದು.

ಪಡೆದ ಕವಚವನ್ನು ವಿಷ್ಣುವು ತನ್ನ ಮಾಯೆಯಿಂದ ಕಸಿದುಕೊಂಡನು. ಜೊತೆಗೇ ಅವನಿಗೆ ವಜ್ರಕವಚವಾಗಿದ್ದ ತುಳಸಿಯ ಪಾತಿವ್ರತ್ಯವನ್ನು ಹಾಳು ಮಾಡಿದ. ಶಖಚೂಡನ ವೇಷದಲ್ಲಿ ಬಂದವನು ತನ್ನ ಪುರುಷನಲ್ಲವೆಂದು ತಿಳಿದ ತುಳಸಿ ವಿಷ್ಣುವನ್ನು ಕಲ್ಲಾಗಲು ಶಪಿಸಿದಳು. ತನ್ನ ಪಾವಿತ್ರ್ಯ ನಾಶವಾದದ್ದರಿಂದ ಗಂಡಕೀನದಿಯಲ್ಲಿ ಆತ್ಮಾರ್ಪಣ ಮಾಡಿದಳು. ಅವಳು ಗಂಡಕೀನದಿಯ ನೀರಾಗಿ ಹರಿದಳು. ಶಾಪಗ್ರಸ್ತನಾದ ವಿಷ್ಣು ಗಂಡಕೀನದಿಯಲ್ಲಿ ಶಿಲಾರೂಪವಾಗಿ ನಿಂತ.

ನಿಸರ್ಗವು ಅನೇಕ ಚಮತ್ಕಾರಗಳನ್ನು ನಮಗೆ ನೀಡಿದೆ. ಇವುಗಳಲ್ಲಿ ಉನ್ನತವಾದ ಪರ್ವತಗಳಿವೆ, ಆಳವಾದ ಸಮುದ್ರಗಳಿವೆ, ಹರಿಯುವ ನೀರಿದೆ, ಬೀಸುವ ಗಾಳಿಯಿದೆ, ಹಾಗೆಯೇ ಸಾಲಿಗ್ರಾಮ ಶಿಲೆಗಳಿವೆ. ಗಂಡಕೀನದಿ ಭಾರತದ ಉತ್ತರದಲ್ಲಿನ ನೇಪಾಳದಲ್ಲಿ ಹರಿಯುವ ನದಿ. ಇಲ್ಲಿನ ನೀರಿನ ಕಲ್ಲುಗಳನ್ನು ಸಾಲಿಗ್ರಾಮಗಳೆನ್ನುವರು. ಸಾಲಿಗ್ರಾಮಗಳ ಉತ್ಪತ್ತಿಸ್ಥಾನವಾದ ಈ ನದಿಯೇ ಸಾಲಿಗ್ರಾಮದ ತವರು ಎಂದು ಹೇಳಬಹುದು. ಇಲ್ಲಿ ನದಿಯ ದಂಡೆಯಲ್ಲಿ ಒಂದು ರೀತಿಯ ಕೀಟ ಕೊರೆಯುವುದರಿಂದ ಶಿಲೆಗಳಲ್ಲಿ ರೇಖಾಚಿತ್ರಗಳುಂಟಾಗಿ ಅವುಗಳಲ್ಲಿ ಹತ್ತು ಹಲವು ದೈವದ ರೂಪಗಳನ್ನು ಕಂಡುಕೊಂಡು ಗೌರವಾದರಗಳಿಂದ ಅವುಗಳನ್ನು ಹುಡುಕಿ ತಮಗೆ ಬೇಕಾದ ಮೂರ್ತಿಯ ಸಾಲಿಗ್ರಾಮಗಳನ್ನು ಜೋಪಾನವಾಗಿ ಮನೆಗೆ ತಂದು ಸಂಪುಟದಲ್ಲಿಟ್ಟು ಪೂಜೆ ಮಾಡಲಾಗುತ್ತದೆ. ಸುಮಾರು ರೀತಿಯ ಚಕ್ರಗಳಿಂದಾದ ಸಾಲಿಗ್ರಾಮಗಳನ್ನು ಗುರುತಿಸಲಾಗಿದೆಯಾದರೂ ಎಲ್ಲವನ್ನೂ ವಿಷ್ಣುವಿನ ವಿವಿಧ ಹೆಸರುಗಳಲ್ಲಿಯೇ ಗುರುತಿಸಲಾಗಿದೆಯೆಂದು ಗಮನಿಸಬೇಕು.

ಸಾಲಿಗ್ರಾಮಗಳಲ್ಲಿ ಎರಡು ವಿಧ. ಒಂದು ಸಣ್ಣ ಸಣ್ಣ ರೂಪದಲ್ಲಿ ಪೂಜೆಗೆ ದೊರೆಯುವುದು. ಮತ್ತೊಂದು ಭಾರೀ ಭಾರೀ ಗಾತ್ರದಲ್ಲಿದ್ದು ಪೂಜೆಗೆ ಒದಗುವುದು. ಇಂತಹ ದೊಡ್ಡ ದೊಡ್ಡ ಶಿಲೆಗಳನ್ನು ತಂದು ದೇವತಾ ಮೂರ್ತಿಗಳನ್ನು ಕಡೆಯಲಾಗುತ್ತದೆ. ಇದರಲ್ಲಿ ಹರಿಯು ಸರ್ವದಾಸನ್ನಿಹಿತನಾಗಿರುತ್ತಾನೆ.

*ಸಾಲಗ್ರಾಮ ಶಿಲಾ ಯತ್ರ ತತ್ರ ಸನ್ನಿಹಿತೋ ಹರಿಃ/*
*ತತ್ರೈವ ಲಕ್ಷ್ಮೀರ್ವಸತಿ ಸರ್ವತೀರ್ಥ ಸಮನ್ವಿತಾ//*

ಎಲ್ಲಿ ಸಾಲಿಗ್ರಾಮ ಶಿಲೆಯಿರುವುದೋ ಅಲ್ಲಿ ಹರಿಯು ಸನ್ನಿಹಿತನಾಗಿರುತ್ತಾನೆ. ಅಲ್ಲಿಯೇ ಲಕ್ಷ್ಮಿಯು ಸರ್ವತೀರ್ಥ ಸಮನ್ವಿತಳಾಗಿ ವಾಸ ಮಾಡುತ್ತಾಳೆ. ಇಂತಹ ಸಾಲಿಗ್ರಾಮದ ಪೂಜೆ ಮಾಡಿ ದಿನವೂ ತೀರ್ಥವನ್ನು ಸ್ವೀಕರಿಸುವ ಆಚಾರ ನಮ್ಮಗಳಲ್ಲಿದೆ.

ಭಕ್ತಿಯನ್ನು ನವವಿಧವೆಂದು ಬಣ್ಣಿಸಲಾಗಿದೆ. ವಿಷ್ಣುವಿನ ಕಥೆಯನ್ನು ಕೇಳುವಿಕೆ, ಅವನನ್ನು ಸ್ತುತಿಸುವಿಕೆ, ಅವನನ್ನು ನೆನೆಯುವಿಕೆ, ಅವನ ಪಾದಗಳ ಸೇವೆ, ಅವನ ಅರ್ಚನೆ, ಅವನಿಗೆ ನಮನ ಮಾಡುವಿಕೆ, ಅವನ ಊಳಿಗ ಮಾಡುವಿಕೆ, ಅವನ ಸ್ನೇಹವನ್ನು ಬಯಸುವಿಕೆ, ಅವನಲ್ಲಿ ಆತ್ಮಸಮರ್ಪಣೆ ಮಾಡುವುದು. ಈ ರೀತಿಯ ಭಕ್ತಿಯ ಅಭಿವ್ಯಕ್ತಿ ಮಾರ್ಗಗಳಲ್ಲಿ ಅರ್ಚನಾ ಪದ್ಧತಿಗೆ ಪ್ರಾಮುಖ್ಯ ಹೆಚ್ಚು. ಭಾರತೀಯರ ಧರ್ಮಶ್ರದ್ಧೆಯಲ್ಲಿ

ಕಂಡುಬರುವ ಮಹತ್ವವನ್ನು ಪೂಜಾದಿ ಕಾರ್ಯಕ್ರಮಗಳಲ್ಲಿ ನಾವಿಂದು ಕಾಣಬಹುದಾಗಿದೆ. ಭಗವಂತನ ಪೂಜೆಯನ್ನು ಬರಿಯ ನೆಲದ ಮೇಲೆ ಮಾಡಲಾಗದು. ಅದಕ್ಕಾಗಿಯೇ ಸಾಲಿಗ್ರಾಮವನ್ನು ಆರಿಸಿಕೊಂಡಿರಬಹುದು. 'ಶಾಲಗ್ರಾಮೇ ಮಣೌ ಯಂತ್ರೇ ತಂಡುಲೇ ಪ್ರತಿಮಾದಿಷು' ಎಂಬಲ್ಲಿ ಬರಿಯ ನೆಲದ ಮೇಲೆ ಇಟ್ಟು ಪೂಜೆ ಮಾಡಬಾರದೆಂದಿದೆ.

ಸಾಲಿಗ್ರಾಮಗಳ ರೂಪಗಾತ್ರಗಳು ಸಹ ಪರಿಶೀಲನಾರ್ಹವಾಗಿವೆ. ಸಾಮಾನ್ಯವಾಗಿ ನಿಂಬೆ ಹಣ್ಣಿನ ಗಾತ್ರದಿಂದ ಹಿಡಿದು ಬೇಲದ ಹಣ್ಣಿನ ಗಾತ್ರದವರೆಗಿನ ಸಾಲಿಗ್ರಾಮಗಳು ಮನೆ ಮಠಗಳಲ್ಲಿ ಯಥಾವತ್ ಪೂಜಾರ್ಹವಾದವು. ಇನ್ನು ದೊಡ್ಡವು ಇರಬಹುದಾದರೂ ಅವುಗಳು ಮೂಲರೂಪದಲ್ಲಿ ಅಷ್ಟೊಂದು ಶ್ರೇಷ್ಠವಲ್ಲ. ಸಾಲಿಗ್ರಾಮದಲ್ಲಿ ಅದರ ಬಾಯಿ, ಮುಖ, ವದನ ಎನ್ನಿಸಿಕೊಳ್ಳುವ ಭಾಗ ಮುಖ್ಯವಾದದ್ದು. ಇದನ್ನು ಡೊಗರು ಎನ್ನಲಾಗಿದೆ. ನದಿಯಿಂದ ಶಿಲೆಯನ್ನು ಕೈಗೆತ್ತಿಕೊಂಡು ಕೈಯಿಂದಲಾಗಲೀ ಸಣ್ಣ ಬಡಿಗೆಯಿಂದ ಲಾಗಲೀ ಬಡಿದರೆ ಪುಡಿಯು -ಶಿಲಾರಜವು- ಕೆಳಗುರುಳಿ ಡೊಗರು ಕಾಣಿಸಿಕೊಳ್ಳುತ್ತದೆ.

ಸಾಲಿಗ್ರಾಮದಲ್ಲಿನ ಸುರುಳಿಗಳು ಒಂದರಿಂದ ಹನ್ನೆರಡರವರೆಗೆ ಕೋಶದಂತೆ ಇರುತ್ತದೆ. ಅಥವಾ ಇವು ಉದ್ದವಾಗಿ ಕೇಸರಾಕಾರವಾಗಿಯೂ ಇರಬಹುದು. ಇದರ ಮೂರ್ತಿ ಎಂದರೆ ಆಕಾರವು ವಿಶಿಷ್ಟ ಆಗಿರುತ್ತದೆ. ಗಾತ್ರ (ಸ್ಥೂಲ ಅಥವಾ ಸೂಕ್ಷ್ಮ) ಪರಿಮಾಣ, ಪ್ರಮಾಣ, ಆಸನ ಮುದ್ರೆ ಮೊದಲಾದ ವಿವರಗಳೂ ಗಮನಾರ್ಹವಾದವು. ಸಾಲಿಗ್ರಾಮಗಳ ಪರೀಕ್ಷೆ ಸಹ ಕಷ್ಟಕರವಾದುದೆಂದು ಹೇಳಲಾಗಿದೆ.

ಸಾಲಿಗ್ರಾಮಗಳಲ್ಲಿ ಹಲವು ಬಗೆಗಳುಂಟು. ವಿಷ್ಣುವಿನ ಅವತಾರ ಮೂರ್ತಿಗಳು, ವ್ಯೂಹ ಮೂರ್ತಿಗಳು ಇವುಗಳನ್ನಾಧರಿಸಿದಂತೆ ವೈವಿಧ್ಯಗಳುಂಟು. 'ಹಿರಣ್ಯ ವಜ್ರಕೀಟೇನ ನಿರ್ಮಿತಂ ಚಕ್ರಮುತ್ತಮಂ' ಎಂದು ಹೇಳಲಾಗುತ್ತದೆ. 'ಪೀಠ ಪದ್ಮಾದಿ ಭೇದೇನ ಚಕ್ರಂ ಬಹುವಿಧಂ ಸ್ಮೃತಂ' ಎಂದೂ ಹೇಳಲಾಗಿದೆ. ಹಾಲಿನಲ್ಲಿಯಾಗಲೀ, ಅಕ್ಕಿಯಲ್ಲಿಯಾಗಲೀ ಸಾಲಿಗ್ರಾಮವನ್ನು ಇರಿಸಿದರೆ, ಅದು ಸರಿಯಾದ ಸಾಲಿಗ್ರಾಮವಾಗಿದ್ದಲ್ಲಿ ತುಸು ಸಮಯದ ನಂತರ ಅವುಗಳ ಪ್ರಮಾಣದಲ್ಲಿ ಸ್ವಲ ಆಧಿಕ್ಯವನ್ನು ಕಾಣಬಹುದು ಎನ್ನುವರು. ಅತೀ ಸಣ್ಣದ್ದೂ ಅಲ್ಲದ ಅತಿ ಗಾತ್ರದ್ದೂ ಅಲ್ಲದ ರೂಪ ಲಕ್ಷಣೋಪೇತವಾದ ಸಾಲಿಗ್ರಾಮವನ್ನು ಪೂಜಿಸುವುದರಿಂದ ಗೃಹಸ್ಥರಿಗೆ ಸಂತಾನ, ಸಂಪತ್ತು, ಸುಖಗಳು ಪ್ರಾಪ್ತಿಯಾಗುತ್ತವೆ.

ಸಾಲಿಗ್ರಾಮದ ಬಣ್ಣಗಳೂ ಸ್ವಾರಸ್ಯಕರವಾಗಿರುತ್ತದೆ. ಸೂಕ್ಷ್ಮ ಪರೀಕ್ಷಣದಲ್ಲಿ ಅವುಗಳಲ್ಲಿ ಹಲವು ಬಣ್ಣಗಳು ಕಂಡುಬರುತ್ತದೆ. ಕೆಂಪು ಮಿಶ್ರಿತ ಕಪ್ಪು, ಹಸಿರುಗಪ್ಪು, ಬಿಳಿ, ಕೆಂಪು, ಕಪ್ಪಿನ ಮೇಲೆ ನಸುಗಪ್ಪು, ಕಪ್ಪು, ಹಳದಿ ಮೊದಲಾದ ಬಣ್ಣಗಳು ಇವು ಗಳಲ್ಲಿ ಪ್ರಮುಖವಾದವು. ನರಸಿಂಹ ಸಾಲಿಗ್ರಾಮವು ಕೆಂಪು ಮಿಶ್ರಿತ ಕಪ್ಪು ಬಣ್ಣದ್ದಾದರೆ ಸಂಕರ್ಷಣ ಸಾಲಿಗ್ರಾಮವು ಕೆಂಪು ಬಣ್ಣದ್ದಾಗಿರುತ್ತದೆ. ವಾಸುದೇವ ಸಾಲಿಗ್ರಾಮ ಬಿಳಿ ಬಣ್ಣದ್ದು. ಅನಿರುದ್ಧ ಸಾಲಿಗ್ರಾಮ ಕಪ್ಪು ಬಣ್ಣದ್ದು. ನಾರಾಯಣ ಸಾಲಿಗ್ರಾಮ ಹಳದಿ ಬಣ್ಣದ್ದಾಗಿರುತ್ತದೆ. ಹಲವು ವರ್ಣ ಸಮ್ಮೇಳನವಾದ ಶ್ರೀಧರ ಸಾಲಿಗ್ರಾಮವೂ ಇದೆ.

# ನರಸಿಂಹ ಸಾಲಿಗ್ರಾಮ

*ಓಂ ನಮೋ ಭಗವತೇ ವಿಷ್ಣುವೇ ಶ್ರೀ ಶಾಲಗ್ರಾಮ ನಿವಾಸಿನೇ*
*ಸರ್ವಾಭೀಷ್ಟ ಫಲಪ್ರದಾಯ ಸಕಲದುರಿತ ನಿವಾರಿಣೇ*

- ಎಂಬ ಪ್ರಾರ್ಥನಾ ಶ್ಲೋಕ ಇಲ್ಲಿ ಪ್ರಸ್ತುತವಾಗುತ್ತದೆ. ನಮ್ಮ ಇಲ್ಲಿನ ವಿವೇಚನೆ ನರಸಿಂಹ ಕೇಂದ್ರಿತ ಆದದ್ದಾಗಿದ್ದು ನರಸಿಂಹ ಸಾಲಿಗ್ರಾಮದತ್ತ ಗಮನ ಹರಿಸುವುದು ಸೂಕ್ತ. ಎಲ್ಲ ಸಾಲಿಗ್ರಾಮಗಳೂ ಶಿಲಾರೂಪಿಗಳೇ ಆದರೂ ರಾಯಚೂರು ಜಿಲ್ಲೆಯ ಕೃಷ್ಣಾನದಿ ತೀರದ ಕೊಪ್ಪ ನರಸಿಂಹನನ್ನು ಷೋಡಶಭುಜ ನರಸಿಂಹನೆಂದು ಸಾಲಿಗ್ರಾಮ ರೂಪದಲ್ಲಿಯೇ ಆರಾಧಿಸಲಾಗುತ್ತಿದೆ ಎಂಬುದು ವೈಶಿಷ್ಟ್ಯಪೂರ್ಣ.

ಮಿಕ್ಕಂತೆ ಸಾಲಿಗ್ರಾಮಗಳಲ್ಲಿ ಹರಿಯವತಾರಗಳ ಪರಿಗಣನೆ ಹೀಗೆ.

*ಮತ್ಸ್ಯಸ್ತು ಷಡ್ವಿಧೋ ಜ್ಞೇಯಃ ಕೂರ್ಮಸ್ತು ಪಂಚವಿಧ ಸ್ಮೃತಃ /*
*ವರಾಹಃ ಷಡ್ವಿಧೋ ನಾರಸಿಂಹೋಽಷ್ಟಾದಶ ಭೇದವಾನ್ //*

ಮತ್ಸ್ಯ ಸಾಲಿಗ್ರಾಮಗಳಲ್ಲಿ ಆರು ಬಗೆಗಳು. ಕೂರ್ಮ ಸಾಲಿಗ್ರಾಮಗಳು ಐದು ವಿಧ. ವರಾಹ ಸಾಲಿಗ್ರಾಮಗಳಲ್ಲಿ ಆರು ರೀತಿಯವುಗಳುಂಟು. ನರಸಿಂಹ ಸಾಲಿಗ್ರಾಮಗಳು ಹದಿನೆಂಟು ಪ್ರಭೇದಗಳನ್ನು ಹೊಂದಿರುತ್ತವೆ.

*ಸಪ್ತ ಚಕ್ರಂ ಬಹುಮುಖಂ ಸಮಂತಾತ್ ಸ್ವರ್ಣ ಸಂಯುತಮ್/*
*ಲಕ್ಷ್ಮೀನೃಸಿಂಹ ಖ್ಯಾತೋ ಭಕ್ತಿ ಮುಕ್ತಿ ಫಲಪ್ರದಮ್//*
*ವಾಮ ಪಾರ್ಶ್ವೇ ಸ್ಥಿತೇ ಚಕ್ರೇ ಕೃಷ್ಣವರ್ಣೇನ ಸಂಯುತಮ್/*
*ಲಕ್ಷ್ಮೀನೃಸಿಂಹ ವಿಖ್ಯಾತೋ ಭಕ್ತಿ ಮುಕ್ತಿ ಫಲಪ್ರದಮ್/*

ಏಳು ಚಕ್ರಗಳು ಸುತ್ತಲೂ ಸುವರ್ಣ ಕಾಂತಿಯ ರೇಖೆಗಳು, ಎಡಗಡೆಯಲ್ಲಿರುವ ಈ ಚಕ್ರಗಳು ಕಪ್ಪು ವರ್ಣದವುಗಳು.

ಇಂತಹ ಸಾಲಿಗ್ರಾಮವು ಲಕ್ಷ್ಮೀನರಸಿಂಹ ಸಾಲಿಗ್ರಾಮವು ಎಂದೆನಿಸಿ ಭಕ್ತಿಮುಕ್ತಿಗಳನ್ನು ನೀಡುತ್ತದೆ.

*ನರಸಿಂಹೋ ವಿಶಾಲಾಸ್ಯಃ ಪಾರ್ಶ್ವದಂಷ್ಟ್ರಾಕೃತೀವಹನ್ /*
*ಯೋಗಾಮರ ನೃಸಿಂಹಶ್ಚ ಭೋಗ ಮೋಕ್ಷ ಪ್ರದೋ ನೃಣಾಂ //*

ಮುಖವು ವಿಶಾಲವಾಗಿದ್ದು ಎರಡೂ ಬದಿಯಲ್ಲಿ ದಾಡೆಗಳ ಗುರುತಿದ್ದರೆ ಅದನ್ನು ಅಮರನೃಸಿಂಹ ಸಾಲಿಗ್ರಾಮ ಎನ್ನುತ್ತಾರೆ. ಇಹದಲ್ಲಿ ಇದರ ಆರಾಧಕನು ಎಲ್ಲ ಸುಖಭೋಗಗಳನ್ನು ಅನುಭವಿಸಿ ಕೊನೆಗೆ ಮೋಕ್ಷವನ್ನು ಪಡೆಯುವನು.



*ಕಪಿಲಾಂಗಂ ಬೃಹದ್ದ್ವಾರಂ ಸಮುಷ್ಟಂ ವಿಪುಲಂಬಲಂ /*
*ನಾರಸಿಂಹಂತು ಸಿಂಹಾಭಂ ಪ್ರವೇಶೇ ಯತ್ರ ಕುತ್ರಚಿತ್ //*

ಕಪಿಲ ವರ್ಣದಿಂದ ಕೂಡಿ ಸಿಂಹದಂತೆ ಚಕ್ರಗಳನ್ನು ಹೊಂದಿರುವ ಸಾಲಿಗ್ರಾಮವು ಅಪರೂಪವಾಗಿ ಲಭಿಸುವುದು. ಇದನ್ನು ವೀರ ನರಸಿಂಹ ಸಾಲಿಗ್ರಾಮವೆಂದು ಕರೆಯುವರು.

ನರಸಿಂಹ ಸಾಲಿಗ್ರಾಮಗಳಲ್ಲಿ ಪಾತಾಳ ನರಸಿಂಹ ಸಾಲಿಗ್ರಾಮ, ಕುಕ್ಷಿನರಸಿಂಹ ಸಾಲಿಗ್ರಾಮ, ಕಪಿಲ ನರಸಿಂಹ ಸಾಲಿಗ್ರಾಮ ಮೊದಲಾದ ಹಲವಾರು ಪ್ರಭೇದಗಳಿವೆ. ಇವುಗಳನ್ನು ಸೇರಿಸಿ ಒಟ್ಟಾರೆ ನರಸಿಂಹ ಸಾಲಿಗ್ರಾಮಗಳ ವೈವಿಧ್ಯ ವೈಶಿಷ್ಟ್ಯಗಳ ಸ್ಥೂಲ ವಿವೇಚನೆಯಿಂದ ನಿಸರ್ಗದ ವೈಚಿತ್ರ್ಯಗಳಲ್ಲಿ ಒಂದಾದರೂ ಇವು ಹೇಗೆ ಅರ್ಥಪೂರ್ಣವಾದ, ಧ್ವನಿಮಯವೂ ಆದ, ಪಾತ್ರವನ್ನು ನಿಭಾಯಿಸುತ್ತವೆ ಎಂಬುದು ನಮಗೆ ತಿಳಿಯಬರುತ್ತದೆ.

ಭಗವಂತನ ಲೀಲಾ ವಿನೋದಗಳಲ್ಲಿ ಅವುಗಳ ರಚನಾ ಚಮತ್ಕಾರವೂ ಅಡಕವಾಗಿರುವುದನ್ನು ದೈವಿಕವೆಂದು ವಿವರಿಸುವಂತಿರುವುದರಿಂದಲೇ ಸಾಲಿಗ್ರಾಮಗಳಿಗೆ ಮೌಲ್ಯವುಂಟಾಗುತ್ತದೆ. ಈ ಧ್ವನಿಪೂರ್ಣ,ಗೂಢ ವಿಚಾರಗಳನ್ನು ಅರಿತು ಆರಾಧಿಸಿದಲ್ಲಿ ಅಂತರಂಗ ಬಹಿರಂಗ ಶುದ್ಧವಾಗಿ, ಮಾನಸಿಕ ಸ್ಥಿರತೆ, ಶಾಂತಿ ಸೌಹಾರ್ದಗಳುಂಟಾಗುತ್ತವೆ

## ನರಸಿಂಹನ ಎಪ್ಪತ್ನಾಲ್ಕು ರೂಪಗಳು

ಪ್ರಥಮಂ ಸ್ವಯಂ ನೃಸಿಂಹಃ ಸ್ಯಾದ್ವಿಧಾನಂ ಮೋಕ್ಷಸಿಂಹಕಮ್
ವಿಜಯಂ ನೃಸಿಂಹಕಂ ಚೈವ ಭತ್ರಾಖ್ಯಂ ನರಸಿಂಹಕಮ್॥
ದೀರ್ಘಸಿಂಹಂ ಚ ದ್ವಪ್ತಾನಾಂ ವಿರೂಪಂ ಚ ನೃಸಿಂಹಕಮ್
ಪೂರ್ಣಸಿಂಹಾಬ್ದಿಸಿಂಹಃ ಸ್ಯಾಲ್ಲಕ್ಷ್ಮೀಸಿಂಹಾವುಭಾವಪಿ॥
ವಿಜಯಲಕ್ಷ್ಮೀ ಸಿಂಹಾಖ್ಯಂ ಯೋಗ ಯೋಗೇಶ್ವರಾವಪಿ
ದೀಪ್ತಿ ಸಿಂಹಾಬ್ದಿ ಸಿಂಹಃ ಸ್ಯಾತ್ಪುಷ್ಟಂ ಭೂತ ಪ್ರಮಾಧಿನಮ್॥
ಜ್ವಾಲಾನೃಸಿಂಹ ಚ ಉಗ್ರಂ ಚ ಘೋರಂ ಚ ನೃಸಿಂಹಕಮ್
ವಿದಾರಣ ನೃಸಿಂಹಃ ಸ್ಯಾದಹೋಬಲ ನೃಸಿಂಹಕಮ್॥
ಸ್ತಂಭ ಸಿಂಹ ಮಹಾಸಿಂಹ ಪಾತಾಲ ನರಸಿಂಹಕಮ್
ವಕ್ಷ್ಯಂ ಚಾನಂತಸಿಂಹಂ ಚ ಗ್ರಹಣಪ್ರಮನಾವಪಿ॥
ಆವೇಶ ನರಸಿಂಹಂ ಚ ಅಟ್ಟಹಾಸ ನೃಸಿಂಹಕಮ್
ನವವ್ಯೂಹ ನೃಸಿಂಹಃ ಸ್ಯಾಚ್ಚಕ್ರಂಸಿಂಹಂ ದಿಶೋ ದಶ॥
ಚಂಡ ಸಿಂಹಾರಸಿಂಹಂ ಚ ಪ್ರಸಾದಂ ಬ್ರಹ್ಮಸಿಂಹಕಮ್
ವಿಷ್ಣುರೌದ್ರಂ ಚ ಮಾರ್ತಾಂಡಂ ಚಂದ್ರ ಭೈರವ ಸಿಂಹಕಮ್॥
ಪೃಥಿವಿ ವಾಯು ಸಿಂಹಂ ಚ ಆಕಾಶ ನರಸಿಂಹಕಮ್
ಜ್ವಲನಾಧಾರ ಸಿಂಹಃ ಸ್ಯಾದಮೃತಂ ಹಂಸಂ ತಥೈವ ಚ॥
ಆತ್ಮ ಸತ್ಯಂ ಚ ಯಜ್ಞಂ ಸ್ಯಾದನ್ನದಾನ ಪ್ರಭಾಸಕಮ್
ವಿಶ್ವರೂಪಂ ತ್ರಿತಾರಕಂ ಚ ಚತುಸ್ಸಪ್ತತಿ ವಿಗ್ರಹಮ್॥
ಇತ್ಯೇವಂ ನರಸಿಂಹಂ ಸ್ಯಾದಾಯಥಾನಂ ವಿಭೇದಕಮ್

# ನರಸಿಂಹ ಅಷ್ಟೋತ್ತರ ಸ್ತೋತ್ರ

ನಾರಸಿಂಹೋ ಮಹಾಸಿಂಹೋ ದಿವ್ಯಸಿಂಹೋ ಮಹಾಬಲಃ|
ಉಗ್ರಸಿಂಹೋ ಮಹಾದೇವಸ್ತಂಭಜಶ್ಚೋಗ್ರಲೋಚನಃ||
ರೌದ್ರಃ ಸರ್ವಾದ್ಭುತಃ ಶ್ರೀಮಾನ್ ಯೋಗಾನನ್ದಸ್ತ್ರಿವಿಕ್ರಮಃ|
ಹರಿಃ ಕೋಲಾಹಲಶ್ಚಕ್ರೀ ವಿಜಯೋ ಜಯವರ್ಧನಃ||
ಪಂಚಾನನಃ ಪರಂಬ್ರಹ್ಮ ಚಾಘೋರೋ ಘೋರವಿಕ್ರಮಃ|
ಜ್ವಲನ್ಮುಖೋ ಜ್ವಾಲಮಾಲೀ ಮಹಾಜ್ವಾಲೋ ಮಹಾಪ್ರಭುಃ||
ನಿಟಲಾಕ್ಷಃ ಸಹಸ್ರಾಕ್ಷೋ ದುರ್ನಿರೀಕ್ಷಃ ಪ್ರತಾಪನಃ|
ಮಹಾದಂಷ್ಟ್ರಾಯುಧಃ ಪ್ರಾಜ್ಞಶ್ಚಂಡಕೋಪೀ ಸದಾಶಿವಃ||
ಹಿರಣ್ಯಕಶಿಪುಧ್ವಂಸೀ ದೈತ್ಯದಾನವಭಂಜನಃ|
ಗುಣಭದ್ರೋ ಮಹಾಭದ್ರೋ ಬಲಭದ್ರಃ ಸುಭದ್ರಕಃ||
ಕರಾಳೋ ವಿಕರಾಳಶ್ಚ ವಿಕರ್ತಾ ಸರ್ವಕರ್ತೃಕಃ|
ಶಿಂಶುಮಾರಸ್ತ್ರಿಲೋಕಾತ್ಮಾ ಈಶಸ್ಸರ್ವೇಶ್ವರೋ ವಿಭುಃ||
ಭೈರವಾಡಂಬರೋ ದಿವ್ಯಶ್ಚಾಚ್ಯುತಃ ಕವಿಮಾಧವಃ|
ಅಧೋಕ್ಷಜೋಽಕ್ಷರಃ ಶರ್ವೋ ವನಮಾಲೀ ವರಪ್ರದಃ||
ವಿಶ್ವಂಭರೋಽದ್ಭುತೋ ಭವ್ಯಃ ಶ್ರೀವಿಷ್ಣುಃ ಪುರುಷೋತ್ತಮಃ|
ಅನಘಾಸ್ತ್ರೋ ನಖಾಸ್ತ್ರಶ್ಚ ಸೂರ್ಯಜ್ಯೋತಿಃ ಸುರೇಶ್ವರಃ||
ಸಹಸ್ರಬಾಹುಃ ಸರ್ವಜ್ಞಃ ಸರ್ವಸಿದ್ಧಿಪ್ರದಾಯಕಃ|
ವಜ್ರದಂಷ್ಟ್ರೋ ವಜ್ರನಖೋ ಮಹಾನನ್ದಃ ಪರಂತಪಃ||
ಸರ್ವಮನ್ತ್ರೈಕರೂಪಶ್ಚ ಸರ್ವಯನ್ತ್ರವಿದಾರಣಃ|
ಸರ್ವತನ್ತ್ರಾತ್ಮಕೋಽವ್ಯಕ್ತಃ ಸುವ್ಯಕ್ತೋ ಭಕ್ತವತ್ಸಲಃ||
ವೈಶಾಖಶುಕ್ಲ ಭೂತೋತ್ಥಃ ಶರಣಾಗತವತ್ಸಲಃ|
ಉದಾರಕೀರ್ತಿಃ ಪುಣ್ಯಾತ್ಮ ಮಹಾತ್ಮಾ ಚಂಡವಿಕ್ರಮಃ||
ವೇದತ್ರಯಪ್ರಪೂಜ್ಯಶ್ಚ ಭಗವಾನ್ ಪರಮೇಶ್ವರಃ|
ಶ್ರೀವತ್ಸಾಂಕಃ ಶ್ರೀನಿವಾಸೋ ಜಗದ್ವ್ಯಾಪೀ ಜಗನ್ಮಯಃ||
ಜಗತ್ಪಾಲೋ ಜಗನ್ನಾಥೋ ಮಹಾಕಾಯೋ ದ್ವಿರೂಪಭೃತ್|
ಪರಮಾತ್ಮಾ ಪರಂಜ್ಯೋತಿರ್ನಿರ್ಗುಣಶ್ಚ ನೃಕೇಸರಿ||
ಪರತತ್ತ್ವಂ ಪರಂಧಾಮ ಸಚ್ಚಿದಾನಂದವಿಗ್ರಹಃ|
ಲಕ್ಷ್ಮೀನೃಸಿಂಹಃ ಸರ್ವಾತ್ಮಾ ಧೀರಃ ಪ್ರಹ್ಲಾದಬಾಲಕಃ||

ಇದಂ ಶ್ರೀಮನ್ನೃಸಿಂಹಸ್ಯ ನಾಮ್ನಾಮಷ್ಟೋತ್ತರಂ ಶತಂ|
ತ್ರಿಸಂಧ್ಯಂ ಯಃ ಪಠೇದ್ಭಕ್ತ್ಯಾ ಸರ್ವಾಭೀಷ್ಟಮವಾಪ್ನುಯಾತ್||



## ಅಧ್ಯಾಯ - 2

# ಭಾಗವತ

*ನಮೋ ಭಗವತೇ ತುಭ್ಯಂ ಪುರುಷಾಯ ಮಹಾತ್ಮನೇ।*
*ಹರಯೇಽದ್ಭುತ ಸಿಂಹಾಯ ಬ್ರಹ್ಮಣೇ ಪರಮಾತ್ಮನೇ॥*

- ಪುರುಷನೂ, ಮಹಾತ್ಮನೂ ಆದ ಭಗವಂತ, ಅದ್ಭುತವಾದ ಸಿಂಹರೂಪವನ್ನು ಧರಿಸಿದ ಹರಿಯೇ- ಬ್ರಹ್ಮನೂ, ಪರಮಾತ್ಮನೂ ಆದವನೇ- ನಿನಗೆ ನಮಸ್ಕಾರ.

ಭಾಗವತ ಪುರಾಣವೆಂದೂ, ಸಾತ್ತ್ವತ ಸಂಹಿತೆಯೆಂದೂ, ಮೋಕ್ಷಶಾಸ್ತ್ರವೆಂದೂ ಹೆಸರಾದ ಭಾಗವತದಲ್ಲಿ ನರಸಿಂಹ ರೂಪಿಯಾದ ಹರಿಯಲ್ಲಿ ಶರಣಾಗತನಾಗಿ ಪ್ರಹ್ಲಾದನು ಹೇಳುವ ಮಾತುಗಳಿವು.

ಭಾಗವತರ ಮೊದಲ ಸಾಲಿನಲ್ಲಿ ಪರಿಗಣಿತನಾಗಿ ಪ್ರಖ್ಯಾತನಾದವನು ಪ್ರಹ್ಲಾದ. ಮಗುವಾಗಿದ್ದಾಗಲೇ ಮಹತ್ತನ್ನು ಅರಿತ ಮಹಾಜ್ಞಾನಿ. ಅಂತಹವನನ್ನು ಅನಸೂಯೆಯಿಂದ ಅನುಸರಿಸುವುದೇ ಇತರರಿಗೆ ಇರುವ ತರಣೋಪಾಯ. ಅವನನ್ನು ಅನುಸರಿಸಿದವರು ತನಗೂ ಹತ್ತಿರವಾಗುವರೆಂದು ಹರಿಯೇ ಆಶ್ವಾಸನೆ ನೀಡಿದ್ದಾನೆ ಎಂದ ಮೇಲೆ ಎರಡನೆಯ ಮಾತಿಗೆ ಎಡೆಯೇ ಇರದು. ಇದೇ ಭಾಗವತ ಪಂಥ. ಈ ಭಾಗವತ ತತ್ತ್ವದ ವಿವರ ವೈಭವವೇ ವ್ಯಾಸಕೃತ ಭಾಗವತದ ತಿರುಳು.

ನರಸಿಂಹಾವತಾರವನ್ನು ಸಮಗ್ರವಾಗಿ ಸವಿಸ್ತಾರವಾಗಿ ಮಾತ್ರವಲ್ಲದೆ ಸರ್ವಾದರಣೀಯ ಆಗುವಂತೆ ಮನ ಮುಟ್ಟುವಂತೆ ಪ್ರತಿಪಾದಿಸುವ ಕೃತಿ ಭಾಗವತ. ಇಲ್ಲಿನ ಸಪ್ತಮ ಸ್ಕಂಧದಲ್ಲಿ ಬಂದಿರುವ ನರಸಿಂಹಾವತಾರ ವೈಭವವನ್ನು ಪರಿಶೀಲಿಸಿದಾಗ ಈ ಕೃತಿಯಲ್ಲಿನ ನಿರೂಪಣಾ ನೆಲೆಯು ಇಂತಹವೇ ಆದ ಹರಿವಂಶ, ವಿಷ್ಣು ಪುರಾಣ, ನರಸಿಂಹ ಪುರಾಣಗಳಿಂದ ವಿಭಿನ್ನವಾಗಿ ವೈಶಿಷ್ಟ್ಯಪೂರ್ಣವಾಗಿರುವುದು ಗಮನಕ್ಕೆ ಬರುತ್ತದೆ.

## ಹಿನ್ನೆಲೆ

ಪರಾಶರ-ಸತ್ಯವತಿಯರ ಮಗ ಕೃಷ್ಣ ದ್ವೈಪಾಯನ ವ್ಯಾಸರು ಪುರಾಣಗಳನ್ನು ಸಂಕಲಿಸಿದರು ಎಂಬುದು ಪರಂಪರೆಯ ಹೇಳಿಕೆ. ಈ ವ್ಯಾಸರೂ ಒಬ್ಬರಲ್ಲ. ಇಪ್ಪತ್ತೆಂಟು ಮಂದಿ ಎಂಬ ಸುದೀರ್ಘವಾದ ಪಟ್ಟಿ. ಒಂದೊಂದು ದ್ವಾಪರ ಯುಗದ ಕೊನೆಯಲ್ಲಿಯೂ ಒಬ್ಬೊಬ್ಬ ವ್ಯಾಸರು ಅವತರಿಸಿ ವೇದಗಳ ವಿಭಜನೆ ಮಾಡಿ, ಜಗತ್ಕಲ್ಯಾಣಕ್ಕಾಗಿ ಪುರಾಣಗಳನ್ನು ಸಂಪಾದಿಸಿ ಕೊಡುತ್ತಾರೆ. ವೇದಗಳಿಗಿಂತ ಮೊದಲೇ ಪುರಾಣಗಳು ಹುಟ್ಟಿದವು ಎಂಬ ಮಾತೂ, ಪುರಾಣಗಳು ಎಂದರೆ ಪಂಚಮ ವೇದವೇ ಎಂಬ ಮಾತೂ ಪುರಾಣಗಳಲ್ಲಿಯೇ ಉಕ್ತವಾದ ವಿಷಯಗಳಾಗಿವೆ. "ವೇದಾಃ ಪ್ರತಿಷ್ಠಿತಾಃ ಸರ್ವೇ ಪುರಾಣೇ ನಾತ್ರ ಸಂಶಯಃ" - ಸರ್ವವೇದಗಳೂ ಪುರಾಣಗಳಲ್ಲಿ ಪ್ರತಿಷ್ಠಿತವಾಗಿವೆ. ಇದರಲ್ಲಿ ಸಂಶಯವಿಲ್ಲ ಎಂಬುದು ಸ್ಕಾಂದ ಪುರಾಣ ಹೇಳುವ ಮಾತು.

*ಪುರಾಣಂ ಸರ್ವ ಶಾಸ್ತ್ರಾಣಾಂ ಪ್ರಥಮಂ ಬ್ರಹ್ಮಣಾಸ್ಮೃತಂ*
*ಅನಂತರಂಚ ವಕ್ತ್ರೇಭ್ಯೋ ವೇದಾಂತಸ್ಯ ವಿನಿರ್ಗತಾಃ*

- ವಾಯುಪುರಾಣ

- ಪುರಾಣಗಳು ಎಲ್ಲ ಶಾಸ್ತ್ರಗಳಿಗಿಂತ ಮೊದಲು ಬ್ರಹ್ಮನಿಂದ ನೆನೆಯಲ್ಪಟ್ಟವು. ತರುವಾಯ ಆತನ ಮುಖಗಳಿಂದ ವೇದಗಳು ಹೊರ ಹೊಮ್ಮಿದವು. ಇಂಥ ಪುರಾಣಗಳು ಎಷ್ಟು ಎಂದರೆ ಉತ್ತರಿಸುವುದು ಕಷ್ಟಸಾಧ್ಯ. ಹದಿನೆಂಟು ಮಹಾ ಪುರಾಣಗಳು, ಹದಿನೆಂಟು ಉಪ ಪುರಾಣಗಳು ಎಂದು ಸ್ಥೂಲವಾಗಿ ಹೇಳಬಹುದಾದರೂ ಈ ಪಟ್ಟಿಗಳ ಬಗ್ಗೆ ಪುರಾಣಗಳಲ್ಲಿ ಏಕವಾಕ್ಯವಿಲ್ಲ. ಹಲವು ಪುರಾಣಗಳಲ್ಲಿ ಪುನರುಕ್ತಿ ಇದೆ. ಒಟ್ಟಿನಲ್ಲಿ ಪುರಾಣಗಳಲ್ಲಿ ಭೇದ ಕಂಡುಬಂದರೆ ಅದು ಕಲ್ಪಭೇದದಿಂದ ಉಂಟಾದದ್ದೇ ಆಗಿರುತ್ತದೆ ಎಂದು ಸಮನ್ವಯಗೊಳಿಸಿಕೊಳ್ಳುವ ಪ್ರಯತ್ನವೂ ನಡೆದಿದೆ. ಸರ್ಗ, ಪ್ರತಿಸರ್ಗ, ವಂಶ, ಮನ್ವಂತರ, ವಂಶಾನು ಚರಿತ್ರೆಗಳ ಜೊತೆಗೆ ತೀರ್ಥ, ಕ್ಷೇತ್ರ, ನದೀ ವ್ರತ, ಅವತಾರ, ಧರ್ಮ, ಕರ್ಮಗಳೂ ಸೇರುವುದರಿಂದ ಪುನರುಕ್ತಿ ಸಹಜವೆಂದೂ ಕಾಲ, ಧರ್ಮ, ಭಾಷೆ, ಶೈಲಿ, ವರ್ಣನೆಗಳ ವೈವಿಧ್ಯದಿಂದಾಗಿ ವೈರುಧ್ಯವೂ ಕ್ವಚಿತ್ತಾಗಬಹುದು ಎಂಬ ಸಮಾಧಾನ ಪುರಾಣಗಳಲ್ಲಿಯೇ ಕಂಡುಬರುತ್ತದೆ.

## ಭಾಗವತ ರಚನೆ

ಶತಕೋಟಿ ಪ್ರವಿಸ್ತರವಾಗಿದ್ದ ಪುರಾಣಗಳನ್ನು ನಾಲ್ಕು ಲಕ್ಷ ಗ್ರಂಥ ಪ್ರಮಾಣಕ್ಕೆ ಸಂಗ್ರಹಿಸಿ ಅವುಗಳನ್ನು ಹದಿನೆಂಟು ಪುರಾಣಗಳನ್ನಾಗಿ ವಿಭಜಿಸಿ ನೀಡಿದವರು ಸತ್ಯವತೀ ಸುತರಾದ ವ್ಯಾಸರು ಎಂದು ಶಿವ ಪುರಾಣ ಹೇಳುತ್ತದೆ.

*ತತ್ರ ಪದ್ಮಪುರಾಣಂತು ಪ್ರಥಮಂಚ ಪ್ರಣೀತವಾನ್ |*
*ತತೋ ಅನ್ಯಾನಿ ಪುರಾಣಾನಿ ಕೃತ್ವಾ ಷೋಡಷತು ಕ್ರಮಾತ್||*
*ಅಷ್ಟಾದಶಂ ಭಾಗವತಂ ಸಮಾಕೃಷ್ಯ ಸರ್ವತಃ|*
*ಕೃತವಾನ್ ಭಗವಾನ್ ವ್ಯಾಸಃ ಶುಕ ಮಧ್ಯಾಪಯುತ್ ಸ್ವಯಂ||*

- ಅವುಗಳಲ್ಲಿ ಪದ್ಮಪುರಾಣವನ್ನು ಮೊದಲಿಗೆ ರಚನೆ ಮಾಡಿದರು. ನಂತರ ಉಳಿದ ಹದಿನಾರು ಪುರಾಣಗಳನ್ನು ಸಂಕಲಿಸಿದ ಭಗವಾನ್ ವ್ಯಾಸರು ಹದಿನೆಂಟನೆಯದಾಗಿ ಈ ಎಲ್ಲ (ಹದಿನೇಳು ಪುರಾಣಗಳ) ಸಾರವನ್ನು ಕೂಡಿಸಿ ಭಾಗವತವನ್ನು ರಚಿಸಿ ಅದನ್ನು ತಾವೇ ತಮ್ಮ ಮಗನಾದಂತಹ ಶುಕ ಮಹರ್ಷಿಗೆ ಅಧ್ಯಾಪನ ಮಾಡಿಸಿದರು. -ಇದು ಪದ್ಮಪುರಾಣೋಕ್ತವಾದ ಮಾತು.

ವೇದಗಳಲ್ಲಿನ ಜ್ಞಾನವನ್ನು ಪಡೆಯಲಾಗದಿರುವಂತಹ ಜನರಿಗೆ- ಶ್ರುತಿಗೋಚರರಲ್ಲದ ವರಿಗೆ- ಶ್ರೇಯಸ್ಸಿನ ಮಾರ್ಗವನ್ನು ತಿಳಿಸುವುದು ಹೇಗೆ ಎಂದು ವ್ಯಾಸರು ಯೋಚಿಸಿದರಂತೆ. ಪರಿಣಾಮವಾಗಿ ಭಾಗವತ ರಚನೆಯಾಯಿತು. ಇದು ಒಂದು ಕಾರಣವಾದರೆ ವ್ಯಾಸರಲ್ಲಿಯೇ ಇದ್ದ ಒಂದು ಅತೃಪ್ತಿ, ವೇದಗಳ ಸಂಕಲನವಾದ ಬಳಿಕವೂ ಇನ್ನೂ ಹೇಳಬೇಕಾದ್ದು, ರಚಿಸಬೇಕಾದ್ದು ಇದೆ ಎಂಬ ಅತೃಪ್ತಿ. ನಾರದರು ಈ ಸಮಸ್ಯೆಗೆ ಪರಿಹಾರ ಸೂಚಿಸಿದರು. "ತಾವು ಭಗವದವತಾರಗಳನ್ನು ವಿವರವಾಗಿ ಹೇಳುವ ಭಾಗವತವನ್ನು ರಚಿಸಿ". ವಿಷ್ಣುವಿನ ಅವತಾರ ವೈಭವವನ್ನು ವಿವರಿಸುವ ಕೃತಿ ಭಾಗವತದ ಸಂಕಲನವಾಯಿತು.

ಎಲ್ಲ ಪುರಾಣಗಳ ಸಾರವಾಗಿ ಆ ಮೂಲಕವಾಗಿ ಎಲ್ಲ ವೇದಗಳ ಸಾರವಾಗಿ, ಎಲ್ಲರಿಗೂ ಕೈಗೆ-ಅರಿವಿಗೆ-ಎಟುಕುವಂತಹದ್ದಾಗಿ, ಭಗವಂತನ ವಿವಿಧಾವತಾರಗಳ ವಿವರವಾದ ನಿರೂಪಣೆಯಾಗಿ ಭಾಗವತ ಉಂಟಾಯಿತು ಎಂದು ಹೇಳುವುದೇ ಇಲ್ಲಿನ ತಾತ್ಪರ್ಯ. ಭಗವಂತನನ್ನು ಸತ್ತ್ವಗುಣೋಪೇತನೆಂತಲೂ ಹಾಗಾಗಿಯೇ ಭಾಗವತ ಸಾತ್ತ್ವಿಕ ಪುರಾಣಗಳಲ್ಲಿ ಒಂದೆಂದೂ, ಸಾತ್ತ್ವತ ಸಂಹಿತೆಯೆಂದೂ (ಸತ್ತ್ವತಾಂ ಪತಿಯ ಭಕ್ತರು ಸಾತ್ತ್ವತರು -ಹಾಗಾಗಿ ಸಾತ್ತ್ವತ ಸಂಹಿತೆ) ಮೋಕ್ಷಶಾಸ್ತ್ರವೆಂದೂ ಹೇಳಲಾಗಿರುವ ಭಾಗವತ ಗ್ರಂಥಕ್ಕೆ ಹತ್ತಕ್ಕೂ ಹೆಚ್ಚಿನ ವಿವರವಾದ ವ್ಯಾಖ್ಯಾನಗಳೂ ರಚಿತವಾಗಿವೆ. ಅವುಗಳಲ್ಲಿ ಕೆಲವು ಹೀಗೆ -

ಶ್ರೀಧರಸ್ವಾಮಿಯ ಭಾವದೀಪಿಕೆ, ವೀರರಾಘವಾಚಾರ್ಯರ ಭಾಗವತ ಚಂದ್ರ ಚಂದ್ರಿಕೆ, ವಿಜಯಧ್ವಜ ತೀರ್ಥರ ವಿಜಯ ಪದ ರತ್ನಾವಳಿ (ಈ ಮೂರು ವ್ಯಾಖ್ಯಾನಗಳನ್ನೂ ಒಳಗೊಂಡ ಶ್ರೀಮದ್ಭಾಗವತದ ಸಂಸ್ಕೃತ ಮೂಲವನ್ನು ತಿ.ತಿ. ದೇವಸ್ಥಾನಗಳು ಪ್ರಕಟನೆಗೆ ಕೈಗೆತ್ತಿಕೊಂಡಿವೆ. ಒಂದೆರಡು ಸ್ಕಂಧಗಳು ಪ್ರಕಟವಾಗಿವೆ) ಸುದರ್ಶನ ಸೂರಿಗಳ ಶುಕಪಕ್ಷೀಯ, ವಲ್ಲಭಾಚಾರ್ಯರ ಸುಬೋಧಿನೀ, ಗಿರಿಧರಾಚಾರ್ಯರ ಆಧ್ಯಾತ್ಮಿಕ ಟೀಕಾ, ಸನಾತನ ಸ್ವಾಮಿಯ ವೈಷ್ಣವ ತೋಷಿಣೀ, ಜೀವಗೋಸ್ವಾಮಿಯ ಕ್ರಮಸಂದರ್ಭ, ವಿಶ್ವನಾಥ ಚಕ್ರವರ್ತಿಗಳ ಸಾರಾರ್ಥ ದರ್ಶಿನೀ, ಶ್ರೀಹರಿಯ ಹರಿಭಕ್ತಿ ರಸಾಯನ, ಮಧುಸೂದನ

ಸರಸ್ವತಿಗಳ ಗೂಢಾರ್ಥ ದೀಪಿಕೆ-ಇವುಗಳೆಲ್ಲ ಆಯಾ ಮತ, ಪಂಥ, ಧರ್ಮಗಳ ಹಿನ್ನೆಲೆಯಲ್ಲಿ ವ್ಯಾಖ್ಯಾತವಾದವುಗಳು ಎಂಬುದನ್ನು ಮನಸಿನಲ್ಲಿಡಬೇಕು.

## ಭಾಗವತ ರೂಪ

ಹದಿನೆಂಟನೆಯದಾಗಿ ಭಾಗವತವನ್ನು ವ್ಯಾಸರು ಸಂಕಲಿಸಿದರು ಎಂದು ಈ ಹಿಂದೆಯೇ ಹೇಳಲಾಗಿದೆ. ಒಟ್ಟು ಪುರಾಣಗಳ ಶ್ಲೋಕ ಸಂಖ್ಯೆ ನಾಲ್ಕು ಲಕ್ಷವೆಂದೂ ಹೇಳಲಾಗಿದೆ. ಭಾಗವತದಲ್ಲಿ ಹದಿನೆಂಟು ಸಾವಿರ ಶ್ಲೋಕಗಳು ಎಂದು ಸ್ಥೂಲವಾಗಿ ಹೇಳಲಾಗಿದೆ. ಸ್ಥೂಲವಾಗಿ ಎನ್ನಲು ಕಾರಣ ಟೀಕಾಗ್ರಂಥಗಳನ್ನು ಅನುಸರಿಸಿ ಕಟ್ಟಿಕೊಡಲಾದ ಭಾಗವತದಲ್ಲಿ ಶ್ರೀಧರೀಯ ಹಾಗೂ ವಿಜಯಧ್ವಜೀಯ ಟೀಕೆಗಳ ಒಟ್ಟು ನೋಟದಿಂದ ಮಾತ್ರ ಈ ಸಂಖ್ಯೆ ಲಭ್ಯ

ಜೊತೆಗೇ ಇಂದಿನ ಭಾಗವತ ಪರಿಷ್ಕೃತವಾಗಿ ಅಧಿಕ ಪಾಠವನ್ನು ಒಳಗೊಂಡು ಹಿರಿಗಾತ್ರದ್ದಾಗಿದೆ ಎಂಬ ಮಾತಿದೆ. ಕ್ರಿಸ್ತಶಕದ ಆರನೆಯ ಶತಮಾನದ ಹಿಂದೆ ಇದ್ದಂತಹ ಭಾಗವತ ಬೆಳೆದು ಬಂದಿದೆ. ಇಲ್ಲಿರುವುದು ಹಿರಿಯ ಚರಿತೆಯಾದರೂ ಅದು ಅನುಕ್ರಮಾಗತ ಹರಿಯವತಾರ ಚರಿತ್ರೆಯಲ್ಲ. ಕೃಷ್ಣಾವತಾರ ಕಥೆಗೆ ಹೆಚ್ಚಿನ ಅವಧಾರಣೆ-ಹೆಚ್ಚಿನ ಸ್ಥಳ ನೀಡಲಾಗಿದೆ. ಹನ್ನೆರಡು ಸ್ಕಂಧಗಳ ಒಟ್ಟು ಭಾಗವತದಲ್ಲಿ ಎರಡು ಸ್ಕಂಧಗಳು ಕೃಷ್ಣಾವತಾರಕ್ಕೆ ಮೀಸಲಾಗಿದೆ. ಹಾಗೆ ನೋಡಹೋದರೆ ಕೃಷ್ಣಾವತಾರದ ಕಥೆಗೆ ಎರಡನೆಯದಾಗಿ ಹರಹನ್ನು ಹೊಂದಿರುವ ಅವತಾರವೆಂದರೆ ನರಸಿಂಹಾವತಾರ. ವರಾಹ, ಮತ್ಸ್ಯ ವಾಮನ ಕೂರ್ಮ ಗಳೆಲ್ಲಾ ಕಥೆಯ ವಿಚಿತ್ರಗತಿಯ ಓಟದಲ್ಲಿ ಅಲ್ಲಲ್ಲಿ ಕಂಡು ಬರುವ ಅವತಾರ ವಿವರ ಗ್ರಹಿಕೆಯ ನಿಂತು-ನೋಡಿ-ಮುನ್ನಡೆಯುವ ಮಾರ್ಗದ ತಿರುವುಗಳಷ್ಟೆ ಎಂದರೂ ಅಡ್ಡಿಯಿಲ್ಲ. ವರಾಹಾವತಾರ, ನರಸಿಂಹಾವತಾರಗಳು ಒಂದಾದ ಮೇಲೆ ಒಂದರಂತೆ ಬಂದರೂ ಮಧ್ಯದಲ್ಲಿ ಬೇರೆ ಬೇರೆ ಕಥೆಗಳಿಗೆ ಎಡೆಮಾಡಿಕೊಡಲಾಗಿದೆ.

ಮೂರನೆಯ ಸ್ಕಂಧದಲ್ಲಿ ದಿತಿಯ ಗರ್ಭವನ್ನು ವಿವರಿಸಿ ಹಿರಣ್ಯಕಶಿಪು, ಹಿರಣ್ಯಾಕ್ಷರ ಜನನವನ್ನೂ ಕುರಿತು ಹೇಳಿ ಭೂಮಿಯ ಉದ್ಧಾರದ ಕೆಲಸದಲ್ಲಿದ್ದ-ಲೀಲೆಯಲ್ಲಿದ್ದ-ವರಾಹ ಸ್ವಾಮಿ ಹಿರಣ್ಯಾಕ್ಷನನ್ನು ಸಂಹರಿಸುವುದು ಕಂಡು ಬಂದರೆ, ಆ ಬಗೆಗಿನ ಹಿರಣ್ಯಕಶಿಪುವಿನ ಶೋಕ ವಿವರಣೆ, ಪ್ರಹ್ಲಾದನ ಶಿಕ್ಷಣದ ಕಥೆ, ಹಿರಣ್ಯವರಗಳ ವಿವರ, ನರಸಿಂಹಾವತಾರ ವರ್ಣನೆ ಏಳನೇ ಸ್ಕಂಧದಲ್ಲಿ ಕಂಡುಬರುತ್ತದೆ. ವರಾಹಾವತಾರದ ಕಥೆಯಾದ ಮೇಲೆ ಧ್ರುವಚರಿತ್ರೆ, ಪೃಥು ಚರಿತ್ರೆ, ಪ್ರಿಯವ್ರತ, ಅಜಾಮಿಳ, ವೃತ್ರ ಮೊದಲಾದವರುಗಳ ಕಥೆಗಳಲ್ಲಿ ಓದುಗನ ಪರಿಜ್ಞಾನವನ್ನು- ಆ ಮೂಲಕ ಅವನಲ್ಲಿನ ಹರಿಭಕ್ತಿಯನ್ನು ಸ್ವಲ್ಪ ಸ್ವಲ್ಪವೇ ಹೆಚ್ಚಿಸಿಕೊಂಡು ಬರುತ್ತ ಏಳನೆಯ ಸ್ಕಂಧದಲ್ಲಿ ನರಸಿಂಹಾವತಾರದ ವಿವರಣೆ ಸ್ವೀಕರಿಸಲು ಸಿದ್ಧಗೊಳಿಸಲಾಗಿದೆ. ಹಾಗೆಯೇ ಮುಂದುವರೆದು ಗಜೇಂದ್ರ ಮೋಕ್ಷ ಕೂರ್ಮಾವತಾರ, ವಾಮನಾವತಾರ, ಮತ್ಸ್ಯಾವತಾರಗಳನ್ನು ನಿರೂಪಿಸಿದ ನಂತರ ವ್ಯಾಸರು

ತಮ್ಮ ನೆಚ್ಚಿನ ಕೃಷ್ಣಾವತಾರ ವಿವರವನ್ನು ನೀಡಿದ್ದಾರೆ. ವ್ಯಾಸರು ಕೃಷ್ಣನ ಜೀವಿತವನ್ನು ಹತ್ತಿರದಿಂದ ದರ್ಶಿಸಿದ್ದರು ಎಂಬುದೂ ಇಲ್ಲಿನ ವ್ಯಾಪಕತೆಗೆ ಕಾರಣವಿದ್ದಿರಬಹುದು. ಸೂರ್ಯವಂಶ, ಚಂದ್ರವಂಶಗಳ ಚರಿತ್ರೆಯನ್ನು ನವಮಸ್ಕಂಧದಲ್ಲಿ ವಿವರಿಸುವುದಾದರೆ, ಹತ್ತನೆಯದರಲ್ಲಿ ಶ್ರೀಕೃಷ್ಣನ ಜನನವಾಗುತ್ತದೆ. ಆತನ ಜೀವನವನ್ನು ವಿವರಪೂರ್ಣವಾಗಿ ವಿಸ್ತಾರವಾಗಿ ಹಲವು ಹನ್ನೊಂದು ರೀತಿಯಲ್ಲಿ ಬಣ್ಣಿಸಿ ಓದುಗರ ಮನಸ್ಸಿಗೆ ನಾಟುವಂತೆ ಭಗವಂತನ ಬಾಲ್ಯದಾಟಗಳನ್ನು, ಯೋಗಿರಮ್ಯತೆಯನ್ನು ವಿವರಿಸಲಾಗಿದೆ. ಹನ್ನೊಂದನೆಯ ಸ್ಕಂಧದಲ್ಲಿ ಕೃಷ್ಣ ಉದ್ಧವರ ಸಂವಾದ, ಯದುಕುಲ ವಿನಾಶ, ಕೃಷ್ಣನ ದೇಹೋತ್ಸರ್ಗಗಳ ವಿವರಗಳಿವೆ. ಹನ್ನೆರಡನೆಯದು ಕಲಿಯುಗದ ಭವಿಷ್ಯ ವಿವರದ್ದು. ಇಲ್ಲಿ ಪ್ರಸ್ತುತವಾದ ನರಸಿಂಹಾವತಾರದ ವರ್ಣನೆಯನ್ನು ಅದಕ್ಕೆ ಹೊಂದಿಕೊಂಡಂತಹ ವರಾಹ ಜೀವನ ವೃತ್ತಾಂತವನ್ನು ಸಂಕ್ಷಿಪ್ತವಾಗಿ ಗಮನಿಸುವುದು ಸೂಕ್ತವಾಗುತ್ತದೆ.

## ವರಾಹಾವತಾರ-ಹಿರಣ್ಯಾಕ್ಷ

ಕಲ್ಪಾಂತರದಲ್ಲಿ ರಸಾತಳವನ್ನು ಸೇರಿದ್ದ ಭೂಮಿಯನ್ನು ಉದ್ಧರಿಸಲು ಸ್ವಾಮಿಯು ಬ್ರಹ್ಮನ ನಾಸಾಪುಟದಿಂದ ವರಾಹಾವತಾರಿಯಾಗಿ ಹೊರಬಿದ್ದು ಸಮುದ್ರವನ್ನು ಸೇರಿ ಭೂಮಿಯ ಅನ್ವೇಷಣೆ ಮಾಡತೊಡಗಿದ. ಇಲ್ಲಿ ಸ್ವಾಮಿಯ ಅವತಾರದ ಉದ್ದೇಶ ಭೂಮಿಯ ಉದ್ಧರಣವಷ್ಟೆ. ಹಿರಣ್ಯಾಕ್ಷನ ವಧೆಯೆಂಬುದು ಈ ಅವತಾರದ ಅಧಿಕಫಲವಷ್ಟೆ.

ಜಯ-ವಿಜಯರು ವೈಕುಂಠದ ದ್ವಾರಪಾಲಕರು. ಅವರು ಬ್ರಹ್ಮಮಾನಸ ಪುತ್ರರಾದ ಸನಕಾದಿಗಳು ನಾರಾಯಣ ದರ್ಶನಾಪೇಕ್ಷೆಯಿಂದ ಬಂದಾಗ, ಅವರನ್ನು-ವಯೋವೃದ್ಧ ಜ್ಞಾನವೃದ್ಧರಾಗಿದ್ದರೂ ಬಾಲಕರಂತೆ, ಅಬೋಧರಂತೆ ಕಂಡುಬರುತ್ತಿದ್ದ ಅವರನ್ನು-ಜಯ ವಿಜಯರು ತಡೆದರು. ಸತ್ವಮಾತ್ರನಾದ ನಾರಾಯಣನ ವೈಕುಂಠದಲ್ಲಿ ಅಸಾತ್ವಿಕವಾದ ಈ ವರ್ತನೆಯಿಂದಾಗಿ ಸನಾಕಾದಿಗಳಿಗೆ ಕೋಪ ಬಂದಿತು. "ರಾಜಸರೂ ತಾಮಸರೂ ಆದ ನೀವುಗಳು ರಾಕ್ಷಸ ಯೋನಿಯಲ್ಲಿ ಹುಟ್ಟುವಂತಹವರಾಗಿರಿ" ಎಂದು ಶಾಪವನ್ನಿತ್ತರು. ಹಾಗಾಗಿ ದೈವವಿರೋಧಿ ರಾಕ್ಷಸ ಜನ್ಮಗಳನ್ನೆತ್ತಬೇಕಾಯಿತು. ಮಹಾತ್ಮರ ಕೋಪ ಮೂರು ಕ್ಷಣ ಮಾತ್ರದ್ದು ಎಂಬಂತೆ ಶಾಪ ನೀಡಿದ ಕೂಡಲೇ ವೈಕುಂಠ ನಿರ್ಗಮನ ಮಾಡುತ್ತ ಇದ್ದ ಜಯ-ವಿಜಯರ ಬಗ್ಗೆ ಮರುಕವುಂಟಾಗಿ "ಮೂರು ಜನ್ಮ ಮಾತ್ರವೇ ಎತ್ತಿ ಮತ್ತೆ ವೈಕುಂಠಕ್ಕೆ ಮರಳುವಂತಾಗಲಿ" (ನಿಮ್ಮ ತಾಮಸಗುಣ ವರ್ಜನೆಯ ಬಳಿಕ) ಎಂದು ಶಾಪ ವಿಮೋಚನೆಯನ್ನು ಅನುಗ್ರಹಿಸಿದರು.

ಇತ್ತ ಕಶ್ಯಪ ಬ್ರಹ್ಮರನ್ನು ಅವರ ಪತ್ನಿ ದಿತಿಯು ಪುತ್ರಸಂತಾನಕ್ಕಾಗಿ ಅವೇಳೆಯಲ್ಲಿ ಪೀಡಿಸಿದ ಕಾರಣದಿಂದಾಗಿ ಆಕೆಯ ಗರ್ಭದಿಂದ ಅಧಾರ್ಮಿಕರಾದ ಪುತ್ರರು ಜನಿಸುವರೆಂದು ಕಶ್ಯಪರು ನುಡಿದರು. ಲೋಕ ಸಂರಕ್ಷಕನಾದ ಶ್ರೀಹರಿಯೇ ಅವರನ್ನು ತನ್ನ ವಿವಿಧ ಅವತಾರಗಳಿಂದ ಕೊಲ್ಲುವನೆಂದೂ ನುಡಿದರು. ಇಂತಹ ಭವಿಷ್ಯವನ್ನು ಹೊತ್ತ ದಿತಿಯ ಗರ್ಭದಲ್ಲಿ ಜಯ-ವಿಜಯರು ಹಿರಣ್ಯಾಕ್ಷ ಹಿರಣ್ಯಕಶ್ಯಪರಾಗಿ ಜನಿಸಿದರು. ಗರ್ಭಪ್ರವೇಶ

ಮಾಡಿದವರಲ್ಲಿ ಮೊದಲಿಗನು ಹಿರಣ್ಯಕಶ್ಯಪ. ಹುಟ್ಟಿದವರಲ್ಲಿ ಮೊದಲಿಗನು ಹಿರಣ್ಯಾಕ್ಷ. ಇವರು ಹುಟ್ಟುವಾಗಲೇ ಲೋಕದಲ್ಲಿ ಅನೇಕ ಉತ್ಪಾತಗಳಾದವು. ಹಗಲಿನಲ್ಲಿ ಸೂರ್ಯನಿಗೆ ಧೂಳು ಕವಿದು ಆಕಾಶ ಕತ್ತಲಾಗಿ, ಧೂಮಕೇತುಗಳು ಕಾಣಿಸಿಕೊಂಡವು. ಉಲ್ಕಾಪಾತ ಗಳಾದವು. ನೂರು ವರ್ಷ ಕಾಲ ದಿತಿಯ ಗರ್ಭದಲ್ಲಿ ಬೆಳೆದ ಈ ದೈತ್ಯರು ಹುಟ್ಟಿದಾಗಲೇ ಪರ್ವತಾಕಾರಿಗಳಾಗಿದ್ದರು. ಅವರು ಶೀಘ್ರವಾಗಿ ಬೆಳೆದು ನಿಂತರು. ಅವರ ಕಿರೀಟ ಆಕಾಶದಲ್ಲಿ ಕಂಡುಬರುತ್ತಿದ್ದಿತು. ಅವರು ನಡೆದರೆ ಭೂಮಿ ಕಂಪಿಸುತ್ತಿದ್ದಿತು. ಭುಜಬಲ ದಿಂದಾಗಿ ಎಲ್ಲ ಲೋಕಗಳನ್ನು ತನ್ನ ವಶಕ್ಕೆ ಪಡೆದ ಹಿರಣ್ಯಕಶಿಪುವು ಸಾಮ್ರಾಟನಾದರೆ ತಮ್ಮನಾದ ಹಿರಣ್ಯಾಕ್ಷ ಅಜೇಯನಾದ ಯೋಧನಾಗಿ ಬೆಳೆದ. ಗದೆಯನ್ನು ಹೆಗಲಮೇಲಿಟ್ಟು ಕೊಂಡು 'ಯಾರೊಡನೆ ಯುದ್ಧ ಮಾಡಲಿ' ಎಂದು ಪ್ರತ್ಯರ್ಥಿಗಳನ್ನು ಹುಡುಕ ಹೊರಡುತ್ತಿದ್ದ. ಸಿಕ್ಕವರನ್ನೆಲ್ಲ ಸೋಲಿಸಿ ಅಜೇಯನಾಗಿ ಲೋಕಸಂಚಾರ ಮಾಡುತ್ತಿದ್ದ ಅವನಲ್ಲಿ ಅಹಂ ಕಾರವೂ ಅದೇ ಪ್ರಮಾಣದಲ್ಲಿ ಬೆಳೆಯುತ್ತ ಹೋಯಿತು. ಒಮ್ಮೆ ದೇವಲೋಕಕ್ಕೆ ಹೋದ. ಆದರೆ ಇವನಿಗೆ ಹೆದರಿದ ದೇವತೆಗಳು ಇವನು ಅಲ್ಲಿ ತಲುಪುವ ವೇಳೆಗೆ ಸ್ಥಾನಾಂತರ ಮಾಡಿದ್ದರು. ಯುದ್ಧ ಮಾಡಲು ಎದುರಾಳಿಯೇ ದೊರೆಯದೆ, ಏನೂ ಮಾಡಲು ತೋಚದ ಹಿರಣ್ಯಾಕ್ಷ ಸಮುದ್ರದಲ್ಲಿ ಬಿದ್ದ. ಬಹು ಕಾಲದವರೆಗೆ ಸಮುದ್ರದ ಅಲೆಗಳನ್ನೆ ಗದೆಯಿಂದ ಬಡಿಯುತ್ತ ದಾಂಧಲೆಯನ್ನು ಸೃಷ್ಟಿಸಿ, ಕಡೆಗೆ ವರುಣನ ರಾಜಧಾನಿ ವಿಭಾವರಿ ನಗರಕ್ಕೆ ಬಂದು ವರುಣನನ್ನು ಛೇಡಿಸಿದ. "ನನ್ನೊಡನೆ ಯುದ್ಧ ಮಾಡು, ನೀನು ಲೋಕೈಕ ವೀರನಲ್ಲವೇ ನನ್ನನ್ನು ಗೆದ್ದರೆ ಎಲ್ಲರನ್ನೂ ಗೆದ್ದಂತೆಯೇ. ನಂತರ ನೀನು ಸರ್ವಜಿತನಾಗಿ ರಾಜಸೂಯ ಯಾಗವನ್ನು ಮಾಡಬಹುದು" ಎಂದ. ವರುಣನಿಗೆ ಈ ರಾಗದ ಅಂತ್ಯದ ತಿರುವು ತಿಳಿದಿದ್ದಿತು. ಸಮಾಧಾನ ಚಿತ್ತದಿಂದ ಸಂಯಮ ಕಳೆದು ಕೊಳ್ಳದೆ ರಾಕ್ಷಸನ ದೃಷ್ಟಿಯನ್ನು ದಿಕ್‌ಪಲ್ಲಟಗೊಳಿಸುತ್ತ ಮಾತನಾಡಿದ "ನನಗೆ ಈಗ ವಯಸ್ಸಾಗಿದೆ. ಯುದ್ಧ ಮಾಡುವ ಉತ್ಸಾಹವೇ ಉಡುಗಿದೆ. ನಿನ್ನೊಡನೆ ಎಲ್ಲಿ ಕಾದಲಿ. ನಿನಗೆ ತಕ್ಕ ಸ್ಪರ್ಧಿ ಎಂದರೆ ಶ್ರೀಹರಿಯೇ ಸರಿ. ಈಗ ಅವನೊಬ್ಬನೇ ಪ್ರಬಲವೀರ. ಅವನಿಗೆ ಸಾಧುಸಂತರ ರಕ್ಷಣೆಯೇ ಧ್ಯೇಯ. ಹಾಗಾಗಿ ಆತ ನಿನಗೆ ಖಂಡಿತವಾಗಿ ಯುದ್ಧ ನೀಡುತ್ತಾನೆ. ಅವನಲ್ಲಿ ಹೋಗಿ ಯುದ್ಧಪ್ರಾರ್ಥನೆ ಮಾಡುವುದು ಸೂಕ್ತ".

ವರುಣನ ವಾಕ್ಕಿನ ಒಳ ಸೂಕ್ಷ್ಮ ದೈತ್ಯನ ಮಿದುಳು ಸೇರಲಿಲ್ಲ. ತನಗೆ ಒಬ್ಬ ಪ್ರತಿಯೋಧ ಇದ್ದಾನೆ ಎಂಬುದೇ ಮುಖ್ಯವಾಯಿತು. ಸರಿ ಆ ಹರಿಯನ್ನು ಹುಡುಕುವುದನ್ನೇ ಕಾರ್ಯ ಮಾಡಿಕೊಂಡು ಹೊರಟ. ದಾರಿಯಲ್ಲಿ ನಾರದರು ಸಿಕ್ಕರು. ಹೇಳಿ ಕೇಳಿ ನಾರದರು ಲೋಕೋದ್ಧಾರದ ವ್ರತ ತೊಟ್ಟವರು. ಹಿರಣ್ಯಾಕ್ಷನಿಗೆ ಹರಿಯ ಇರವನ್ನು ಕುರಿತು ವಿವರಿಸಿದರು. 'ವೈಕುಂಠದಲ್ಲಿ ಹುಡುಕಬೇಡ, ಪಾತಾಳದತ್ತ ಹೋಗು, ಅಲ್ಲಿ ಆತ ಭೂಮಿಯನ್ನು ಮೇಲೆತ್ತುವ ಲೀಲೆಯಲ್ಲಿ ವರಾಹಾವತಾರಿಯಾಗಿದ್ದಾನೆ. ನಿನಗೆ ಶಂಖ ಚಕ್ರಧರನಾಗಿ ಕಾಣಿಸಿಕೊಳ್ಳದೆ ಮೃಗರೂಪದಲ್ಲಿ ಕಂಡುಬರುತ್ತಾನೆ' ಎಂದು ಅವನ ಗಮನದ ದಿಕ್ಕನ್ನು ಖಚಿತಪಡಿಸಿದರು. ಹಿರಣ್ಯಾಕ್ಷನು ಪಾತಾಳದತ್ತ ಹೊರಟನು. ಆ ಹೊತ್ತಿಗೆ ರಸಾತಲದಿಂದ ಭೂಮಿಯನ್ನೆತ್ತಿಕೊಂಡು ಯಜ್ಞವರಾಹನು ಮೇಲೇರಿ ಬರುತ್ತಿದ್ದನು.

ತನ್ನ ಕೋರೆದಾಡೆಗಳಲ್ಲಿ ಭೂಮಿಯನ್ನು ಸೇರಿಸಿ ಗಟ್ಟಿಯಾಗಿ ಹಿಡಿದು ಮೇಲೆ ಬರುತ್ತಿದ್ದ ಆತನನ್ನು ಕಂಡು ಹಿರಣ್ಯಾಕ್ಷನು ಯುದ್ಧಕ್ಕಾಗಿ ಕರೆದನು. "ನಿನ್ನನ್ನು ಇಂದೇ ಕೊಂದು ಹಾಕಿ ದೈತ್ಯರಿಗೆ ಸಂತೋಷವನ್ನುಂಟು ಮಾಡುವೆನು" - ಹಿರಣ್ಯನ ವಾಗ್ಬಾಣಗಳು ಹರಿಯನ್ನು ತಲುಪಲಿಲ್ಲ. ವರಾಹನಿಗೆ ಮೊದಲು ಭೂಮಿಯನ್ನು ಒಂದು ನೆಲೆಯಲ್ಲಿರಿಸಬೇಕೆಂಬುದು ಮುಖ್ಯವಾಗಿದ್ದಿತು. ನೀರಿನಿಂದ ಮೇಲೆ ಬಂದು ಭೂಮಿಯನ್ನು ಸ್ಥಿರಗೊಳಿಸಿ, ಗದಾಪಾಣಿಯಾಗಿ ದೈತ್ಯನತ್ತ ತಿರುಗಿದನು.

## ಸಮರ ವಿವರ

ಹಿರಣ್ಯಾಕ್ಷನು ವರಾಹನನ್ನು ಕುರಿತು "ವನಗೋಚರ ಮೃಗವೇ" ಎಂದು ತಿರಸ್ಕಾರದ ಬಯ್ಗುಳನ್ನು ಅಂಟಿಸಿದ್ದನಲ್ಲವೆ? ವರಾಹ ಉತ್ತರಿಸಿದ- "ಹೌದು ನಾನು ಕಾಡು ಪ್ರಾಣಿಯೇ. ನಿನ್ನಂತಹ ಗ್ರಾಮಸಿಂಹಗಳನ್ನು (ನಾಯಿಗಳನ್ನು) ಹುಡುಕುತ್ತಿದ್ದೇನೆ". ಇಬ್ಬರ ನಡುವೆ ಘನಘೋರ ಯುದ್ಧವಾಯಿತು. ಬ್ರಹ್ಮೇಂದ್ರಾದಿ ದೇವತೆಗಳೂ ಆ ಯುದ್ಧವನ್ನು ನೋಡಲು ಆಕಾಶದಲ್ಲಿ ನೆರೆದರು. ಬ್ರಹ್ಮನು ಯುದ್ಧ ಸಾಗುತ್ತಿದ್ದ ರೀತಿಯನ್ನು ನೋಡಿ ಹರಿಯನ್ನು ಎಚ್ಚರಿಸಿದ- "ಮಗುವಿನಂತೆ ಆಟದಲ್ಲಿರಬೇಡ. ಈತ ನನ್ನ ವರಗಳಿಂದ ಗರ್ವಿತನಾಗಿದ್ದಾನೆ. ಹಿಂಸಕನಾಗಿದ್ದಾನೆ. ಶತ್ರುನಾಶದಲ್ಲಿ ವಿಳಂಬವಾಗಬಾರದು". ಬ್ರಹ್ಮನ ಮಾತಿನಿಂದ ಭಗವಂತನ ಗಮನ ಸೆಳೆದಂತಾಯಿತು. ಕ್ಷಣ ವಿಭ್ರಮಣೆಯಿಂದಾಗಿ, ಹಿರಣ್ಯಾಕ್ಷನ ಮೇಲೆ ಮಾಡಿದ ಗದಾಪ್ರಹಾರ ಗುರಿಮುಟ್ಟಲಿಲ್ಲ. ದೈತ್ಯನ ಪ್ರತಿಘಾತದಿಂದ ಸ್ವಾಮಿಯ ಗದೆ ಜಾರಿತು. ಹಿರಣ್ಯಾಕ್ಷ ಯುದ್ಧನೀತಿಯನ್ನು ಅನುಸರಿಸಿ ಆಕ್ರಮಣ ಮಾಡದೆ ನಿಂತುಕೊಂಡ. ಸ್ವಾಮಿಯು ಚಕ್ರವನ್ನೂ ಹಿಡಿದ. ಹಿರಣ್ಯಾಕ್ಷನು ಗದೆಯಿಂದ ಹೊಡೆದಾಗ ಸ್ವಾಮಿಯು ಅದನ್ನು ಕಿತ್ತುಕೊಂಡು ಹಿಂದಿರುಗಿಸ ಹೋದಾಗ ದಾನವನು ಅದನ್ನು ತಿರಸ್ಕರಿಸಿ ತ್ರಿಶೂಲವನ್ನು ಕೈಗೊಂಡ. ದೈತ್ಯ ಪ್ರಾಯೋಜಿತವಾದ ತ್ರಿಶೂಲವು ದೇವ ಪ್ರಯೋಗದ ಚಕ್ರಹತಿಯಿಂದ ಶತಛಿದ್ರವಾಯಿತು. ಆಯುಧಹೀನನಾದ ಹಿರಣ್ಯಾಕ್ಷನಿಗೆ ಕೋಪ ನೆತ್ತಿಗೇರಿತು. ಓಡಿಬಂದು ಹರಿಯ ವಕ್ಷಸ್ಥಳಕ್ಕೆ ತನ್ನ ಬಲವಾದ ಮುಷ್ಟಿಯಿಂದ ಗುದ್ದಿ ಮಾಯಾ ಯುದ್ಧವನ್ನು ಆರಂಭಿಸಿದನು. ತಾನು ಕಂಡು ಬರದೆ ತಾನು ಸೃಷ್ಟಿಸಿದ ಉತ್ಪಾತಗಳು ಮಾತ್ರ ಕಂಡು ಬರುವಂತೆ ಮಾಡಿದನು. ಆಕಾಶವೆಲ್ಲ ಅಂಧಕಾರಮಯವಾಯಿತು. ಲಕ್ಷಾಂತರ ರಾಕ್ಷಸರು ಭೂ ನಭೋಂತರಾಳಗಳನ್ನು ತುಂಬಿದಂತೆ ಕಂಡುಬಂದರು. ಅವರುಗಳು ಆಯುಧಧಾರಿಗಳಾಗಿ ಕಡಿ, ತಿವಿ, ಕೊಲ್ಲು ಎಂದು ಉದ್ಘೋಷಗಳಿಂದ ಉಲ್ಲೋಲಕಲ್ಲೋಲವನ್ನುಂಟು ಮಾಡಿದರು.

ಹರಿಯು ತನ್ನ ಸುದರ್ಶನ ಪ್ರಯೋಗದಿಂದ ದೈತ್ಯ ಮಾಯೆಯನ್ನು ಹರಿಸಿದನು. ಬೇರೆ ದಾರಿ ಕಾಣದೆ ಹಿರಣ್ಯಾಕ್ಷನು ಪ್ರತ್ಯಕ್ಷವಾಗಿಯೇ ಇದ್ದ ವರಾಹನನ್ನು ಬಾಚಿ ತಬ್ಬಿ ಹಿಡಿದು ತನ್ನ ಆಲಿಂಗನದಲ್ಲಿ ಹಿಂಡಿಬಿಡಲು ಪ್ರಯತ್ನಿಸಿದನು. ಅದು ಸಾಧ್ಯವಾಗದೆ ಗುದ್ದಿ ಸಾಯಿಸಲು ಪ್ರಯತ್ನಿಸಿದನು. ದೈತ್ಯನ ನೂರು ಪ್ರಯತ್ನಗಳೂ ವಿಫಲವಾದವು. ಹತ್ತಿರದಲ್ಲಿಯೇ ಇದ್ದವನನ್ನು ಆಯುಧದ ಅಗತ್ಯವಿಲ್ಲದ ಹರಿ ಬರಿಗೈನಿಂದಲೇ ಬಡಿದನು.

ದೈತ್ಯನು ಮರಣವನ್ನು ಸುಲಭವಾಗಿಯೇ ಪಡೆದನು. ದೇವತೆಗಳು ಜಯಕಾರ ಮಾಡಿದರು. ಅವರ ಚಿಂತೆ, ಭಯಗಳು ನಾಶವಾಗಿ, ಶಾಂತಿ ಸಮಾಧಾನಗಳು ಹರಡುವಂತಾಯಿತು.

## ಅವತಾರದ ಉದ್ದೇಶ

ಇಲ್ಲಿ ಪ್ರಶ್ನೆಯೆಂದರೆ ವರಾಹಾವತಾರದ ಉದ್ದೇಶ ಭೂಮಿಯನ್ನು ಉದ್ಧರಿಸುವುದಾದ ಮೇಲೆ ಹಿರಣ್ಯಾಕ್ಷನ ವಧೆಯಾದದ್ದು. ಆತ ಪರಾಕ್ರಮಿ, ಧೈರ್ಯಶಾಲಿ. ಜೊತೆಗೆ ಬ್ರಹ್ಮವರದಿಂದ ಗರ್ವಿತನಾದವ. ಬ್ರಹ್ಮನ ವರದ ವಿವರಗಳು ಇಲ್ಲಿ ನಮಗೆ ಸಿಗಲಾರವು, ಆದರೆ ಬ್ರಹ್ಮನೇ ಹೇಳುವಂತೆ, ಅವನ ವರಗಳಿಂದ ಮತ್ತನಾಗಿರುವ ಹಿರಣ್ಯಾಕ್ಷನನ್ನು ಸಂಹರಿಸುವುದು ಕಷ್ಟಕರವಾಗಬಹುದು ಎಂಬ ಅಭಿಪ್ರಾಯವುಂಟು. ಬ್ರಹ್ಮನೇ ಹಿರಣ್ಯಾಕ್ಷನು ಗೋಬ್ರಾಹ್ಮಣರಾದಿಯಾಗಿ ನಿರಪರಾಧಿಗಳ ಹಿಂಸೆಯಲ್ಲಿ ತೃಪ್ತಿ ಪಡೆಯುತ್ತಿದ್ದನೆಂದು ಹೇಳುವುದಿದೆ. ಹಾಗಾಗಿ ಹಿರಣ್ಯಾಕ್ಷನ ಪಾಪದ ಕೊಡ ಯಜ್ಞವರಾಹನ ದರ್ಶನದ ಹೊತ್ತಿಗೆ ಪೂರ್ಣವಾಗಿ ತುಂಬಿದ್ದಿತು ಎಂದು ಹೇಳಬಹುದು. ಯುದ್ಧದಲ್ಲಿ ಧರ್ಮಯುದ್ಧಕ್ಕೆ ಒತ್ತು ಹಾಕಿ ಹರಿಯ ಗದೆ ಬಿದ್ದಾಗ ಇನ್ನೊಂದು ಆಯುಧ ಹಿಡಿಯುವವರೆಗೆ ತಡೆಯುವುದು ಅವನಲ್ಲಿನ ಉದಾತ್ತತೆಗೆ ಉದಾಹರಣೆಯಾಗಬೇಕು. ಎದುರಾಳಿಗಳಿಲ್ಲವೆಂಬ ಅವನ ಅಹಂಕಾರವೇ ಪತನ ಹೇತುವಾಯಿತು ಎಂದು ಹೇಳಬರುತ್ತದೆ. ಶಿಷ್ಟರ ರಕ್ಷಣೆಯಲ್ಲಿ ಕಾರ್ಯಮಗ್ನನಾಗಿದ್ದ ವರಾಹನಿಗೆ ತನ್ನ ಕಾರ್ಯಕ್ಕೆ ಅಡ್ಡಿಯನ್ನುಂಟು ಮಾಡುವ ಹಾಗೆ ತೋರಿರಲಿಕ್ಕೂ ಸಾಕು. ಈ ರೀತಿಯಲ್ಲಿ ಇದು ದುಷ್ಟಶಿಕ್ಷಣವೆಂದರೂ ಅನ್ವಯ ದೂರವಾಗದೆ ಎಂಬ ಸಂದೇಹ ಉಂಟಾಗದಿರಲು ಸಾಧ್ಯವಿಲ್ಲ. ಹಿರಣ್ಯಾಕ್ಷ ಸತ್ತದ್ದೇಕೆ ಅಥವಾ ಹಿರಣ್ಯಾಕ್ಷನನ್ನು ಕೊಲ್ಲಬೇಕಾದ ಅಗತ್ಯವೇನಿತ್ತು ಎಂಬುದಕ್ಕೆ ಉತ್ತರವಾಗಿ ಮುಂದೆ ಬೆಳೆದುಬಂದ ಕಥೆಯಂತೆ - ಭೂಮಿಯನ್ನು ಚಾಪೆ ಸುತ್ತಿ ರಸಾತಳಕ್ಕೆ ಇಳಿದ ಹಿರಣ್ಯಾಕ್ಷನ ದೈತ್ಯ ಮುಷ್ಟಿಯಿಂದ ಭೂಮಿಯನ್ನು ಬಿಡಿಸಿಕೊಂಡು ಬಂದ ವರಾಹಾವತಾರಿ ವಿಷ್ಣು- ಎಂಬುದು ಕಾರ್ಯಕಾರಣ ರೀತ್ಯಾ ಸುಸಂಬದ್ಧವಾಗುತ್ತದೆ.

ಹಿರಣ್ಯಾಕ್ಷ ವರಗಳು ಎಂಬ ಒಂದು ಮಾತಿದೆ. ಬ್ರಹ್ಮನಿಂದ ವರಗಳನ್ನು ಪಡೆದದ್ದು ಹಿರಣ್ಯಕಶಿಪುವೇ ಹೊರತು ಹಿರಣ್ಯಾಕ್ಷನಲ್ಲ. ಹಿರಣ್ಯಾಕ್ಷ ತಪಸ್ಸು ಮಾಡಿದ್ದಾಗಲೀ, ಬ್ರಹ್ಮ ವರಗಳನ್ನು ನೀಡಿದ ವಿವರವಾಗಲೀ ಚಿತ್ರಿತವಾಗದ ಹಿನ್ನೆಲೆಯಲ್ಲಿ ಬ್ರಹ್ಮನ ಎರಡು ಮಾತಿಗೇ- "ನನ್ನ ವರದಿಂದ ಈತ ಗರ್ವಿತನಾಗಿದ್ದಾನೆ" ಎಂಬ ಬೆಲೆ ಬಂದಂತಾಗಿ ಆ ಹಿನ್ನೆಲೆಯಲ್ಲಿ ಹಿರಣ್ಯಾಕ್ಷ ಅಜೇಯತೆಯ ಅಹಂಕಾರದಲ್ಲಿ ಅಲ್ಲಸಲ್ಲದ ಕೆಲಸಗಳನ್ನು ಮಾಡಹತ್ತಿದ್ದ ಎಂದು ಊಹಿಸಬೇಕು. ಈ ಸೋದರರು ಹುಟ್ಟುವ ಮೊದಲೇ ಭವಿಷ್ಯದ ಸೂಚನೆಯನ್ನು ಕಶ್ಯಪರು ದಿತಿಗೆ ಮೊದಲೇ ನೀಡಿದ್ದರೆಂಬುದನ್ನು ಸ್ಮರಿಸಬೇಕು. ಅಲ್ಲಿ ಈ ಪುತ್ರದ್ವಯರು ಮಾಡುವ ಘನಕಾರ್ಯಗಳ ವಿವರವನ್ನೇ ನೀಡಲಾಗಿದೆ. ಅತ್ಯಾಚಾರ, ಅನಾಚಾರಗಳನ್ನು ಮಾಡುತ್ತ ಹರಿಭಕ್ತರನ್ನೂ, ಸಾಧು ಸಜ್ಜನರನ್ನೂ ಹಿಂಸಿಸುತ್ತ ಭಗವದ್ವೇಷಿಗಳಾಗಿ ಬದುಕು ನಡೆಸಿ ಹರಿಯಿಂದಲೇ ಹತರಾಗುತ್ತಾರೆ ನಿನ್ನ ಗರ್ಭಸ್ಥ ಪುತ್ರರು ಎಂಬುದೇ ಅಲ್ಲದೆ ಕಶ್ಯಪರು ಪ್ರಹ್ಲಾದ ಜನನದ ಸೂಚನೆಯನ್ನೂ ಅಲ್ಲಿಯೇ ನೀಡುತ್ತಾರೆ.

# ಹಿರಣ್ಯಕಶ್ಯಪ ಜೀವನ

ಹಿರಣ್ಯಾಕ್ಷನ ಮರಣದ ನಂತರ ಭಾಗವತದ ಗತಿ ಬದಲಾಯಿಸುತ್ತದೆ. ಪ್ರಸ್ತುತ ಸಂದರ್ಭದ ಹಿನ್ನೆಲೆಯಲ್ಲಿ ಹಿರಣ್ಯಕಶ್ಯಪನ ಮೇಲೆ ಈ ಮರಣದ ಪ್ರಭಾವವನ್ನು ಕಾಣಲು ನಾವು ಸಪ್ತಮಸ್ಕಂಧದವರೆಗೆ ಕಾಯಬೇಕು. ಇಲ್ಲಿ ಶಿಶುಪಾಲನನ್ನು ಕೃಷ್ಣ ಸಂಹರಿಸಿದ ನಂತರ ಧರ್ಮರಾಯನ ಪ್ರಶ್ನೆಗಳಿಗೆ ಉತ್ತರ ನೀಡುತ್ತ ನಾರದರು ಜಯವಿಜಯರ ಕಥೆಯನ್ನು ಆಮೂಲಾಗ್ರವಾಗಿ ವಿವರಿಸುತ್ತಾರೆ. ಜಯವಿಜಯರು ಹಿರಣ್ಯಾಕ್ಷ-ಹಿರಣ್ಯ ಕಶಿಪುಗಳಾಗಿ ದಿತಿಯ ಗರ್ಭದಲ್ಲಿ ಜನಿಸಿ ವರಾಹ-ನರಸಿಂಹರಿಂದ ಅನುಕ್ರಮವಾಗಿ ಹತ ರಾಗುವುದು, ರಾವಣ-ಕುಂಭಕರ್ಣರಾಗಿ ಕೈಕಸಿಯ ಮಕ್ಕಳಾಗಿ ಶ್ರೀರಾಮಚಂದ್ರನಿಂದ ಹತರಾದದ್ದು, ದ್ವಾಪರ ಯುಗದಲ್ಲಿ ದಂತವಕ್ರ - ಶಿಶುಪಾಲರಾಗಿ ಕೃಷ್ಣನಿಂದ ಕೊನೆಯಾಗಿ ವೈಕುಂಠಕ್ಕೆ ವಾಪಸಾಗುವುದು ಸಂಕ್ಷೇಪವಾಗಿ ವಿವರಣೆಗೊಂಡಿದೆ. ಈ ಒಂದು ಕಥಾಸಾರವನ್ನೂ ನೀಡುತ್ತ ನಾರದರು ಹಿರಣ್ಯಕಶಿಪುವಿನ ಜೀವನವನ್ನು ಸವಿಸ್ತಾರವಾಗಿ ಹೇಳುತ್ತಾರೆ. ಈ ಕಥೆ ಹತ್ತು ಅಧ್ಯಾಯಗಳಲ್ಲಿ ಹೇಳಲ್ಪಟ್ಟಿದೆ. ವ್ಯಾಸರ ಉದ್ದೇಶವೇ ಧರ್ಮವನ್ನು ವಿವರಿಸುವುದು. ಅದಕ್ಕೆ ಮಿಕ್ಕೆಲ್ಲವೂ ಭಗವಂತನ ಚರಿತ್ರೆಯೂ ಸಹ ನೆಪಗಳು ಎಂಬುವುದನ್ನು ಪ್ರತ್ಯೇಕವಾಗಿ ಹೇಳಬೇಕಿಲ್ಲ. ಇಲ್ಲಿಯೂ ನರಸಿಂಹಾವತಾರದ ನೆಪದಲ್ಲಿ ಪ್ರಹ್ಲಾದ ಚರಿತೆಯು ಹಿರಣ್ಯಕಶಿಪುವಿನ ಜೀವನದ ಮೂಲಕ ವರ್ಣಿತವಾಗಿದೆ.

ಸನಕಾದಿಗಳು ಜಯವಿಜಯರಿಗೆ ನೀಡಿದ ಶಾಪದ ಪ್ರಸಂಗ ಇಲ್ಲಿ ಪುನರುಕ್ತವಾಗಿದೆ. ಅನಂತರ ಕೆಲವು ಮಾತುಗಳಲ್ಲಿಯೇ ವರಾಹಾವತಾರದಲ್ಲಿ ಹರಿಯು ಹಿರಣ್ಯಾಕ್ಷನನ್ನು ವಧಿಸಿದ ಸುದ್ದಿಯನ್ನು ಹೇಳಿ ಅದು ಹಿರಣ್ಯಕಶಿಪುವಿನಲ್ಲಿ ಉಂಟುಮಾಡಿದ ಕೋಪೋದ್ರೇಕ ವನ್ನು ವಿವರಿಸುತ್ತಾರೆ. ಅದರಂತೆ ರಾಕ್ಷಸ ಸಾಮ್ರಾಟನಿಗೆ ವಿಷ್ಣುವಿನ ಮಾಯಾಲೀಲೆಯ ಬಗ್ಗೆ ಅಸಾಧ್ಯವಾದ ಕೋಪವುಂಟಾಯಿತು. ವಿಷ್ಣುವಿನ ಭಕ್ತರನ್ನು ಪೀಡಿಸುವುದರಿಂದ ವಿಷ್ಣುವಿನ ಬೇರು ಕಡಿಯಬೇಕು ಎಂದುಕೊಂಡ. ತನ್ನ ಅನುಚರರಿಗೆ ದೈವ ವಿರೋಧದ ಮಾರ್ಗಪ್ರವರ್ತಕರಾಗಲು ಆಜ್ಞೆ ನೀಡಿದ. ವಿಷ್ಣು ವಿರುದ್ಧ ವ್ಯವಸ್ಥೆಯ ನಿರ್ಮಾಣದ ಉದ್ದೇಶ ಅವನಿಗೆ. ತಮ್ಮನ ಮರಣದ ಕಾರಣದಿಂದ ಶೋಕತಪ್ತರಾದ ತನ್ನ ತಾಯಿ ಹಾಗೂ ತಮ್ಮನ ಹೆಂಡತಿ ಮಕ್ಕಳಿಗೆ ಸಮಾಧಾನ ಹೇಳಿದ. ನಂತರ ವಿಷ್ಣುವಿನ ಹಗೆ ಸಾಧನೆಯ ಬಗ್ಗೆ ಯೋಚಿಸತೊಡಗಿದ. ಇಡೀ ಜಗತ್ತಿಗೆ ತಾನೊಬ್ಬನೇ ಸ್ವಾಮಿಯಾಗಿ ಜರಾ ಮರಣಗಳಿಲ್ಲದವನಾಗಿ ಬೆಳೆಯಬೇಕು. ತನಗೆ ವಿರುದ್ಧ ನಿಲ್ಲುವವರು ಯಾರೂ ಇರದಂತೆ ಮಾಡಿಕೊಳ್ಳಬೇಕು. ಇದೆಲ್ಲವನ್ನು ಸಾಧಿಸುವುದಕ್ಕೆ ತಪಸ್ಸು ಮಾತ್ರವೇ ದಾರಿ ಎಂದು ಬಗೆದು ಮಂದರ ಪರ್ವತದ ತಪ್ಪಲಿಗೆ ಹೋಗಿ ತಪಸ್ಸು ಮಾಡತೊಡಗಿದ.

ಹಿರಣ್ಯಾಕ್ಷನ ಪತ್ನೀ ಪುತ್ರರಿಗೆ ಸಾಂತ್ವನ ಹೇಳಿದನೆಂದು ಹೇಳಲಾಗಿದೆ. ಇಲ್ಲಿ ಹಿರಣ್ಯಕಶ್ಯಪನ ಜ್ಞಾನದ ಆಳವನ್ನು ತಿಳಿಯಬಹುದು. ರಣರಂಗದಲ್ಲಿ ಯುದ್ಧ ಮಾಡುತ್ತ ಸಾಯುವುದು ಶ್ಲಾಘ್ಯವಾದದ್ದೇ ಆಗಿದೆ. ಅದು ವೀರ ಧರ್ಮವೂ ಹೌದು. ಜೀವಿಗಳು

ಜಗತ್ತಿನ ಸತ್ರದಲ್ಲಿ ಒಂದು ಸ್ವಲ್ಪಕಾಲ ಜೊತೆಗಿದ್ದು ಅವರವರ ಪಾಡಿಗೆ ಅವರವರ ದಾರಿ ಹಿಡಿದು ಹೊರಡುವರು. ಜೀವನಿಗೆ, ಆತ್ಮನಿಗೆ, ಅಳಿವಿಲ್ಲ. ಆತನು ಶುದ್ಧನು, ಸರ್ವಜ್ಞನು. ದೇಹವನ್ನು ತಾಗುವ ಯಾವ ಭೋಗ ಅಜ್ಞಾನಗಳೂ ಅವನನ್ನು ತಾಗುವುದಿಲ್ಲ. ಆತ್ಮವನ್ನು ಶರೀರವೆಂದು ತಿಳಿಯಬಾರದು. ಹುಟ್ಟು-ಸಾವು, ಚಿಂತೆ-ದುಃಖ ಎಲ್ಲವೂ ಅಜ್ಞಾನದ ಪ್ರತೀಕಗಳೇ ಹೌದು. ಇಷ್ಟು ನೀತಿಯ ತಿಳಿವಿನ ಮಾತುಗಳನ್ನು ಹೇಳುವುದೇ ಅಲ್ಲದೆ 'ಉಶೀನರನ' ಮರಣದ ಸಂದರ್ಭದಲ್ಲಿ ಸಂಭವಿಸಿದ ಯಮಧರ್ಮರಾಯನ ಉಪದೇಶ ರಹಸ್ಯವನ್ನು ಸಹ ಉದಾಹರಣೆಯಾಗಿ ಹೇಳುತ್ತಾನೆ. ಇಂತಹ ಜ್ಞಾನಿಗೆ ಹರಿಯನ್ನು ಎದುರಿಸುವ ಹುಚ್ಚೋ ಬೆಪ್ಪೋ ಏಕೆ ಉಂಟಾಯಿತು ಎಂದರೆ ಉತ್ತರಿಸುವುದು ಕಷ್ಟ, ಸನಕಾದಿಗಳ ಶಾಪದ ಹೊರತು ಬೇರೆ ಕಾರಣವಾವುದೂ ಕಂಡುಬರದು. ಅದಕ್ಕೆ ಕಾರಣ ಅಹಂಕಾರ ನಿರಸನ.

ಇಲ್ಲಿಯೇ ಅಣ್ಣತಮ್ಮಂದಿರಿಬ್ಬರ ಜೀವನದ ಮತ್ತೆರಡು ವಿವರಗಳನ್ನು ನೆನೆಯುವುದು ಸೂಕ್ತ. ಹಿರಣ್ಯಾಕ್ಷನ ಪತ್ನಿ- ವೃಷದ್ಭಾನು. ಪುತ್ರರು ಒಂಬತ್ತು ಮಂದಿ-ಶಕುನಿ, ಶಂಬರ, ಧೃಷ್ಟ, ಭೂತಸಂತಾಪನ, ವೃಕ, ಕಾಲನಾಭ, ಮಹಾನಾಭ, ಹರಿಶ್ಮಶ್ರು ಹಾಗೂ ಉತ್ಕಚ. ಹಿರಣ್ಯಕಶ್ಯಪನ ಪತ್ನಿ ಕಯಾಧು (ಜಂಭನ ಪುತ್ರಿ). ನಾಲ್ವರು ಪುತ್ರರು-ಸಂಹ್ಲಾದ, ಅನುಹ್ಲಾದ, ಹ್ಲಾದ, ಪ್ರಹ್ಲಾದ. (ದಿತಿಗೆ ಒಬ್ಬ ಮಗಳೂ ಉಂಟು -ಸಿಂಹಿಕೆ. ಅಮೃತ ಮಂಥನ ಕಾಲದಲ್ಲಿ ಪ್ರಸಿದ್ಧನಾದ ರಾಹು ಈಕೆಯ ಮಗ)

## ತಪಸ್ಸು-ವರ

ಮಂದರ ಪರ್ವತದ ತಪ್ಪಲಿನಲ್ಲಿ ಸೇರಿದ ಹಿರಣ್ಯಕಶಿಪು ತಪಸ್ಸಿಗೆ ನಿಂತ. ಹಿರಣ್ಯಕಶಿಪುವಿನ ಘೋರವಾದ ತಪಸ್ಸಿನ ಬಗ್ಗೆ ಭಾಗವತವು ದೀರ್ಘವಾದ ವಿವರಣೆಯನ್ನು ನೀಡುತ್ತದೆ. ಇದರ ಮಹಿಮೆ ಅಪಾರವಾಗಿರುತ್ತದೆ. ಅವನ ತಲೆಯಿಂದ ತಪೋಗ್ನಿಯು ಹೊಗೆಯೊಂದಿಗೆ ಹೊರಹೊಮ್ಮುತ್ತದೆ. ತಪನದಿಂದ ಕುದಿತ ತಪಿಸುತ್ತಿದ್ದ ಹಿರಣ್ಯಕಶಿಪುವಿನ ತಪನದ ಬೇಗೆ ಎಲ್ಲಾ ಲೋಕಗಳನ್ನು ಆವರಿಸತೊಡಗಿತು. ದೇವತೆಗಳು ಬ್ರಹ್ಮನಲ್ಲಿ ಮೊರೆಯಿಟ್ಟರು. ಬ್ರಹ್ಮನು ಮಂದರ ಪರ್ವತ ಬಳಿಬಂದು ತಪಸ್ಸಿನಿಂದ ಕೃಶವಾಗಿ ಜೀರ್ಣವಾಗುತ್ತಿದ್ದ ಹಿರಣ್ಯಕಶಿಪುವಿನ ದೇಹಕ್ಕೆ ತನ್ನ ಕಮಂಡಲದ ಮಂತ್ರೋಕ್ತ ಜಲದ ಆರೈಕೆ ಮಾಡಿ ಅವನ ಆರೋಗ್ಯವನ್ನು ಪರಿರಕ್ಷಿಸಿ ಮಾತನಾಡಿಸಿದ. ಹಿರಣ್ಯಕಶಿಪುವು ಬ್ರಹ್ಮನಿಗೆ ಸಾದರ ಪ್ರಣಾಮ ಮಾಡಿ ಸ್ತುತಿ ಪಾಠದಿಂದ ಮೆಚ್ಚಿಸಿದ. ಎಲ್ಲ ದೇವತೆಗಳ ಎಲ್ಲಾ ಗುಣಗಳನ್ನೂ ಬ್ರಹ್ಮನಿಗೆ ಆರೋಪಿಸಿ ಗುಣಗಾನ ಮಾಡಿದ. "ನೀನೇ ಅನಾದಿ, ಅನಂತ, ಸರ್ವಜ್ಞ, ಅಂತರ್ಯಾಮಿ" ಎಂದು ಹೇಳುತ್ತ ತನ್ನ ವರಗಳ ಪಟ್ಟಿಯನ್ನು ಮುಂದು ಮಾಡಿದ. "ಯಾವ ಪ್ರಾಣಿಯಿಂದಲೂ, ಬ್ರಹ್ಮಸೃಷ್ಟಿಯ ಯಾವ ಪ್ರಾಣಿಯಿಂದಲೂ, ದೇವತೆ, ದೈತ್ಯ ದಾನವ, ಯಕ್ಷ, ರಾಕ್ಷಸ, ಕಿನ್ನರ, ಕಿಂಪುರುಷರಾರಿಂದಲೂ ತನಗೆ ಮೃತ್ಯುವುಂಟಾಗಬಾರದು. ಹಗಲು-ರಾತ್ರಿ, ಒಳಗೆ-ಹೊರಗೆ, ಭೂಮಿಯಲ್ಲಿ-ಆಕಾಶದಲ್ಲಿ

ಎಲ್ಲಿಯೂ ತನಗೆ ಮೃತ್ಯುವುಂಟಾಗಬಾರದು. ಯಾವ ಅಸ್ತ್ರ ಶಸ್ತ್ರದಿಂದಲೂ ಮರಣವುಂಟಾಗ ಬಾರದು. ಎಲ್ಲ ದೇವತೆಗಳ ಶಕ್ತಿ, ಐಶ್ವರ್ಯಗಳೂ ತನ್ನಲ್ಲಿ ಸಮಾವೇಶಗೊಳ್ಳಬೇಕು. ಎಲ್ಲ ಋಷಿ ಮುನಿಗಳ ಶಕ್ತಿ ಸಾಮರ್ಥ್ಯಗಳೂ ತನಗೊದಗಿ ಬರಬೇಕು". ಬ್ರಹ್ಮನು ಮೊದಲೇ ಯಾವ ವರವನ್ನೂ ತಾನು ಕೊಡುತ್ತೇನೆ ಎಂದು ವಾಗ್ದಾನ ಮಾಡಿದ್ದ-ದೇವತೆಗಳು ಬ್ರಹ್ಮನಿಗೆ ಇಂತಹ ವರಗಳನ್ನು ಹಿರಣ್ಯಕಶಿಪುವು ಕೇಳಬಹುದೆಂದು ಸೂಚನೆಯನ್ನು ನೀಡಿದ್ದರೂ ಬ್ರಹ್ಮನು ಹರಿಯ ಜಗನ್ನಾಟಕದಲ್ಲಿ ಪಾತ್ರಧಾರಿಯಾಗಿದ್ದ.

ದೈತ್ಯನು ಕೇಳಿದ ಎಲ್ಲಾ ವರಗಳಿಗೂ 'ತಥಾಸ್ತು' ಎಂದು ಬಿಟ್ಟ. ರಾಕ್ಷಸನ ತಾಮಸ, ರಾಜಸ ಪ್ರವೃತ್ತಿಗಳಿಂದ ಪ್ರೇರಿತವಾದ ಬುದ್ಧಿಗೆ ತೋಚಿದ್ದೇ ಅಷ್ಟು ಆಗಿರಬೇಕು. ಈ ಎರಡು ವಿಭಾಗದ ವರಗಳೂ ಹಿರಣ್ಯಕಶಿಪುವಿನ ಜೀವನದ ಮುಂದಿನ ಗತಿಯನ್ನು ಬದಲಾಯಿಸಿದವು ಎನ್ನಬೇಕು. ಅವನ ರಾಜ್ಯದಲ್ಲಿ - ಅದು ಲೋಕಗಳನ್ನೆಲ್ಲ ವ್ಯಾಪಿಸಿತ್ತು, ಅವನದೇ ವೇದವಾಕ್ಯವಾಯಿತು. ಎಲ್ಲ ಜನರಿಗೂ ಕಂಡುಬರುವಂತೆ ದೇವತೆಗಳ ಶಕ್ತಿ ಸಾಮರ್ಥ್ಯ ಐಶ್ವರ್ಯಗಳನ್ನು ಅಂಗೈಯ ನೆಲ್ಲಿಯಂತೆ ಪಡೆದಿದ್ದ ಹಿರಣ್ಯಕಶಿಪು ಎದರೇ ಇಲ್ಲದವನಾದ.

## ಪಾಪದ ಕೊಡ

ಬ್ರಹ್ಮದೇವರು ವರಪ್ರಸಾದಿಗಳೆಂದು ಪ್ರಸಿದ್ಧರಾದವರೇ ಆದರೂ ಇಷ್ಟು ವ್ಯಾಪಕ ವಾದ ವರಗಳನ್ನು ಈ ಹಿಂದೆ ಯಾರಿಗೂ ನೀಡಿರಲಿಲ್ಲ. ದಾನವನು ತಾನು ಪಡೆದ ಹುಂಡಿಗಳನ್ನು ಧನವಾಗಿ ಪರಿವರ್ತಿಸಿಕೊಳ್ಳತೊಡಗಿದ. ಎಲ್ಲ ದಿಕ್ಕಿನ ಎಲ್ಲ ಅಧಿಪತಿಗಳೂ ಅವನ ಅಧೀನರಾದರು. ದೇವೇಂದ್ರನು ತನ್ನ ಅರಮನೆಯನ್ನೂ ಬಿಟ್ಟು ಓಡಬೇಕಾಯಿತು. ಇಂದ್ರನರಮನೆಯನ್ನೇ ತನ್ನ ವಾಸಸ್ಥಾನವನ್ನಾಗಿ ಮಾಡಿಕೊಂಡ. ವಿಲಾಸ ಸ್ಥಾನವನ್ನಾಗಿ ಮಾಡಿಕೊಂಡ ಎಂದರೂ ನಡೆಯುತ್ತದೆ. ಇಂದ್ರಸಿಂಹಾಸನವನ್ನು ಸಾಮಾನ್ಯ ಕುರ್ಚಿ ಎಂಬಂತೆ ಕಂಡ. ಗಂಧರ್ವ, ಯಕ್ಷಕಿನ್ನರರೆಲ್ಲ ಇವನ ಸ್ತುತಿಯನ್ನು ಮಾಡುವಂತಾಯಿತು. ಅಪ್ಸರೆಯರು ಇವನ ಮನಕ್ಕೆ ವಿನೋದ ನೀಡುವ ಗೊಂಬೆಗಳಾದರು. ಕಡೆಗೆ ನಾರದ-ತುಂಬುರರೂ ಇವನ ಗುಣಗಾನದ ಕೀರ್ತನೆ ಮಾಡುವಂತಾದರು. ಸಾಮ್ರಾಟನಾಗಿ ಸಪ್ತ ದ್ವೀಪಗಳಲ್ಲಿ ಎದುರಿಲ್ಲದ ಶಾಸಕನಾಗಿ, ಕಾಣುವೆಲ್ಲದರ ವರ್ತಮಾನ ಭವಿಷ್ಯಗಳನ್ನು ನಿರ್ದೇಶಿಸುವ ಶಕ್ತಿಯುಳ್ಳವನಾಗಿ, ಸಮಸ್ತ ರೀತಿಯ ಐಶ್ವರ್ಯಗಳಿಗೂ ಒಡೆಯನಾಗಿ ಸಮೃದ್ಧಿಯ ಮಧ್ಯದಲ್ಲಿ ಮತ್ತೆ ಕುಳಿತಿದ್ದ ಅವನಿಗೆ, ಇಂದ್ರಿಯಗಳ ಹಸಿವು ದಾಹ ಅಪಾರವಾಗಿದ್ದಿತು. ಸಮಸ್ತ ಮಾನವ ದಾನವ ದೇವತೆಗಳನ್ನೂ ಶಾಸಿಸುತ್ತಿದ್ದರೂ ತನ್ನೊಳಗೇ ಇದ್ದ ಇಂದ್ರಿಯಗಳಿಗೆ ದಾಸನಾಗಿದ್ದ. ಅನಂತವಾದ ಭೋಗಗಳ ನಡುವೆಯೂ ಅತೃಪ್ತಿಯ ಆಗರವಾಗಿದ್ದ. ಹಾಗಾಗಿಯೇ ಅಹಂಕಾರದ, ಅಜ್ಞಾನದ, ಅಂಧಕಾರದ ಬಂಧು ವಾಗಿಬಿಟ್ಟ. ದುರಹಂಕಾರಿಯಾದ್ದರಿಂದ ದುರ್ನಯವೂ, ದುರಾಚಾರವೂ, ದುಷ್ಟತನವೂ ಹೆಚ್ಚಾಗಿ ತಾನೇ ಸರ್ವಜ್ಞ- ಸರ್ವಶಕ್ತ- ಸರ್ವಶಾಸ್ತ್ರ ಎಂಬ ಭ್ರಮೆಗೊಳಗಾದ. ತನ್ನನ್ನೇ

ದೇವರೆಂದು- ಕರೆಯುವುದೇನು ಬಂತು-ಪೂಜೆ ಮಾಡಬೇಕೆಂದು ಹೇಳಿದ. ಇತರ ದೇವತೆಗಳ ಪೂಜೆಯೇ ಆಗಲಿ, ಸ್ತುತಿಯೇ ಆಗಲಿ ನಡೆಯಲೇಬಾರದು ಎಂದು ಆಜ್ಞೆ ಹೊರಡಿಸಿದ. ನಡೆಯುತ್ತಿದ್ದ ಯಜ್ಞ ಯಾಗಾದಿಗಳನ್ನು ನಿಲ್ಲಿಸಿದ. ತನಗೆ ಸಮರ್ಪಿತವಾಗುವಂತಿದ್ದರೆ ಯಾವುದೇ ಪೂಜೆಯೂ ನಡೆಯಲು ಅಡ್ಡಿಯಿಲ್ಲವೆಂದ. ಅವನ ಅಸಂಪ್ರದಾಯಕ ಅನಾಯಕತೆ ಹೆಚ್ಚಿದಂತೆ ಅವನೊಳಗಿನ ಹರಿದ್ವೇಷವೂ ಹೆಚ್ಚಾಗ ತೊಡಗಿತು. ಹರಿಯನ್ನು ಜಗತ್ತಿನ ನೆನಪಿನಿಂದಲೇ ತೊಡೆದು ಹಾಕಿ ಅವನ ಬೇರನ್ನು ಕಡಿದೊಗೆಯಬೇಕೆಂಬ ಹವಣಿಕೆ ಹೆಚ್ಚಾಗತೊಡಗಿತು. ಅದಕ್ಕಾಗಿ ಗುರುಕುಲಗಳಲ್ಲಿ ಹರಿದೂರವಾದ ಪಾಠ ಪ್ರವಚನಗಳಾಗುವಂತೆ ಏರ್ಪಡಿಸಿದ. ದಿನೇ ದಿನೇ ಹಿರಣ್ಯಕಶಿಪುವಿನ ಪಾಪದ ಕೊಡ ತುಂಬುತ್ತ ನಡೆಯಿತು. ಹರಿ ನೀಡಿದ ಸ್ವಾತಂತ್ರದಿಂದಲೇ ತನ್ನ ಅಂತ್ಯವನ್ನು ಹತ್ತಿರ ಮಾಡಿಕೊಳ್ಳುತ್ತ ಹೊರಟ.

## ಪ್ರಹ್ಲಾದ ಭಕ್ತಿ

ಹಿರಣ್ಯಕಶಿಪುವಿನ ನಾಲ್ಕನೆಯ ಮಗ ಪ್ರಹ್ಲಾದ. ಇನ್ನೂ ಹುಡುಗ, ಆದರೆ ಹರಿಯಲ್ಲಿ ಅನನ್ಯ ಭಕ್ತಿಯಿದ್ದವ. ದಿತಿಯ ಗರ್ಭದಲ್ಲಿ ದೈತ್ಯ ಸೋದರರು ಬೆಳೆಯುತ್ತಿರುವಾಗಲೇ ಭವಿಷ್ಯದರ್ಶಿಯಾದ ಕಶ್ಯಪರು ತಮ್ಮ ಪೌತ್ರನ ಹಿರಿಮೆಯನ್ನು ಹೊಗಳಿ ದಿತಿಗೆ 'ನಿನ್ನ ಮೊಮ್ಮಗ ಶ್ರೇಷ್ಠಭಕ್ತನಾಗಿ ಹರಿಯ ಮೆಚ್ಚುಗೆಗೆ ಪಾತ್ರನಾಗಿ ಪ್ರಸಿದ್ಧನಾಗುತ್ತಾನೆ' ಎಂದು ಹೇಳುತ್ತಾರೆ. ಪ್ರಹ್ಲಾದ ಹಾಗೆಯೇ ಬೆಳೆದ. ಮಗುವಿಗೆ ಹಿರಿಯರ ಬಗ್ಗೆ ಅಪಾರವಾದ ಗೌರವಾದರ, ವಿನಯದ ಗಣಿ. ಗರ್ಭಭಾಗವತನಾಗಿ ಸದಾ ಹರಿಧ್ಯಾನದಲ್ಲಿಯೇ ಕಾಲ ನೂಕುವವನಾಗಿದ್ದಾನೆ. ಭಗವಂತನ ನೆನಪಿನಲ್ಲಿ ಧ್ಯಾನದಲ್ಲಿ ಕುಳಿತೇ ಇರುತ್ತಿದ್ದ ಅವನನ್ನು ಅನೇಕ ಬಾರಿ ಜಡನೋ ರೋಗಿಯೋ ಎಂಬ ಭಾವನೆಯಿಂದ ನೋಡಲಾಗುತ್ತಿದ್ದಿತು. ತಿನ್ನುವುದರಲ್ಲಿ, ಆಟವಾಡುವುದರಲ್ಲಿ ಮಕ್ಕಳಿಗೆ ಸಹಜವಾದ ಉತ್ಸಾಹವನ್ನು ತೋರಿಸದೆ ಆತನು ದೈವ ಚಿಂತನೆಯಲ್ಲಿ ತೊಡಗಿರುತ್ತಿದ್ದ. ಸುತ್ತಲಿನ ಜಗತ್ತಿನಲ್ಲಿ ಆ ಪರಮಾತ್ಮನನ್ನೇ ಕಂಡು ಅವನೊಡನೆಯೇ ಆಡಿ, ಪಾಡಿ, ಕುಣಿದಾಡುತ್ತಿದ್ದಂತೆ ನಡೆದುಕೊಳ್ಳುತ್ತಿದ್ದ. ಪರಮಶಾಂತಿಯಿಂದಲೂ ಪರಮಭಕ್ತಿಯಿಂದಲೂ ಕೂಡಿದ ಪ್ರಹ್ಲಾದ ತಾನು ಸ್ವಸಂತಸದಲ್ಲಿ, ಸ್ವಾತ್ಮಾನಂದದಲ್ಲಿ ಇರುವುದರೊಂದಿಗೆ ತನ್ನ ಸುತ್ತಮುತ್ತಲ ಪರಿಸರದಲ್ಲಿದ್ದವರಿಗೂ ಶಾಂತಿಯನ್ನೂ ಮನಃತೃಪ್ತಿಯನ್ನುಂಟುಮಾಡಬಲ್ಲಂತಹ ಪ್ರಭಾವ ಬೀರುತ್ತಿದ್ದ.

'ವಾಸುದೇವೇ ಭಗವತಿ ಯಸ್ಯ ನೈಸರ್ಗಿಕೀ ರತಿಃ' ಎನ್ನುತ್ತಾರೆ ವ್ಯಾಸರು. ಅವನಿಗೆ ಭಗವಾನ್ ವಾಸುದೇವನಲ್ಲಿ ಸಹಜವಾಗಿಯೇ ಆಸಕ್ತಿಯಿದ್ದಿತು. ಹಾಗಾಗಿ ಸುತ್ತಣ ಪ್ರಪಂಚಕ್ಕೂ ಅದನ್ನು ಹಂಚುವುದರಲ್ಲಿ ಸಮರ್ಥನಾಗಿದ್ದ. ದೈತ್ಯ ಗುರು ಶುಕ್ರಾಚಾರ್ಯರ ಮಕ್ಕಳಾದ ಶಂಡ, ಅಮರ್ಕರು ದೈತ್ಯ ಬಾಲಕರಿಗೆ ಅರಮನೆಯ ಬಳಿಯ ಆಶ್ರಮ ಶಾಲೆಯಲ್ಲಿ ಪ್ರಾಥಮಿಕ ವಿದ್ಯಾಭ್ಯಾಸ ಮಾಡಿಸುತ್ತಿದ್ದರು. ಅವರಲ್ಲಿ ಪ್ರಹ್ಲಾದನೂ ಶಿಕ್ಷಣಾರ್ಥಿಯಾಗಿದ್ದ. ಭೇದಭಾವದಿಂದ ಕೂಡಿದ್ದ, ಹಿರಣ್ಯಕಶಿಪುವಿನ ಕೀರ್ತನೆಯಾಗಿದ್ದಂತಹ ಅವರ ಪಾಠವನ್ನು ಪ್ರಹ್ಲಾದನು ಯಾಂತ್ರಿಕವಾಗಿಯೇ ಕಲಿಯುತ್ತಿದ್ದರೂ ಅವನ ಮನೋ

ನಯನದ ಮುಂದೆ ನಿಜವಾದ ಪಾಠದ ವಿವರವಾದ ಕೋಶವೇ ತೆರೆದುಕೊಳ್ಳುತ್ತಿದ್ದಿತು. ಅದನ್ನೇ ಆ ಬಾಲಕನು ಮನನಮಾಡಿ ನಡೆಯುತ್ತಿದ್ದ. ಪರಂತು ಗುರುಗಳ ಮಾತಿಗಾಗಲೀ, ಪಾಠ್ಯಾಂಶಗಳಿಗಾಗಲೀ ಅಭ್ಯಂತರವನ್ನು ಸೂಚಿಸುತ್ತಿರಲಿಲ್ಲ. ಗುರುಗಳ ಮಾತಿನಲ್ಲಿ ತನಗೆ ಸಮ್ಮತಿ ಸಹಮತಿಯಿಲ್ಲವೆಂದು ಅವನೆಂದೂ ಹೇಳಲೂ ಹೋಗಲಿಲ್ಲ. ಒಂದು ರೀತಿಯ ಅಂತರ್ಮುಖೀ ಚಿಂತನೆಯಿಂದ ತನ್ನ ಹರಿಭಕ್ತಿಯ ಲೋಕದಲ್ಲಿ ತಾನು ನೆಮ್ಮದಿಯಿಂದ ನಿರುಮ್ಮಳವಾಗಿ ಇದ್ದುಬಿಟ್ಟಿದ್ದ. ಹರಿವಿರೋಧಿಯಾದ ಹಿರಣ್ಯಕಶಿಪುವು ಒಂದೊಮ್ಮೆ ತನ್ನ ಪುತ್ರನನ್ನು ಕುರಿತು ಮಾತನಾಡುತ್ತ ಅವನು ಏನು ಕಲಿತಿದ್ದಾನೆ ಎಂಬ ಕುತೂಹಲವನ್ನು ತೋರಿದಾಗಲೇ ಪ್ರಹ್ಲಾದನ ಭಕ್ತಿ ಭಂಡಾರ ಬಯಲಾದದ್ದು.

## ತಂದೆ ಮಕ್ಕಳಲ್ಲಿ ಭಿನ್ನಾಭಿಪ್ರಾಯ

ಶಿಕ್ಷಣ ಪಡೆಯುತ್ತಿರುವ ಮಗುವಿಗೆ ಏನು ಕಲಿಯುತ್ತಿರುವೆ, ಏನು ಕಲಿತಿರುವೆ ಎಂದು ಸಹಜವಾಗಿಯೇ ಹಿರಿಯರು ಕೇಳುವುದುಂಟು. ಹಿರಣ್ಯಕಶಿಪು ತಾನು ಪಡೆದ ಉತ್ತರಕ್ಕೆ ಸಿದ್ಧತೆ ಮಾಡಿಕೊಂಡಿರಲಿಲ್ಲ. ಪ್ರಹ್ಲಾದನು ಹರಿಭಕ್ತಿಯ ಪ್ರಸಾರಕನಂತೆ ಶರಣಾಗತಿಯನ್ನು ಬೋಧಿಸುತ್ತಿದ್ದಾನೆ. ಹಿರಣ್ಯಕಶಿಪುವಿಗೆ ಮಗುವಿನ ಉತ್ತರದ ಬಗ್ಗೆ ಮೊದಲಿಗೆ ಕೋಪ ಬರಲಿಲ್ಲ, ಬದಲಾಗಿ ನಗೆ ಬಂದಿತು. ಯಾರೋ ಕುಚೇಷ್ಟೆ ಮಾಡಿರಬೇಕೆಂದುಕೊಂಡು, ಗುರುಗಳಿಗೆ ಜಾಗ್ರತೆಯಿಂದ ಪಾಠ ಹೇಳಲು ಆದೇಶ ನೀಡಿದ. ಶಂಡಾಮರ್ಕರು ಸಾವಧಾನಗಳಿಂದ ಹೇಳಿ ನೋಡಿದರು. ಹರಿಪ್ರಿಯನಾದ ಪ್ರಹ್ಲಾದನ ಮೇಲೆ ಪರಿಣಾಮವಾಗಲಿಲ್ಲ. ಉಪದೇಶ ಬಿಟ್ಟು ಉಪಾಧ್ಯಾಯರು ದಂಡಧರರಾದರು. ಗದರಿಸಿ, ಹೆದರಿಸಿ, ಪುಸಲಾಯಿಸಿ, ತಮಗೆ ತಿಳಿದ ರೀತಿಯಲ್ಲಿ ಪಾಠ ಹೇಳಿ ಪುನಃ ಸಾಮ್ರಾಟನ ಸಮ್ಮುಖಕ್ಕೆ ಕರೆದೊಯ್ದರು. ತಮ್ಮ ಶಿಕ್ಷಣವು ಸರಿಯಾದ ಹಾದಿಯಲ್ಲಿ ವೇಗವನ್ನು ಪಡೆಯುತ್ತ ನಡೆದಿದೆ ಎಂಬುದನ್ನು ರಾಜನ ಮುಂದು ಪ್ರದರ್ಶಿಸಿದರೆ ಉತ್ತಮವೆಂದು ಬಗೆದಾಗ ಅವನನ್ನು ರಾಜನ ಸಮ್ಮುಖಕ್ಕೆ ಕರೆದುಕೊಂಡು ಹೋದರು. ಸಾಮ್ರಾಟ ಹಿರಣ್ಯಕಶಿಪು ತನ್ನ ಕೈಗಳಲ್ಲಿ ಮಗನನ್ನು ಬರಸೆಳೆದುಕೊಳ್ಳುತ್ತಾ ಪ್ರೀತಿಯ ಹೊಳೆಯನ್ನು ಹರಿಸಿದನು. 'ಏನು ಕಲಿತಿರುವೆ ಹೇಳು ನೋಡೋಣ' ಎಂದನು. ಪ್ರಹ್ಲಾದನ ಪ್ರತಿಯುತ್ತರ ಕೇವಲ ಆ ಸಂದರ್ಭಕ್ಕೆ ಮಾತ್ರವೇ ಔಚಿತ್ಯಪೂರ್ಣ ಎನ್ನಿಸದೆ, ಸಾರ್ವಕಾಲಿಕವಾಗಿಯೂ ಪ್ರಸ್ತುತಿಯನ್ನು ಪಡೆಯುವಂತಹದ್ದಾಗಿದೆ. ಇದೊಂದು ಗಂಭೀರವಾದ ಶ್ರೇಷ್ಠವಾದ ಭಕ್ತಿ ವ್ಯಾಖ್ಯಾನವೆನ್ನಬೇಕು. ಆದ್ದರಿಂದಲೇ ಮೂಲವನ್ನು ನೀಡಲಾಗಿದೆ.

*ಶ್ರವಣಂ ಕೀರ್ತನಂ ವಿಷ್ಣೋಃ ಸ್ಮರಣಂ ಪಾದ ಸೇವನಂ*
*ಅರ್ಚನಂ ವಂದನಂ ದಾಸ್ಯಂ ಸಖ್ಯಮಾತ್ಮ ನಿವೇದನಮ್*
*ಇತಿ ಪುಂಸಾರ್ಪಿತಾ ವಿಷ್ಣೌ ಭಕ್ತಿಶ್ಚೇನ್ನವ ಲಕ್ಷಣಾಃ*
*ಕ್ರಿಯತೇ ಭಗವತ್ಯದ್ಧಾ ತನ್ಮನ್ಯೇಽಧೀತಮುತ್ತಮಮ್*

- (ಭಾಗವತ 7 - 5 - 23,24)

- ವಿಷ್ಣುವಿನ ಕಥೆಯನ್ನು ಕೇಳುವಿಕೆ, ಕೀರ್ತನೆಯನ್ನು ಹಾಡುವಿಕೆ, ಅವನ ಮಹಿಮೆಗಳ ಸ್ಮರಣೆ, ಅವನ ಪಾದಗಳ ಸೇವಿಸುವಿಕೆ, ಅವನ ಪೂಜೆ ಮಾಡುವಿಕೆ, ಅವನಿಗೆ ನಮಸ್ಕರಿಸುವಿಕೆ, ಅವನಿಗೆ ಆಳಾಗಿ ಕೈಂಕರ್ಯವೆಸಗುವಿಕೆ, ಅವನ ಮಿತ್ರನಾಗಿ ಹಿತ ಬಯಸುವಿಕೆ, ಕಡೆಯದಾಗಿ ಆತ್ಮವನ್ನೇ ಅವನಲ್ಲಿ ಅರ್ಪಿಸುವಿಕೆ - ಈ ಮೊದಲಾದ ನವವಿಧ ಭಕ್ತಿಯಿಂದ ಕೂಡಿದ ಶಿಕ್ಷಣವೇ ಅತಿ ಉತ್ತಮವಾದದ್ದು ಎಂದು ನಾನು ಬಗೆಯುತ್ತೇನೆ. ಸಿಡಿಲು ಬಡಿದಂತಹ ಮಾತುಗಳಾದವು ಮಗನ ಮಾತುಗಳು ತಂದೆಯ ಹರಿವಿರೋಧಿ ಮನಸ್ಸಿಗೆ.

ಹಿರಣ್ಯಕಶಿಪುವಿಗೆ ಅನುಮಾನವುಂಟಾಯಿತು, ಗುರುಪುತ್ರರಾದ ಶಂಡಾಮರ್ಕರು ಹರಿಯ ಸೇವಕರೋ ಹೇಗೆ ಎಂಬುದಾಗಿ. ಹೀಗಾಗಬಾರದು ಎಂದು ಅವರಿಗೆ ಮೊದಲೇ ತಿಳಿ ಹೇಳಿದ್ದರೂ ಮಗುವು ಹರಿಯ ಗುಣಗಾನ ಮಾಡುವಷ್ಟು ದೂರ ಹೋಗಿದೆಯಲ್ಲ. ತನಗೆ ಇಂತಹ ಹಾದಿಯಲ್ಲಿ ಹೋಗುವುದು ಹಿಡಿಸದ ವಿಷಯ ಎಂಬುದು ಅವನಿಗೆ ತಿಳಿಯದೇನು? 'ಹಿತವನ್ನು ಆಚರಿಸದ ಪುತ್ರನು ಹಗೆಯೇ ಸರಿ' ಎಂಬ ಅಭಿಪ್ರಾಯ ಖಚಿತವಾದಂತೆಲ್ಲ ಹಿರಣ್ಯಕಶಿಪುವಿಗೆ ಅವನನ್ನು ಕೊಲ್ಲುವಷ್ಟು ಕೋಪ. ಶಂಡಾಮರ್ಕರಾದರೋ ಪ್ರಹ್ಲಾದನ ಹರಿಪ್ರೀತಿ, ಗುರುಬೋಧೆಯಿಂದಾಗಲೀ, ಅವರಿವರ ಉಚಾವಣೆಯಿಂದಾಗಲೀ ಬಂದದ್ದಲ್ಲವೆಂದು ಪ್ರಮಾಣಪೂರ್ವಕವಾಗಿ ಹೇಳುತ್ತಾ ಪ್ರಹ್ಲಾದನ ಭಕ್ತಿ ಅವನಿಗೆ ಜನ್ಮಜಾತವಾದದ್ದು ಎಂದು ನುಡಿಯುವರು. ಪ್ರಹ್ಲಾದನ ಮಾತುಗಳೂ ಈ ಅಭಿಪ್ರಾಯವನ್ನೇ ಪುಷ್ಟಿಗೊಳಿಸುತ್ತದೆ. ದೈತ್ಯನಿಗೆ ಸಿಟ್ಟು ಸೀಮಾತೀತವಾಗಿ ಮಗನು ಮರಣವಡೆಯಲಿ ಎಂದು ಆಜ್ಞಾಪಿಸಿದ. ರಾಕ್ಷಸ ಸೈನಿಕರು ಪ್ರಯತ್ನಿಸಿದರು. ಪ್ರಹ್ಲಾದನ ದೇಹವನ್ನು ಹರಿತವಾದ ಅಲಗುಗಳನ್ನು ಹೊಂದಿದ ತ್ರಿಶೂಲಗಳಿಂದ ಚುಚ್ಚಿದರು. ಬರಿಗೈಗಳಿಂದ ಚಚ್ಚಿದರು. ನೀರಿನಲ್ಲಿ ಮುಳುಗಿಸಿದರು. ಬೆಟ್ಟದಿಂದ ತಳ್ಳಿದರು. ವಿಷದ ಹಾವುಗಳನ್ನು ಹರಿಯಬಿಟ್ಟು ಅವುಗಳಿಂದ ಕಚ್ಚಿಸಿದರು. ಕತ್ತಲೆಯ ಕೋಣೆಯಲ್ಲಿ ಕೂಡಿಹಾಕಿದರು. ಆನೆಗಳಿಂದ ತುಳಿಸಿದರು. ಯಾವ ಉಪಾಯದಿಂದಲೂ ಪ್ರಹ್ಲಾದನಿಗೆ ತುಸುವೂ ತೊಂದರೆ ನೀಡಲಾಗಲಿಲ್ಲ. ಹರಿನಾಮದ ಕವಚವನ್ನು ಹೊಂದಿದವನನ್ನು ಹೊರಗಣ ಶಕ್ತಿಗಳು ಏನು ತಾನೆ ಮಾಡಿಯಾವು?

ತನ್ನೆಲ್ಲ ಪ್ರಯತ್ನಗಳಿಂದಲೂ ಪ್ರಹ್ಲಾದನನ್ನು ತನ್ನ ದಾರಿಗೆ ಮರಳಿಸಿಕೊಳ್ಳಲಾಗದೆ ಅವನನ್ನು ನಿವಾರಿಸಲೂ ಆಗದೆ ಹೋದಾಗ ಹಿರಣ್ಯಕಶಿಪುವು ಚಿಂತಾಕ್ರಾಂತನಾದ. ಪ್ರಹ್ಲಾದನ ಗುರುಸ್ಥಾನದಲ್ಲಿದ್ದ ಶಂಡಾಮರ್ಕರು ಸೋಲನ್ನು ಒಪ್ಪದೆ ಮರಳಿ ಪ್ರಯತ್ನ ಮಾಡುವುದಾಗಿ ನುಡಿದರು. ಮಕ್ಕಳಲ್ಲಿನ ಗುಣ ದೋಷಗಳು ಶಾಶ್ವತವಲ್ಲವೆಂಬುದು ಅವರ ಅಭಿಪ್ರಾಯ. ಹಾಗಾಗಿ ಅವನನ್ನು ತಿದ್ದಲು ಅವಕಾಶವಿದೆ ಎಂಬ ನಂಬಿಕೆ. ಅದನ್ನೇ ಅವರು ರಾಕ್ಷಸ ರಾಜನಿಗೆ ನಿವೇದಿಸಿದರು. ಹಿರಣ್ಯನಿಗೆ ಒಂದು ಆಸರೆ ದೊರೆತಂತೆ ಆಯಿತು. ಮಗನನ್ನು ಪುನಃ ಅವರ ವಶಕ್ಕೆ ಒಪ್ಪಿಸಿದ. ವಯಸ್ಸಾದಂತೆಯೂ, ಗೃಹಸ್ಥ ಧರ್ಮವನ್ನು ತಿಳಿದಂತೆಯೂ, ರಾಜನ ಹೊಣೆಯನ್ನು ಅರಿತಂತೆಯೂ, ಪ್ರಹ್ಲಾದನ ಜೀವನದೃಷ್ಟಿ ಬದಲಾಯಿಸಬಹುದು.

ಎಂಬ ದೂರದಾಸೆ ಶಂಡಾಮರ್ಕರಿಗೆ. ಅವರು ಧರ್ಮಾರ್ಥ ಕಾಮಗಳೆಂಬ ಮೂರು ಪುರುಷಾರ್ಥಗಳನ್ನೇ ಬೋಧಿಸಿ ಆ ಮೂಲಕ ಪ್ರಹ್ಲಾದನನ್ನು ದಾರಿಗೆ ತರುವ ಯತ್ನ ಮಾಡಿದರು.

## ಪ್ರಹ್ಲಾದೋಪದೇಶ

ಮೂರನೆಯ ಬಾರಿ ಗುರುಗಳ ಬಳಿಗೆ ಶಿಕ್ಷಣಕ್ಕಾಗಿ ಬಂದಾಗ ಪ್ರಹ್ಲಾದನು ಇನ್ನೂ ಹದಿಹರೆಯದವ ಎಂದೇ ಹೇಳಬೇಕು. ಗೃಹಸ್ಥಾಶ್ರಮಿಗಳಾದ ರಾಜರು ಪಡೆಯುವ ಶಿಕ್ಷಣವನ್ನು ಪ್ರಹ್ಲಾದನಿಗೆ ನೀಡಬೇಕೆಂಬ ಉದ್ದೇಶದ ಗುರುಗಳಿಗೆ ಎದುರು ಹೇಳದೆ ಅವರ ಉಪದೇಶವನ್ನು ಕೇಳುತ್ತಿದ್ದರೂ ಪ್ರಹ್ಲಾದನಿಗೆ ಆ ವಿದ್ಯೆಯು ಅರುಚಿಯಾಯಿತು. ಆತನಿಗೆ ಪುನಃ ಮೌನವೇ ಆಶ್ರಯವಾಯಿತು. ಹಾಗೆಂದಲ್ಲಿ ಇತರ ಶಿಷ್ಯರಿಂದ, ತನ್ನ ಸಹಪಾಠಿಗಳಿಂದ ದೂರ ಆದ ಎಂದೇನಲ್ಲ. ಅವರೊಡನೆ ಸ್ನೇಹ ಸೌಹಾರ್ದಗಳಿಂದಲೇ ವರ್ತಿಸುತ್ತಿದ್ದ. ಗುರುಗಳಿಲ್ಲದಾಗ ಒಮ್ಮೆ ತನ್ನ ಬಳಿಗೆ ಅವರನ್ನೆಲ್ಲ ಕರೆದು ಕೂರಿಸಿಕೊಂಡು ಅವರಿಗೆ ಗುರುಗಳು ಎಂದೂ ಹೇಳದೆಯೇ ಇದ್ದ ಹಲವಾರು ಸತ್ಯಗಳನ್ನು ತಿಳಿಯಾದ ಮಾತಿನಲ್ಲಿ ಸರಳವಾಗಿ ಹೇಳಿದ. ಸಾರಾಂಶವಿಷ್ಟು- ಅತ್ಯಂತ ದುರ್ಲಭವಾದ ಮಾನವ ಜನ್ಮದಲ್ಲಿ ಭಗವಂತನನ್ನು ಪಡೆಯಲು ಸಾಧನೆ ನಡೆಸುವುದೇ ವಿಹಿತಕರ್ಮ. ಮಿಕ್ಕಂತೆ ಸಾಂಸಾರಿಕ ಸುಖಗಳು ದುಃಖಗಳು ಮೊದಲಾದವೆಲ್ಲವೂ ಕರ್ಮಾನುಸಾರಿಯಾಗಿ ಬಂದೇ ತೀರುತ್ತವೆಯಾಗಿ ಅವುಗಳಿಗಾಗಿ ಕಾತರರಾಗಿ ಕಾರ್ಯಕ್ರಮಗಳನ್ನು ಆಯೋಜಿಸಿ ಪ್ರಯೋಜನವಿಲ್ಲ.

*ಪುಂಸೋ ವರ್ಷ ಶತಂ ಹ್ಯಾಯುಸ್ತದರ್ಧಂ ಚಾಜಿತಾತ್ಮನಃ /*
*ನಿಷ್ಫಲಂ ಯದಸೌ ರಾತ್ರ್ಯಾಂ ಶೇತೇಽನ್ಧಂ ಪ್ರಾಪಿತಸ್ತಮಃ//*
*ಮುಗ್ಧಸ್ಯ ಬಾಲ್ಯೇ ಕೌಮಾರೇ ಕ್ರೀಡತೋ ಯಾತಿ ವಿಂಶತಿಃ/*
*ಜರಯಾಗ್ರಸ್ತದೇಹಸ್ಯ ಯಾತ್ಯಕಲ್ಪಸ್ಯ ವಿಂಶತಿಃ//*

(ಭಾಗವತ - 7- 6- 6,7 )

- ಮಾನವನ ಆಯಸ್ಸು ನೂರು ವರ್ಷವಾದರೆ ಅದರಲ್ಲಿನ ಅರ್ಧಭಾಗ ನಿದ್ದೆಯಲ್ಲಿ ಕಳೆದುಹೋಗುತ್ತದೆ. ಬಾಲ್ಯ ಕೌಮಾರ್ಯಗಳಲ್ಲಿ ಮುಗ್ಧತೆ ಹಾಗೂ ಆಟಗಳಲ್ಲಿ ಮತ್ತಿಪ್ಪತ್ತು ವರ್ಷ ಕಳೆಯುತ್ತದೆ. ದೇಹಕ್ಕೆ ಆವರಿಸುವ ವ್ಯಾಧಿ-ಮುಪ್ಪುಗಳಿಂದಾಗಿ ಮತ್ತೂ ಇಪ್ಪತ್ತು ವರ್ಷ ನಷ್ಟವಾಗಿ ಬಿಡುತ್ತದೆ. ಉಳಿದದ್ದು ಹತ್ತು ವರ್ಷಗಳೇ. ಅಲ್ಲಿಯೂ ಮಾಯಾಮೋಹದ ಸಂಸಾರ ತಾಪತ್ರಯಗಳು. ಇದರಿಂದಾಗಿ ಬೆಳಕಿರುವಾಗಲೇ ಮನೆಯನ್ನು ಚೊಕ್ಕಟ ಮಾಡಿಕೊಳ್ಳುವಂತೆ ಜೀವನವನ್ನು ಭಗವಂತನ ಹಾದಿಯಲ್ಲಿ ನಡೆಯುವಂತೆ ಮಾಡಿಕೊಳ್ಳಬೇಕು. ಈ ಸಂಸಾರವಾದರೂ ಎಂತಹುದು ಇದೊಂದು ರೀತಿಯ ಮತ್ತು ಇದ್ದ ಹಾಗೆ. ಈ ಅಮಲಿಗೆ ಸಿಕ್ಕಿದವನು ಕರ್ತವ್ಯಾಕರ್ತವ್ಯ ವಿಚಕ್ಷಣೆಯನ್ನು

ಕಳೆದುಕೊಳ್ಳುತ್ತಾನೆ. ತಾಪತ್ರಯದಿಂದ ದಹಿಸಲ್ಪಡುತ್ತಿದ್ದರೂ ಸಿಗುವ ಅಲ್ಪ ಸುಖದಿಂದಾಗಿ ವೈರಾಗ್ಯ ವಿಮುಖನಾಗುತ್ತಾನೆ. ಪರಿಹಾರ ಮಾರ್ಗವೆಂದರೆ ಪರಮಪುರುಷನಾದ ನಾರಾಯಣನನ್ನು ಶರಣು ಹೋಗುವುದು ಮಾತ್ರವೇ ಆಗಿದೆ.

ಪ್ರಹ್ಲಾದ ಬಾಲಕ ಮಾತ್ರ ಎಂಬುದನ್ನು ಓದುಗರು ಮರೆಯಬಹುದೇನೊ. ಕೇಳುತ್ತಿರುವ ದೈತ್ಯ ಬಾಲಕರು ಮರೆಯಲಿಲ್ಲ. ಅವರಿಗೆ [illegible]ಯುಂಟಾಯಿತು. ಕೇಳಿದರು ನಿನಗೆ ಈ ವಿಷಯವೆಲ್ಲ ಹೇಗೆ ತಿಳಿಯಿತು?

## ನಾರದೋಪದೇಶ

ತನಗೆ ಭಾಗವತ ಧರ್ಮದ ಬಗ್ಗೆ ತಿಳಿದು ಬಂದ ವಿವರವನ್ನು ಪ್ರಹ್ಲಾದನು ತನ್ನ ಓರಗೆಯ ದೈತ್ಯ ಬಾಲಕರಿಗೆ ತಿಳಿಸಿ [illegible] ದೈತ್ಯರಾಜ ಹಿರಣ್ಯಕಶಿಪುವು ಬ್ರಹ್ಮನನ್ನು ಕುರಿತು ತಪಸ್ಸು ಮಾಡಲು ಮಂದರ ಪರ್ವತದ ಕಡೆ ಹೊರಟಾಗ ಅವನ ಪತ್ನಿ ಕಯಾದು ಗರ್ಭಿಣಿ. ಪ್ರಹ್ಲಾದ ಗರ್ಭಸ್ಥನಾಗಿ ಬೆಳೆಯುತ್ತಿದ್ದನು. ದೇವತೆಗಳಿಗೆ ರಾಜಧಾನಿಯಲ್ಲಿ ರಾಕ್ಷಸ ರಾಜನಿಲ್ಲದುದು ಒಂದು ಸುವರ್ಣಾವಕಾಶವಾಯಿತು. ದೊಡ್ಡ ಸೈನ್ಯದೊಡನೆ ದೈತ್ಯರ ಮೇಲೆ ದಾಳಿ ಮಾಡಿ ಅವರನ್ನು ದಿಕ್ಕುಪಾಲು ಮಾಡಿದರು. ಇಂದ್ರನು ದೈತ್ಯರಾಜನ ಪತ್ನಿಯನ್ನು ಸೆರೆಹಿಡಿದು ಕರೆದೊಯ್ಯುತ್ತಿದ್ದ. ದೇವ ದ್ವೇಷಿಯಾದ ಮಗು ಹುಟ್ಟಿದ ಮೇಲೆ ಅದನ್ನು ಕೊಂದು, ಅವಳನ್ನು [illegible] ಅಪೇಕ್ಷೆ ಇಂದ್ರನಿಗೆ. ಆದರೆ ನಾರದರು ಮಾರ್ಗದಲ್ಲಿಯೇ ಅವನ ಕಲ್ಪನೆ ತಪ್ಪು ಎಂದು ತಿಳಿಸಿದರು. ಆಕೆಗೆ ಹುಟ್ಟುವ ಮಗುವು ಪರಮ ಭಾಗವತೋತ್ತಮನಾಗುವನಾದ್ದರಿಂದ ಅವನನ್ನು ಕೊಲ್ಲುವುದು ಇಂದ್ರನಿಗೆ ಅಸಾಧ್ಯವೆಂದೂ ತಿಳಿಸಿ ಆಕೆಯನ್ನು ಬಿಡುಗಡೆ ಮಾಡಲು ಹೇಳಿದರು. ಇಂದ್ರನು ಅವರ ಮಾತಿಗೆ ಬೆಲೆ ನೀಡಿ ಆಕೆಯನ್ನು ಅಲ್ಲಿಯೇ ಬಿಟ್ಟು ಹೊರಟ. ನಿರಾಶ್ರಿತಳಾದ ಆಕೆಯನ್ನು ನಾರದರು ತಮ್ಮ ಆಶ್ರಮಕ್ಕೆ ಕರೆದುಕೊಂಡು ಹೋದರು. ನಾರದಾಶ್ರಮದ ಸಾತ್ವಿಕ ವಾತಾವರಣದಲ್ಲಿ ಯಾವ ಅಂಜಿಕೆಯೂ ಇಲ್ಲದೆ [illegible] ತಾಯಿ ತವರಿನಲ್ಲಿ ಮಗಳು ನಿರ್ಯೋಚನೆಯಲ್ಲಿರುವಂತೆ, ತನ್ನ ಪತಿ ಬರುವುದನ್ನು ಕಾಯತೊಡಗಿದಳು. ಆಗ ನಾರದರು ಭಾಗವತ ಧರ್ಮದ ಒಳರಹಸ್ಯಗಳನ್ನೆಲ್ಲ ಆಕೆಗೆ ಉಪದೇಶ ಮಾಡಿದರು. ಗರ್ಭದಲ್ಲಿದ್ದ ಪ್ರಹ್ಲಾದನಿಗೆ ಅದೆಲ್ಲವೂ ಅಂಗೈಯ [illegible] ವಿವರವಾಯಿತು. ಕಯಾದುವಿಗೆ ಸ್ವಭಾವತಃ ಉಂಟಾದ ಮರೆವಿನಿಂದಾಗಿ ಉಪದೇಶದ ನೆನಪು ಆಕೆಯಲ್ಲಿ ಉಳಿಯದೆ ಹೋದರೂ ಪ್ರಹ್ಲಾದನಿಗೆ ಮಾತ್ರ ಮರೆವುಂಟಾಗಲಿಲ್ಲ. ಜೊತೆಗೇ ಮಹರ್ಷಿಯ ಅನುಗ್ರಹವೂ ಇದ್ದಿತು. ನಾರದರು ಪತಿವ್ರತಾ ಶಿರೋಮಣಿ ಕಯಾದುವಿಗೆ ಉಪದೇಶ ನೀಡುತ್ತಿದ್ದರೂ ಅವರ ಉಪದೇಶದ ಗುರಿಯೆಲ್ಲ ಪ್ರಹ್ಲಾದನ ಮೇಲೆಯೇ ಸ್ಥಿರವಾಗಿದ್ದಿತು. ಹಾಗಾಗಿ ಮಗುವಿಗೆ ಬಾಲ್ಯದಲ್ಲಿಯೇ ಭಾಗವತ ಧರ್ಮದ ವಿಷಯವೆಲ್ಲ ಕರತಲಾಮಲಕವಾಗಿ ನೆನಪಿನಲ್ಲಿ ಶಾಶ್ವತವಾಗಿ ಉಳಿಯುವಂತಾಯಿತು. ಅದನ್ನೇ ಆ ಮಗು ಸದಾ ನೆನೆಯುತ್ತ ಬೆಳೆದಿದ್ದಿತು. ಹಾಗಾಗಿ ಇಂದು ದೈತ್ಯಬಾಲಕರಿಗೆ ಉಪದೇಶಿಸುವ ಹೊತ್ತಿನಲ್ಲಿ ಎಲ್ಲ

ಗುರು ಲಘುಗಳೂ ಸಂಧಿ ವಿಸಂಧಿಗಳೂ ಸ್ವಾಭಾವಿಕವಾಗಿ ಹೊರಹೊಮ್ಮುತ್ತಿದ್ದವು. ಭಕ್ತಿಯೋಗದ ವಿಸ್ತಾರವನ್ನು ಲೋಕದ ಅಪಾರವನ್ನು ನಾರದರು ಯಾವ ರೀತಿಯಲ್ಲಿ ವಿವರಿಸಿದ್ದಾರೋ ಅದೇ ರೀತಿಯಲ್ಲಿ ಬಾಲಕ ಪ್ರಹ್ಲಾದನು ದೈತ್ಯಕುಟುಂಬದ ಮುಗ್ಧ ಮಕ್ಕಳಲ್ಲಿ ಹೊಸ ಜ್ಞಾನದ ಬೆಳಕಾಗಿ ಹರಿಸಿದನು.

## ತಂದೆ ಮಕ್ಕಳ ಘರ್ಷಣೆ

ಪ್ರಹ್ಲಾದೋಪದೇಶದಿಂದ ಆ ಮಕ್ಕಳಲ್ಲಿ ಅರಿವು ಜಾಗೃತವಾಯಿತು. ತಮ್ಮ ಗುರುಗಳೆನ್ನಿಸಿದವರು ಇಷ್ಟು ದಿನ ಹೇಳಿದ ಪಾಠಗಳಲ್ಲಿ ಹುರುಳಿಲ್ಲವೆನ್ನಿಸಿತು. ಅವರಲ್ಲಿ ಒಂದು ಗಮನಾರ್ಹವಾದ ಪರಿವರ್ತನೆ ಕಂಡುಬಂದು ಹರಿಭಕ್ತಿ ಪ್ರಕಟರೂಪದಲ್ಲಿಯೇ ತೋರಿಬರಲಾರಂಭಿಸಿತು. ಶಂಡಾಮರ್ಕರಿಗೆ ಈ ಬದಲಾವಣೆ ಭಯ ಹುಟ್ಟಿಸಿತು. ತಮ್ಮ ವೈಫಲ್ಯವನ್ನು ರಾಕ್ಷಸನು ಕ್ಷಮಿಸಲಾರನೆಂಬ ಭಾವ ಬಲವಾಯಿತು. ಹೋಗಿ ಹಿರಣ್ಯ ಕಶಿಪುವಿಗೆ ದೂರು ನೀಡಿದರು. ಮೊದಲೇ ರಾಜಸ ಪ್ರವೃತ್ತಿಯ ಹರಿದ್ವೇಷಿ. ಪೆಟ್ಟುತಿಂದ ಹಾವಿನಂತೆ ಬುಸುಗುಟ್ಟ ತೊಡಗಿದ. ಮಗ ಮಹಾಪರಾಧಿಯಾಗಿ ಕಂಡುಬಂದ. ಕುಲ ಗೇಡಿಯೂ, ರಾಜಾಜ್ಞಾ ಉಲ್ಲಂಘನಕಾರಿಯೂ ಆದ ಅವನನ್ನು ಕೊಲ್ಲುವಷ್ಟು ಕೋಪ ಉಂಟಾಯಿತು. 'ಯಾವ ಬಲದಿಂದ ನನ್ನ ಶಾಸನವನ್ನು ಮುರಿದೆ. ನಾನು ನೆನೆದಲ್ಲಿ ಕೂಡಲೇ ನಿನ್ನನ್ನು ಯಮನಿಗೆ ಕಾಣಿಕೆಯಾಗಿ ನೀಡಬಲ್ಲೆ ಎಂಬುದನ್ನು ಹೇಗೆ ಮರೆತೆ' ಎಂದು ಗರ್ಜಿಸಿದ.

ಪ್ರಹ್ಲಾದನಿಗೆ ಎಲ್ಲವನ್ನೂ ತನ್ನ ಹಾದಿಗೆ ತಿರುಗಿಸಿಕೊಳ್ಳಬಲ್ಲ ಆತ್ಮವಿಶ್ವಾಸ. ತಂದೆಗೇ ಬುದ್ಧಿಹೇಳುವಷ್ಟು ಪ್ರೌಢ. ವಯಸ್ಸಿನಲ್ಲಿ ಕಿರಿಯನಾದರೂ ಹಿರಿಯ ಸತ್ಯವನ್ನು ತಿಳಿದು ಮಾತನಾಡುತ್ತಾನೆ. ಅಲ್ಲಿಯೂ ವಿನಯವನ್ನು ಮೆರೆಯುತ್ತಾನೆ. 'ಭಗವಂತನ ಬಲವೇ ಎಲ್ಲರಿಗೂ ಬಲವನ್ನು ನೀಡುತ್ತದೆ. ನೀನು ಅಸುರಭಾವವನ್ನು ಬಿಟ್ಟು ಯೋಚಿಸು, ಎಲ್ಲ ಸರಿಯಾಗುತ್ತದೆ. ಅಪಮಾರ್ಗದಲ್ಲಿ ಓಡುವ ಮನಸ್ಸಿಗಿಂತ ಶತ್ರುವಿಲ್ಲ ಎಂಬುದನ್ನು ತಿಳಿ. ಇಂದ್ರಿಯಗಳನ್ನು ಗೆಲ್ಲದೆ ದಿಕ್ಕುಗಳನ್ನು ಗೆಲ್ಲುವ ಭ್ರಾಂತಿಯನ್ನು ಬಿಡು' ಎಂದು ಬುದ್ಧಿವಾದ ಹೇಳತೊಡಗಿದ. ಅಂತರಂಗದಲ್ಲಿಯೇ ಅರಿಷಡ್ವರ್ಗವನ್ನು ಕಟ್ಟಿಕೊಂಡು ಅದರಿಂದಲೇ ಸಾವನ್ನು ಪಡೆಯಲು ಆತುರದಿಂದ ಓಡುವವರಿಗೆ ಹೊರಗಿನ ಶತ್ರುಗಳು ಬೇರೆ ಬೇಕೆ?

ಪ್ರಹ್ಲಾದನ ಮಾತುಗಳು ಹಿರಣ್ಯಕಶಿಪುವಿನ ಅಂತರಂಗವನ್ನು ಚುಚ್ಚಿದವು. ಹಿರಣ್ಯನ ಅಹಂಕಾರದ ಎಲ್ಲೆ ಕಟ್ಟೆಯೊಡೆಯಿತು. ಅವನಿಗೆ ದೇವತೆಗಳೆಲ್ಲರ ಶಕ್ತಿಸಾಮರ್ಥ್ಯಗಳು ತನ್ನ ಒಳಗೇ ಇದ್ದ ಗರ್ವದೊಡನೆ ಬ್ರಹ್ಮಸೃಷ್ಟಿಯ ಯಾವ ಪ್ರಾಣಿಯಿಂದಲೂ ಹೆದರಿಕೆ ಯಿರಲಿಲ್ಲ. ಹಾಗಾಗಿ ತನಗಿಂತ ಬೇರೆಯಾದ ಜಗದೀಶ್ವರನು ಇರಬಲ್ಲ ಎಂಬ ಸತ್ಯವನು ಒಪ್ಪದಾದನು.

'ನಿನ್ನ ರಕ್ಷಿಸುವ ದೇವರು ಯಾರಿದ್ದಾರೆ ನೋಡಬೇಕು. ಅವನೆಲ್ಲಿದ್ದಾನೆ ಏಕೆ ಕಾಣಬರುತ್ತಿಲ್ಲ. ನಿನ್ನ ತಲೆಯನ್ನು ನನ್ನ ಖಡ್ಗದಿಂದ ತರಿದು ಬಿಡು್ತ್ತೇನೆ. ರಕ್ಷಿಸುವ ಅವನು ಎಲ್ಲಿಂದ ಬರುವನೋ ನೋಡುವೆ' ಎನ್ನುತ್ತ ಕೋಪಾವೇಶದಿಂದ ಸಿಂಹಾಸನವನ್ನು ಬಿಟ್ಟು ಇಳಿದ. ಕೈಯಲ್ಲಿ ಖಡ್ಗಹಿಡಿದು ಮುಂದೆ ಬಂದ. ಬಳಿಯಲ್ಲಿಯೇ ಇದ್ದ ಕಂಬವನ್ನು ಕೋಪದಿಂದ ಕೈಯಿಂದಲೇ ಅಪ್ಪಳಿಸಿದ.

## ನರಸಿಂಹಾವಿರ್ಭಾವ

ಹಿರಣ್ಯನು ಕಂಬವನ್ನು ಕುಟ್ಟಿದ್ದು ನೆಪಮಾತ್ರವೇ ಆಗಿದ್ದಿತು. ಆದರೂ ಬ್ರಹ್ಮಾಂಡವೇ ಒಡೆದಷ್ಟು ಘನವಾದ ಸದ್ದು ಕೇಳಿ ಬಂದಿತು. ಎಲ್ಲ ಲೋಕಗಳಲ್ಲಿಯೂ ಈ ಧ್ವನಿಯು ಕೇಳಿಬಂದಿತು. ಪ್ರಹ್ಲಾದನನ್ನು ಕತ್ತಿಯಿಂದ ಕತ್ತರಿಸಿ ಹಾಕುವ ಕ್ರೋಧೋದ್ಯಮದಲ್ಲಿದ್ದ ತುಂಬಿದ ಪಾಪದ ಕೊಡದ ಹಿರಣ್ಯಕಶಿಪುವಿಗೆ ಕ್ಷಣಕಾಲ ಪ್ರಶ್ನೆ.

*ಸತ್ಯಂ ವಿಧಾತುಂ ನಿಜಭೃತ್ಯ ಭಾಷಿತಂ*
*ವ್ಯಾಪ್ತಿಂಚ ಭೂತೇಷ್ವಖಿಲೇಷು ಚಾತ್ಮನಃ*
*ಅದೃಶ್ಯತಾತ್ಯದ್ಭುತ ರೂಪ ಮುದ್ವಹನ್*
*ಸ್ತಂಭೇ ಸಭಾಯಾಂ ನ ಮೃಗಂ ನ ಮಾನುಷಮ್*

(ಭಾಗವತ - 7 - 8 -18)

- ವಿಧಾತನ ಮಾತೂ, ತನ್ನ ಸೇವಕನಾದ ಪ್ರಹ್ಲಾದನ ಮಾತೂ ನಿಜವೆನ್ನುವಂತೆ, ಎಲ್ಲ ಭೂತಗಳಲ್ಲಿಯೂ ತಾನು ವ್ಯಾಪಿಸಿರುವೆ ಎಂದು ಹೇಳುವಂತೆ, ಮೃಗವೂ ಅಲ್ಲದ ಮನುಷ್ಯನೂ ಅಲ್ಲದ ಅತ್ಯದ್ಭುತ ರೂಪದಲ್ಲಿ ಕಾಣಿಸಿಕೊಂಡನು.

ಹಿರಣ್ಯ ಕಶಿಪುವು ಕಂಭದಲ್ಲಿ ನರಸಿಂಹನನ್ನು ಕಾಣಬೇಕಾಗಿ ಬರುವುದು ಭಾಗವತ ದಲ್ಲಿನ ವೈಶಿಷ್ಟ್ಯವಾಗಿದೆ. ಹರಿವಂಶವಾಗಲೀ, ವಿಷ್ಣುಪುರಾಣವಾಗಲೀ ಕಂಭದ ಪ್ರಸಂಗದಿಂದ ಕೂಡಿರುವುದಿಲ್ಲ. ಸಭಾಭವನದ ಕಂಭದಲ್ಲಿ ಇದ್ದಕ್ಕಿದ್ದ ಹಾಗೆ ಅತ್ಯದ್ಭುತವಾದ ರೂಪವೊಂದು ಪ್ರಕಟವಾಗುತ್ತದೆ. ಅದು ಕೇವಲ ಸಿಂಹವೆಂದು ಹೇಳುವಂತಿಲ್ಲ, ಕೇವಲ ಮನುಷ್ಯ ಎಂದೂ ಹೇಳುವಂತಿಲ್ಲ. ಈ ರೀತಿಯ ಎರಡು ರೂಪಗಳ ಸಮ್ಮಿಶ್ರದಿಂದ ಕೂಡಿದ ಪರಮಪುರುಷನು ತನ್ನ ಭಕ್ತನಾದ ಪ್ರಹ್ಲಾದನ ಮಾತುಗಳನ್ನು ನಿಜಗೊಳಿಸುವುದಕ್ಕಾಗಿ, ಬ್ರಹ್ಮದೇವನಿಂದ ದೈತ್ಯರಾಜನು ಪಡೆದಿದ್ದ ವರಗಳ ಅನುಗ್ರಹವನ್ನು ನಿಗ್ರಹಿಸುವುದಕ್ಕಾಗಿ ಸಮಸ್ತ ಭೂತಜಾಲದಲ್ಲಿ ತಾನು ನೆಲೆಸಿರುವನೆಂಬ ಈಶಾವಾಸ್ಯ ತತ್ವವನ್ನು ಪ್ರಕಟ ಗೊಳಿಸುವುದಕ್ಕಾಗಿ ಇಲ್ಲಿ ಕಂಭದಲ್ಲಿ ಪ್ರತ್ಯಕ್ಷವಾಗುತ್ತಾನೆ.

ನರಸಿಂಹ ರೂಪದ ಅಚ್ಚರಿಯ ಅಪೂರ್ವವಾದ ಪ್ರಾಣಿಯ ಜೀವದ ಬಗ್ಗೆ ದೈತ್ಯರಾಜನೂ ಅವನ ಸಭಾಸದರೂ ಪರಿವಾರದವರೂ ಸಂಭ್ರಮಾಶ್ಚರ್ಯಗಳಿಂದ ನೋಡುತ್ತ

ನಿಂತುಬಿಟ್ಟರು. ರೌದ್ರತಮವಾದ ಆ ರೂಪವು ಅಸುರ ಸಮಸ್ತರಲ್ಲಿಯೂ ಒಂದು ರೀತಿಯ ಭೀತಿಯ ವಾತಾವರಣವನ್ನುಂಟುಮಾಡಿತು. ಪ್ರಹ್ಲಾದನು ಮಾತ್ರ ಆ ರೂಪದ ತೀವ್ರತೆಗೆ ಬೆದರದೆ ಬೆಚ್ಚದೆ ನಿರ್ಮಲ ಚಿತ್ತನಾಗಿ ನಿಂತನು. ದೈತ್ಯೇಂದ್ರನಿಗೆ ಅನುಮಾನ. ತನಗಾಗಿ ಬಂದ ಮಾಯಾವಿ ಹರಿಯೇ ಈ ನರಹರಿಯಿರಬಹುದೇ ಎಂಬುದಾಗಿ. ಧೈರ್ಯದಿಂದ ಸಿಂಹಗರ್ಜನೆ ಮಾಡಿ ನರಸಿಂಹನನ್ನು ಎದುರಿಸಲುದ್ಯುಕ್ತನಾದನು.

## ಹಿರಣ್ಯ ವಧೆ

ಮಗನನ್ನು ಮುಗಿಸಲು ಕತ್ತಿ ಹಿಡಿದು ಹೊರಟಿದ್ದ ಹಿರಣ್ಯಕಶಿಪು ನರಹರಿಯ ಆವಿರ್ಭಾವ ಆದದ್ದನ್ನು ಕಂಡು ಗದೆಯನ್ನು ಹಿಡಿದು ದಾಳಿ ಮಾಡಲು ಮುನ್ನುಗ್ಗಿ ಬಂದ. ನರಸಿಂಹನ ತೇಜಸ್ಸಿನಲ್ಲಿ ಲೀನವಾಗಿ ಕಣ್ಣಿಗೆ ಕಾಣದಂತಾದ. ನರಹರಿಯನ್ನು ಗದೆಯಿಂದ ಗುದ್ದಲು ಮೇಲೆತ್ತಿದ್ದ ಗದೆಯನ್ನು ಹರಿಯು ಆ ಪ್ರಯೋಗದ ಹಸ್ತಸಹಿತ ಹಿಡಿದುಬಿಟ್ಟ. ಜಾರಿಕೊಳ್ಳಲಿಕ್ಕೆ ಬಿಡಿಸಿಕೊಳ್ಳಲಿಕ್ಕೆ ಪ್ರಯತ್ನಿಸಿದ ಅಸುರ. ಅದರಲ್ಲಿ ಸಫಲನೂ ಆದ. ಆಕಾಶದಲ್ಲಿ ಇವರಿಬ್ಬರ ಯುದ್ಧವನ್ನು ನೋಡಲು ಸಮಸ್ತ ಸೃಷ್ಟಿಯೂ ನೆರೆದಿದ್ದಿತು. ಈ ವೇಳೆಗೇ ದೇವತೆಗಳು ಸ್ವರ್ಗವನ್ನು ದೈತ್ಯನಿಗೆ ಒಪ್ಪಿಸಿ ನಿರಾಶ್ರಿತರಾಗಿದ್ದರು. ಈಗ ನರಹರಿಯ ಅವತಾರವಾದಾಗ ಅವರಿಗೆ ಪುನಃ ಸ್ವರ್ಗ ತಮ್ಮದಾಗುವ ಆಸೆ ಚಿಗುರಿದರೂ ಹರಿಯ ಹಿಡಿತದಿಂದ ಹಿರಣ್ಯನು ಬಿಡಿಸಿಕೊಂಡಾಗ ಮೇಲಿನಿಂದ ನೋಡುತ್ತಿದ್ದ ಸ್ವರ್ಗಚ್ಯುತ ದೇವತೆಗಳಲ್ಲಿ ಪುನಃ ಭಯ ಗೂಡುಕಟ್ಟತೊಡಗಿತು. ಹಿರಣ್ಯಕಶಿಪುವೂ ಸಹ ಸ್ವಾಮಿಯು ತನ್ನನ್ನು ಹಿಡಿದು ಇಟ್ಟುಕೊಳ್ಳಲಾಗದೆ ಬಿಟ್ಟು ಬಿಟ್ಟ ಅರ್ಥಾತ್ ತಾನೇ ಸ್ವಪ್ರಯತ್ನದಿಂದ ಬಿಡಿಸಿಕೊಂಡೆ ಎಂದು ಭಾವಿಸಿದ. ಖಡ್ಗ, ಢಾಲುಗಳನ್ನು ಹಿಡಿದು ರಭಸದಿಂದ ಎಡಬಲನ್ನೂ ಆಡಿಸುತ್ತ ಹರಿಯ ಮೇಲೆ ಎರಗಿದ. ಕತ್ತಿಯ ಚಕ್ರಗತಿಯ ವರಸೆಯಿಂದಾಗಿ, ಢಾಲಿನ ನಿರಂತರ ಚಲನೆಯಿಂದಾಗಿ, ಅವುಗಳ ರಕ್ಷಣಾ ಕವಚದಲ್ಲಿ ನಿಂತಂತಾಗಿ ಎದುರು ದಾಳಿಯನ್ನು ಮಾಡಲು ಅವಕಾಶವೇ ಇಲ್ಲದಂತೆ ಕಂಡುಬಂದಿತು. ಹರಿಯ ಮುಂದೆ ಎಷ್ಟು ಹೊತ್ತು ಆಟವಾಡಲಾಗುತ್ತದೆ. ನರಹರಿ ಗಟ್ಟಿಯಾಗಿ ಸಿಂಹನಾದ ಮಾಡಿದ. ಹೃದಯ ಭೇದಕವಾದ ಸದ್ದು ಉಂಟಾಗಿ ದೈತ್ಯನ ದೃಷ್ಟಿ ಮಂಕಾಯಿತು. ಚಲನೆಯಲ್ಲಿ ರಭಸ ತಪ್ಪಿತು. ನರಹರಿಯು ಇದ್ದಕ್ಕಿದ್ದಂತೆ ಮೇಲೆ ಹಾಯ್ದು ತನ್ನ ಸಿಂಹಕರಗಳಿಂದ ಅಸುರನನ್ನು ಹಿಡಿದು ಬಿಟ್ಟನು. ಮತ್ತೆ ಬಿಡಿಸಿಕೊಳ್ಳಲು ರಾಕ್ಷಸನು ದೈತ್ಯ ಪ್ರಯತ್ನ ಮಾಡಿದರೂ ಸಫಲನಾಗಲಿಲ್ಲ. ಆ ರಾಜ ಪ್ರಾಸಾದದ ಮಹಾದ್ವಾರದ ಬಳಿಗೆ ಸ್ವಾಮಿಯು ರಾಕ್ಷಸನನ್ನು ಹೊತ್ತು ಒಯ್ದನು. ಅಲ್ಲಿ ತನ್ನ ತೊಡೆಗಳ ಮೇಲೆ ಅವನನ್ನು ಮಲಗಿಸಿಕೊಂಡು ಅದುಮಿ ಹಿಡಿದು ಕೈಗಳ ಉಗುರುಗಳಿಂದಲೇ ರಾಕ್ಷಸನ ಹೊಟ್ಟೆಯನ್ನು ಬಗೆದನು. ಅಸುರನ ರಕ್ತವನ್ನು ಬೊಗಸೆಯಿಂದ ಎತ್ತಿಹಿಡಿದು ಅವನ ಕರುಳನ್ನು ಹೊರಗೆಳೆದು ಮಾಲೆಯನ್ನಾಗಿ ಮಾಡಿ ಹಾಕಿಕೊಂಡನು. ಹಿರಣ್ಯ ಕಶಿಪುವಿನ ಸೈನಿಕರು ತಮ್ಮ ಸ್ವಾಮಿಯನ್ನು ಬಿಡಿಸಿಕೊಳ್ಳಲು ನರಹರಿಯ ಮೇಲೆ ದಾಳಿ ಮಾಡಿದರಾದರೂ ಸ್ವಾಮಿಯು ಅವರನ್ನೆಲ್ಲ ಸುಲಭವಾಗಿಯೇ ನಿವಾರಿಸಿದನು.

ನರಹರಿಯು ಹಿರಣ್ಯಕಶಿಪುವಿನ ಬಗ್ಗೆ ಜಗತ್ತು ಹಿಂದೆಂದೂ ಕಾಣದ ಕೋಪವನ್ನು ಪ್ರಕಟಪಡಿಸಿದ್ದ. ಈ ಕೋಪದ ಉಸಿರಾಟದ ತೀವ್ರತೆಯಿಂದ ಸಮುದ್ರವು ಕುದಿಯತೊಡಗಿತು. ಸ್ವರ್ಗವು ನಡುಗಿತು. ನರಹರಿಯ ಪದಾಘಾತದಿಂದ ಭೂಮಿ ಕಂಪಿಸತೊಡಗಿತು. ಆತನ ತೇಜಸ್ಸಿನಲ್ಲಿ ಸೂರ್ಯಚಂದ್ರರು ಕಳೆಗುಂದಿದರು. ಹಿರಣ್ಯನ ಕರುಳಮಾಲೆ ಧರಿಸಿ ನರಹರಿಯು ಸಭಾಭವನದಲ್ಲಿದ್ದ ಸಿಂಹಾಸನದಲ್ಲಿ ಪ್ರತಿಷ್ಠಿತನಾದನು. ದೇವತೆಗಳು ಹೂಮಳೆಗರೆದರು. ಆದರೆ ಆ ಉಗ್ರನರಸಿಂಹನನ್ನು ಶಾಂತಗೊಳಿಸಿ ಮಾತನಾಡಿಸುವುದು ಅವರಿಗೆ ಆ ಕ್ಷಣ ದಲ್ಲಿ ಅಸಾಧ್ಯವೆನಿಸಿತು. ದೂರದಿಂದಲೇ ಸ್ತುತಿಸಿದರು.

## ದೇವತಾಸ್ತುತಿ

ದೈತ್ಯರಾಜನನ್ನು ಸಂಹರಿಸಿದ ನರಹರಿ ಅಲ್ಲಿಯೇ ಇದ್ದ ಸಿಂಹಾಸನದಲ್ಲಿ ಕುಳಿತು ಕೊಂಡ. ದೇವತೆಗಳಿಗೆ ಪರಮಾನಂದವಾಯಿತು. ವಿಧಿ ಶಂಕರೇಂದ್ರ ಪ್ರಮುಖರು ಭಗವಂತನ ಮುಂದೆ ಬಂದು ಭಕ್ತಿಯಿಂದ ಕೈ ಜೋಡಿಸಿ ನಿಂತರು. ಮೊದಲಿಗನಾಗಿ ಬ್ರಹ್ಮನು ಸ್ವಾಮಿಗೆ ನಮಸ್ಕರಿಸಿದ. ತರುವಾಯ ಶಿವನೂ, ಇಂದ್ರನೂ, ಯಕ್ಷ, ಗಂಧರ್ವ, ಕಿನ್ನರ, ಕಿಂಪುರುಷ, ಋಷಿಗಣ, ವಿಷ್ಣು ಪರಿಷತ್‌ನ ದಿವ್ಯಸೂರಿಗಳು ಎಲ್ಲರೂ ಸ್ವಾಮಿಯನ್ನು ಸ್ತುತಿಸಿದರು. ಇಲ್ಲಿ ಭಗವಂತನ ಸರ್ವ ಸ್ವಾಮಿತ್ವ, ಸರ್ವರಕ್ಷಕತ್ವ, ಸರ್ವಜ್ಞತೆಗಳು ವಿವರವಾಗಿವೆ. ಅವನ ಸಕಲ ಗುಣಗಳನ್ನೂ ತಮ್ಮ ತಮ್ಮ ಕೈಲಾದ ರೀತಿಯಲ್ಲಿ ಎಲ್ಲರೂ ಹಾಡಿದರು (ಇಷ್ಟು ಮಂದಿ ಸ್ತುತಿಸಿದರೂ ಆತನ ಪೂರ್ಣಗುಣಾವಳಿಯನ್ನು ಅರಿಯಲಾಗದು ಎಂಬುದನ್ನು ಮನಗಾಣಬೇಕು. ಅಥವಾ ವ್ಯಾಸರ ಮಾತಿಗೆ, ಬ್ರಹ್ಮನ ಸ್ತುತಿಗೆ, ಈಶ್ವರನ ಮನಸ್ಸಿಗೆ ಇಂದ್ರಾದಿಗಳ ಕಲ್ಪನೆಗೆ ಸಿಗದ ಆ ಪರಮಾತ್ಮನ ಕರುಣೆಯ ಅಣುವಾದರೆ ಸಾಕು ಪರಮಪದವನ್ನು ಪಡೆಯಲಿಕ್ಕೆ ಎಂದಾದ ಮೇಲೆ ಪೂರ್ಣ ಪ್ರಮಾಣದಲ್ಲಿ ಆತನನ್ನು ದರ್ಶಿಸುವ ಅರ್ಜುನನ ವಿಶ್ವರೂಪ ದರ್ಶನಾಕಾಂಕ್ಷೆ ನಮಗಾದರೂ ಏಕೆ ಬೇಕು. ಕವಿ ಹೇಳಿದಂತೆ ನಮ್ಮನ್ನು ರಕ್ಷಿಸಲು ಒಂದು ಕೀರ್ತನೆಯೇ ಸಾಕು)

ಬ್ರಹ್ಮನು ತಾನು ನಾಲ್ಕೂ ಮುಖಗಳ ಮೂಲಕ ಕಂಡುಕೊಂಡದ್ದನ್ನು ಹೀಗೆ ಹಾಡಿದ- ಸ್ವಾಮಿ ನಿನ್ನ ಅನಂತ ಶಕ್ತಿಯ ಸೀಮೆಯನ್ನು ಕಾಣಲು ಶಕ್ಯವಿಲ್ಲ. ವಿಶ್ವದ ಸೃಷ್ಟಿ, ಸ್ಥಿತಿ, ಲಯಗಳನ್ನು ಲೀಲಾ ಮಾತ್ರವೆಂದು ಪರಿಭಾವಿಸಿ ಮಾಡುತ್ತಲೇ ಇದ್ದರೂ ಅವುಗಳ ಬಂಧನವಿಲ್ಲದವನಾದ ನಿನಗೆ ನಮಸ್ಕಾರ. ಈಶ್ವರ ಸ್ವಾಮಿಯನ್ನು ಪ್ರಸ್ತುತಕ್ಕೆ ಬರಲು ಸ್ವಾಗತಿಸುತ್ತಾನೆ. - 'ಪ್ರಳಯಕಾಲದಲ್ಲಿ ತೋರಿಸಬೇಕಾದ ಕೋಪವನ್ನು ಈಗ ದೈತ್ಯನಲ್ಲಿ ತೋರಿಸಿ ಅವನನ್ನು ಸಂಹರಿಸಿದ್ದಾಯಿತು. ಈಗ ಪ್ರಹ್ಲಾದನ ಮೇಲೆ ಕರುಣೆಯನ್ನು ತೋರಿಸಬೇಕಾದ ಕಾಲ. ಆದ್ದರಿಂದ ಕೋಪವನ್ನು ಬಿಟ್ಟು ಶಾಂತನಾಗು' ಸಿದ್ಧರು, ವಿದ್ಯಾ ಧರರು, ಮನುಗಳು ಎಲ್ಲರೂ ಸ್ವಾಮಿಯನ್ನು ಸ್ತುತಿಸಿದರು. ಅವರೆಲ್ಲರ ಸ್ತೋತ್ರದ ತಾತ್ಪರ್ಯ ಒಂದೇ. ರಾಕ್ಷಸನು ಹಿಂಸೆ ನೀಡುತ್ತಿದ್ದ. ಅವನಿಗೆ ಎದುರೇ ಇಲ್ಲದೆ ಲೋಕ ವೆಲ್ಲ ತಳಮಳಗೊಂಡು ಅಪಾರವಾದ ದುಃಖವನ್ನು ಅನುಭವಿಸುತ್ತಿದ್ದಿತು. ಅದನ್ನು

ಪ್ರಭುವು ರಾಕ್ಷಸ ಹನನದ ಮೂಲಕ ತಪ್ಪಿಸಿ ಲೋಕಕ್ಕೆ ಶಾಂತಿಯನ್ನು ತಂದುಕೊಟ್ಟ. ಸಾಧು ಹೃದಯ ತೃಪ್ತಿಯಿಂದ ತಮ್ಮ ಸಾತ್ವಿಕವಾದ ಸಾಧನಾ ಮಾರ್ಗದಲ್ಲಿ ಸಾಗಿ ಬರಲು ಹಿರಿದಾದ ಅನುಕೂಲವು ಹರಿಯಿಂದ ಆಯಿತು. ವಿಷ್ಣು ಪರಿಷತ್ತಿನ ಮಂದಿಗೆ ಜಯ-ವಿಜಯರ ಕಥೆ ತಿಳಿದಿದ್ದಿತಾಗಿ ಅವರು ಹೇಳಿದರು-'ಈ ದೈತ್ಯನು ನಿನ್ನ ಆಜ್ಞೆಯನು ಸಾರವಾಗಿ ನಡೆಯುವ ಆಳು. ಸನಕಾದಿಗಳ ಶಾಪದಿಂದ ವಿಪರೀತ ಚರ್ಯೆಗಳಲ್ಲಿ ತೊಡಗುವಂತಾಗಿದ್ದಿತು. ಅವನ ಒಳಿತಿಗಾಗಿಯೇ ನೀನು ಅವನನ್ನು ಸಂಹರಿಸಿದೆ. ಈ ಮೂಲಕವಾಗಿ ಸುಖಶಾಂತಿ ಪ್ರದಾತವಾದಂತಹ ನಿನ್ನ ನರಸಿಂಹರೂಪವನ್ನು ನಾವು ನೋಡುವಂತೆ ಆಯಿತು.'

## ಪ್ರಹ್ಲಾದಸ್ತುತಿ

ಬ್ರಹ್ಮಾದಿಗಳ ಸ್ತುತಿಯಿಂದಲೂ, ಪಾರ್ಷದರ ಉಪಸ್ಥಿತಿಯಲ್ಲಿಯೂ ಹರಿಯ ಕ್ರೋಧ ಹಿಂಗಲಿಲ್ಲ. ಲಕ್ಷ್ಮೀದೇವಿಯೇ ಅಲ್ಲಿಗೆ ಬಂದಳು. ಆಕೆಗೂ ಈ ಉಗ್ರರೂಪದ ಪರಿಚಯವಿರಲಿಲ್ಲ. ಹಾಗಾಗಿ ಈ ಹರಿಯ ಉಗ್ರತೆಯನ್ನು ಶಮನಗೊಳಿಸುವ ಉಪಾಯ ಹೊಳೆಯಲಿಲ್ಲ. ಬ್ರಹ್ಮನು ಪ್ರಹ್ಲಾದನಿಗೆ ಈ ಗುರುತರವಾದ ಹೊಣೆಯನ್ನು ಒಪ್ಪಿಸಿದ. ಬಾಲಕನು ಸ್ವಾಮಿಯ ಎದುರಿಗೆ ಬಂದು ಸಾಷ್ಟಾಂಗ ನಮಸ್ಕಾರ ಮಾಡಿದ. ಭಾಗವತ ಶಿರೋಮಣಿಯಾದ ಪ್ರಹ್ಲಾದನನ್ನು ಕಂಡ ಕೂಡಲೇ ಭಗವಂತನ ಕೋಪದ ಮುಖವಾಡ ಕೆಳಗಿಳಿಯಿತು. ಅನುಗ್ರಹ ಹಸ್ತವನ್ನು ಪ್ರಹ್ಲಾದನ ತಲೆಯ ಮೇಲಿಟ್ಟನು. ಪ್ರಹ್ಲಾದ ಮೊದಲೇ ಪರಿಶುದ್ಧನಾಗಿದ್ದವನು. ಈಗ ಭಗವತ್ ಸ್ಪರ್ಶದಿಂದ ಅಳಿದುಳಿದ ಕಾಳಿಕೆಯೂ ಕಳೆಯಿತು. ಅಪ್ಪಟ ಬಂಗಾರವಾದ.

ಭಗವಂತನನ್ನು ಸ್ತುತಿಸ ತೊಡಗಿದ- 'ಪರಮ ಸಾತ್ವಿಕರಾದ ಬ್ರಹ್ಮಶಂಕರ ಇಂದ್ರರೂ, ಋಷಿ ಮುನಿ ಸಂತರೂ ಸ್ತುತಿಸಿಯೂ ಸಾಧ್ಯವಾಗದ ಹರಿಯನ್ನು ನನ್ನಂತಹ ಅಸುರ ಕುಲದವ ಸ್ತುತಿಸಲು ಸಾಧ್ಯವೇ? ಆದರೂ ಭಕ್ತಿಯಿಂದ ಮಾತ್ರ ಆತ ತೃಪ್ತನಾಗುವನೆಂದು ಹೇಳಲಾಗಿರುವುದರಿಂದ ಅದರಿಂದಲೇ ನಾನು ಸ್ತುತಿಸುತ್ತೇನೆ. ನನಗೆ ಅಧಿಕಾರವಿಲ್ಲ ಅರ್ಹತೆಯೂ ಇಲ್ಲವಾದರೂ ನನ್ನ ಬುದ್ಧಿಗೆ ತೋಚಿದಂತೆ ಹೇಳುತ್ತೇನೆ' - ಹೀಗೆಂದು ಜೀವನ ಪರಿಮಿತಿಗಳನ್ನು ತಿಳಿಸಿದ ಪ್ರಹ್ಲಾದನು ಪರಮಾತ್ಮನ ನಿಸ್ಸೀಮತೆಯನ್ನು ಮಾತಿನ ಮೂಲಕ ಕಂಡುಕೊಳ್ಳಲು ಪ್ರಯತ್ನಿಸುವುದು ಇಲ್ಲಿ -ಪ್ರಹ್ಲಾದ ಸ್ತುತಿಯ ಸಂದರ್ಭದಲ್ಲಿ ಕಂಡುಬರುತ್ತದೆ. 'ನೀನು ನಮ್ಮನ್ನು ಅನುಗ್ರಹಿಸುವುದಕ್ಕಾಗಿಯೇ ವಿವಿಧಾವತಾರಗಳನ್ನು ತಳೆಯುವೆ. ಅಂತಹವುಗಳಲ್ಲಿ ಈಗಿನ ನರಸಿಂಹಾವತಾರವೂ ಒಂದು. ರಾಕ್ಷಸ ಹತ್ಯೆಗೆಂದು ಈ ವೇಷವನ್ನು, ಅವತಾರವನ್ನು, ಕೋಪವನ್ನು ಧರಿಸಿದ್ದೆಯಷ್ಟೆ. ಈಗ ಆ ಕೆಲಸ ಮುಗಿದಿದೆ. ನಿನ್ನ ಈ ರೂಪದಿಂದಾಗಿ ಭಕ್ತರು ಭಯಮುಕ್ತರಾಗುತ್ತಾರೆ. ಈ ಕೋಪಕ್ಕೆ ಈಗ ಪ್ರಯೋಜನವಿಲ್ಲ. ನಿನ್ನ ಶಾಂತ ರೂಪವನ್ನು ನೋಡಲು ಜನ ಬಯಸುವರಾದ್ದರಿಂದ ಶಾಂತನಾಗು ಸ್ವಾಮಿ' ಎಂದು ಬೇಡುತ್ತಾನೆ.

ಪ್ರಹ್ಲಾದ ಸ್ವಾಮಿಯನ್ನು ಶಾಂತನಾಗು ಎನ್ನುತ್ತಿದ್ದಾನೆ. ಆವನ ರೂಪವನ್ನು - ಅದು ಭಯಂಕರವೆಂದು ವರ್ಣಿತವಾಗಿದ್ದರೂ ಬದಲಾಯಿಸು ಎಂದು ಹೇಳುತ್ತಿಲ್ಲ. ಆ ಭಯಂಕರ ರೂಪದಿಂದ ಅವನಿಗೆ ಹೆದರಿಕೆಯಿಲ್ಲವಂತೆ. ಅಸಹ್ಯವೂ ಅಸಾರವೂ ಆದ ಸಂಸಾರ ಬಂಧನಕ್ಕೆ ಹೆದರುತ್ತೇನೆ. ಅದನ್ನು ನೀನೇ ಬಿಡಿಸಬೇಕು ಎನ್ನುತ್ತಾನೆ. 'ನಿನ್ನ ಸೇವಕರ ಸನ್ನಿಧಿಯಲ್ಲಿ ನನ್ನನ್ನು ಇರಿಸಿದರೆ ಅದೇ ನನಗೆ ಪರಮನಿಧಿ. ನಮ್ಮ ತಂದೆಯು ಅನ್ಯದೈವವಿದ್ದಲ್ಲಿ ನಿನ್ನನ್ನು ಕಾಪಾಡಲಿ. ನಾನು ನಿನ್ನ ತಲೆಯನ್ನು ತೆಗೆಯುವೆನೆಂದಾಗ ನೀನು ಆತನನ್ನು ಸಂಹರಿಸಿ ನನ್ನನ್ನು ಕಾಪಾಡಿದೆಯಾದರೂ ಸನಕಾದಿ ಸಂತ ಸತ್ಪುರುಷರ ಮಾತುಗಳನ್ನು ಈಡೇರಿಸಲೆಂದೇ ಅವನನ್ನು ಸಂಹರಿಸಿದೆಯೆಂದು ಬಗೆಯಬಹುದು.' ಹೀಗೆಂದು ಸ್ತುತಿಯನ್ನು ಮಾಡುವ ಪ್ರಹ್ಲಾದನ ಮಾತುಗಳಲ್ಲಿದ್ದ ನಿತ್ಯಸತ್ಯವು ಎಲ್ಲರಿಗೂ ಬುದ್ಧಿಸತ್ಯಗಳಾಗಿ ತಿಳಿಯುವಂತಹವೇ. ಪ್ರಹ್ಲಾದನ ಈ ಪ್ರಶಾಂತವಾದ ಮಾತುಗಳಿಂದಾಗಿ ಕ್ರೋಧಗೊಂಡಿದ್ದ ನರಹರಿಯು ಪ್ರಶಾಂತನಾದನು. ಪ್ರಹ್ಲಾದನನ್ನು ಕುರಿತು ಪ್ರೇಮದಿಂದ ಮಾತನಾಡಿದನು.

## ರಾಜ್ಯಾಭಿಷೇಕ

ಪ್ರಹ್ಲಾದನ ಮಾತುಗಳಿಂದ ಪ್ರಸನ್ನನಾದ ನರಹರಿಯು, ಬೇಕಾದ ವರಗಳನ್ನು ಬೇಡು ನೀಡಲು ನಾನು ಸಿದ್ಧನಾಗಿದ್ದೇನೆ ಎಂದು ಹೇಳಿದರೂ ಪ್ರಹ್ಲಾದನು ಭಗವದನುಗ್ರಹದ ಹೊರತು ಮಿಕ್ಕ ಲೌಕಿಕವಾದ ವರವ್ಯಾವುದನ್ನೂ ಬೇಡಲಿಲ್ಲ. ಅವನ ಯೋಚನಾ ಲಹರಿ ಬೇರೆ ದಿಕ್ಕಿನಲ್ಲಿ ಹರಿದಿದ್ದಿತು. ಭಗವಂತನು ತನ್ನ ಸೇವಕನಲ್ಲಿ ಸೇವಾ ಮನೋಭಾವ ಇದೆಯೊ ಇಲ್ಲವೊ ಎಂಬುದನ್ನು ಪರೀಕ್ಷೆ ಮಾಡುತ್ತಿರುವನೆಂದು ಭಾವಿಸಿದನು. ಯಾವನೇ ಸೇವಕನೂ ವರಗಳನ್ನು ಕೊಡು ಎಂದು ಬೇಡಿದರೆ ಅವನು ಸೇವಕನಾಗಲಾರ, ವ್ಯವಹಾರ ಮಾಡುವವನಾಗುತ್ತಾನೆ. ಸೇವಕನ ಅಪೇಕ್ಷೆಗಳನ್ನು ಈಡೇರಿಸಿ ತನ್ನ ಕೆಲಸಗಳನ್ನು ನಡೆಸಿ ಕೊಳ್ಳುವವನೂ ಪ್ರಭುವೂ ಆಗಲಾರ. ಕಾರಣ ಸ್ವಾಮಿಗೆ ಯಾವ ಸೇವಕನಿಂದಲೂ ಆಗ ಬೇಕಾದ್ದು ಏನೂ ಇಲ್ಲ. ಹಾಗಾಗಿ ಭಕ್ತ ಭಗವಂತರ ನಡುವಿನ ಸಂಬಂಧ ರಾಜ ಭಂಟರ ನಡುವಿನ ಸಂಬಂಧದಂತೆ ಅಲ್ಲ ಎಂದು ಹೇಳುತ್ತ-ವರವನ್ನು ಕೊಡುವುದೇ ಆದರೆ ನನ್ನ ಹೃದಯದಲ್ಲಿ ಯಾವುದೇ ಅಪೇಕ್ಷೆಯೂ ಹುಟ್ಟದಿರುವಂತೆ ವರವನ್ನು ಕೊಡು ಎಂದು ಕೇಳುತ್ತಾನೆ. ನರಸಿಂಹನು ಪರಮ ಅನುಗ್ರಹದಿಂದ ಅವನಿಗೆ ಒಂದು ಮನ್ವಂತರ ಕಾಲದ ದೈತ್ಯ ಸಾಮ್ರಾಟ ಭೋಗವನ್ನು ಅನುಗ್ರಹಿಸಿ ಅವನ ತಂದೆಯ ಪಾಪವು ಹರಿಯಿತು ಎಂದು ಆಶ್ವಾಸನೆಯನ್ನು ನೀಡಿ, ಬ್ರಹ್ಮನಿಗೆ ಒಳ್ಳೆಯ ಮಾತುಗಳನ್ನು ಹೇಳಿ ಸರ್ವರಿಂದ ಪೂಜೆಯನ್ನು ಸ್ವೀಕರಿಸಿ ಅಂತರ್ಧಾನನಾದನು.

ಬ್ರಹ್ಮನು ಶುಕ್ರಾಚಾರ್ಯನನ್ನು ಮುಂದಿಟ್ಟುಕೊಂಡು ಪ್ರಹ್ಲಾದನಿಗೆ ದೈತ್ಯ ಸಾಮ್ರಾಜ್ಯದ ಪಟ್ಟಾಭಿಷೇಕ ಮಾಡಿದರು. ಅವನ ಪೂಜೆಯನ್ನು ಸ್ವೀಕರಿಸಿ ಸಕಲ ದೇವತೆಗಳೂ ತಮ್ಮ ತಮ್ಮ ಲೋಕಗಳನ್ನು ಸೇರಿದರು.

ಜಯ ವಿಜಯರು ಮುಂದೆ ತ್ರೇತಾಯುಗದಲ್ಲಿ ರಾವಣ-ಕುಂಭಕರ್ಣರಾಗಿ ರಾಮಚಂದ್ರನಿಂದ ಹತರಾಗಿ ದ್ವಾಪರ ಯುಗದಲ್ಲಿ ದಂತವಕ್ರ-ಶಿಶುಪಾಲರಾಗಿ ಜನಿಸಿ ಶ್ರೀಕೃಷ್ಣನಿಂದ ಹತರಾಗಿ ಪರಮಪದವನ್ನು ಸೇರಿದರು.

## ವರಗಳ ವೈಶಿಷ್ಟ್ಯ

ಹಿರಣ್ಯಕಶಿಪು ಬ್ರಹ್ಮನನ್ನು ಕುರಿತು ತಪಸ್ಸು ಮಾಡಿ ಪ್ರಸನ್ನನಾಗಿ ಪ್ರತ್ಯಕ್ಷನಾದ ಆತನನ್ನು ಸ್ತುತಿಸಿ ವರಗಳನ್ನು ಪಡೆಯುವಾಗ ತನ್ನ ಮುಂದಿನ ಜೀವನಗತಿಯನ್ನು ತನಗೆ ತೋಚಿದಂತೆ ಖಚಿತವಾಗಿ ಅಡೆ-ತಡೆಗಳಿಲ್ಲದಂತೆ ನಡೆಯಬೇಕೆಂಬ ಯೋಜನೆಯಲ್ಲಿ ವರಗಳ ರೂಪಕಲ್ಪನೆ ಮಾಡುತ್ತಾನೆ. ತಾನು ಅಜೇಯನಾಗಬೇಕು. ತನಗೆ ಎದುರು ಯಾರೂ ಇರಬಾರದು. ಎಲ್ಲರಿಂದಲೂ ತಾನು ಪೂಜೆ ಗೌರವ ಮರ್ಯಾದೆಗಳನ್ನು ಪಡೆಯಬೇಕು ಎಂಬುದರಿಂದಾಗಿ ಸಮಸ್ತ ದೇವತೆಗಳ ಶಕ್ತಿ ಸಾಮರ್ಥ್ಯಗಳೂ ತನ್ನಲ್ಲಿ ಸಮಾವಿಷ್ಟಗೊಳ್ಳಬೇಕು ಎಂದು ಕೇಳಿದ. ಹಾಗಾಗಿಯೇ ಅವನಿಗೆ ಇಂದ್ರ, ವರುಣ, ಅಗ್ನಿ, ವಾಯು, ಕುಬೇರ, ಯಮ, ಅಶ್ವಿನಿ ದೇವತೆಗಳೇ ಮೊದಲಾದವರ ಶಕ್ತಿಸಾಮರ್ಥ್ಯಗಳು ಸಂಕ್ರಮಿತವಾದವು. ಮೊದಲೇ ರಾಕ್ಷಸ, ಮೇಲೆ ಕಪಿಗೆ ಸಿಕ್ಕ ಹೆಂಡದಂತೆ ದೇವತೆಗಳ ವಿವಿಧ ಶಕ್ತಿಗಳು ಸೇರಿ ಬಂದ ಮೇಲೆ ಅವನ ಅಹಂಕಾರ ಅದ್ವಿತೀಯವಾಯಿತು. ಯಜ್ಞ ಗಳು ತನಗೇ ಎಂದು ಶಾಸನ ಮಾಡಿದ. ತನ್ನದೇ ಪೂಜೆಯಾಗಬೇಕು ಎಂದ ತನಗೆ ಎದುರು ಇನ್ನೊಬ್ಬ ದೇವರಿರುವುದು ಅವನಿಗೆ ಇಷ್ಟವಾಗಲಿಲ್ಲ. ಇಂತಹ ಒಂದು ಪರಿಸ್ಥಿತಿ ಯಲ್ಲಿ ಅನಾಚಾರ, ದುರಾಚಾರ, ಅತ್ಯಾಚಾರಗಳು ನಡೆಯದಿರಲು ಸಾಧ್ಯವೇ ಇಲ್ಲ. ಇಲ್ಲಿಯೂ ಅದೇ ಆಯಿತು.

ಹಿರಣ್ಯಕಶಿಪುವಿನ ದುರಾಗತಗಳಿಗೆ ಕೊನೆಯಿಲ್ಲವಾಯಿತು. ಎಲ್ಲಿ ನೋಡಿದರೂ ಹಾಹಾಕಾರ. ಆಡಳಿತ, ಶಿಕ್ಷಣ, ರಕ್ಷಣ ಎಲ್ಲ ವಿಭಾಗಗಳಲ್ಲಿಯೂ ಹಿರಣ್ಯಕಶಿಪುವಿನ ರಾಕ್ಷಸ ಛಾಪು ಎದ್ದು ಕಾಣುವಂತೆ ಆಯಿತು. ದೇವತೆಗಳು ರಾಜ್ಯ ಭ್ರಷ್ಟರಾದರು. ಯಕ್ಷ, ಗಂಧರ್ವ, ಕಿನ್ನರರು ನಿರಾಶ್ರಿತರಾದರು.

ಉಲ್ಲೋಲ ಕಲ್ಲೋಲ ಉತ್ಪಾತಗಳು ನಿತ್ಯಸುದ್ದಿ ಆದಾಗ ದೇವತೆಗಳು ಸ್ವಾಮಿಯಲ್ಲಿ ಮೊರೆಯಿಟ್ಟರು-ತಾನು ಮಧ್ಯೆ ಪ್ರವೇಶಿಸುವ ಕಾಲ ಆಸನ್ನವಾಗಿದೆ ಎಂದು ಅನ್ನಿಸಿತು. ದೇವತೆಗಳಿಗೆ ಅಭಯ ಪ್ರದಾನ ಮಾಡಿದ. ದೇವತೆಗಳು ಧರ್ಮ, ವೇದಗಳಿಗೆ ಅಪಕಾರ ಮಾಡುವವರ ಅವಸಾನವಾಗುತ್ತದೆಯೆಂದೂ ಭಾಗವತರ ಅಪಚಾರದಿಂದ ಅನಿಷ್ಟ ಕಟ್ಟಿಟ್ಟದ್ದೆಂದೂ ಹೇಳುತ್ತ ಯಾವಾಗ ಪ್ರಹ್ಲಾದನಿಗೆ ಕಷ್ಟ ನೀಡುವನೋ ಆಗ ನಾನು ಅವನೆಷ್ಟೇ ವರಸಂಪನ್ನನಾಗಿದ್ದರೂ ಅವನನ್ನು ನಿವಾರಿಸುವೆ ಎಂದು ಮೊದಲಿಗೇ ಹೇಳಿದಂತೆ ಪ್ರಹ್ಲಾದನನ್ನು ಹಿಂಸಿಸುವ ಹೊತ್ತಿನಲ್ಲಿ ಸರಿಯಾಗಿ ನರಸಿಂಹ ರೂಪಿಯಾಗಿ ಕಂಭದಿಂದ ಹೊರಬಂದನು.

ನರಸಿಂಹಾವತಾರದ ಬಗ್ಗೆಯೂ ಈ ವರ ಪ್ರಭಾವವನ್ನು ಗುರುತಿಸಬಹುದು. ಬ್ರಹ್ಮನಲ್ಲಿ ತನ್ನ ಮರಣದ ನಿವಾರಣೆಯ ವಿವರವನ್ನು ಬೇಡುವಾಗ ಅವನು ನೀಡುವ ಕಲಮುಗಳನ್ನು ಕಂಡರೆ ಅಚ್ಚರಿಯಾಗುತ್ತದೆ. ಯಾವ ಪ್ರಾಣಿಯಾಗಲೀ, ಮಾನವ ದೇವತೆ, ದೈತ್ಯ ನಾಗರ-ಯಾರೇ ಆಗಲೀ ಅವನನ್ನು ಕೊಲ್ಲಲಾಗಬಾರದು. ಭೂಮಿ-ಆಕಾಶ ಹೊರಗೆ-ಒಳಗೆ ಎಲ್ಲೂ ಸಾವು ಬರಬಾರದು. ಹಗಲು-ರಾತ್ರಿ, ಅಸ್ತ್ರ-ಶಸ್ತ್ರ ಯಾವುದರಿಂದಲೂ ಸಾವು ಬರಬಾರದು. ಈ ಮಾತುಗಳ ತಾತ್ಪರ್ಯವಿಷ್ಟೆ 'ನರಸಿಂಹಾವತಾರ'.

ಸಂಧ್ಯಾಕಾಲದ ಹೊಸಿಲ ಮೇಲಿನ ಸಾವು ನರಸಿಂಹ ನಖಗಳಿಂದ. ಕಂಭದಿಂದ ಹೊರಬಂದ ರೂಪ ಮನುಷ್ಯನಂತೆಯೇ ಇದ್ದರೂ ಮನುಷ್ಯ ಆಗಿರಲಿಲ್ಲ. ಸಿಂಹದಂತೆ ಇದ್ದರೂ ಸಿಂಹವಾಗಿರಲಿಲ್ಲ. ಎರಡರ ಮಧ್ಯದ ಒಂದು ರೂಪ, ಒಂದು ಮಿಶ್ರರೂಪ. ಸಿಂಹದ ತಲೆ ಮನುಷ್ಯದೇಹ. ಹಿಂದೆ ಎಂದೂ ಯಾರೂ ಕಾಣದ ರೂಪ. ಹಿರಣ್ಯಕಶಿಪುವಿನ ವರದ ವ್ಯಾಪ್ತಿಯ ಹೊರಗಿನ ರೂಪ. ಇಂತಹ ನರಹರಿಯು ದೈತ್ಯನನ್ನು ಸೆಳೆದುಕೊಂಡು ಸಭಾಂಗಣದ ಮಹಾದ್ವಾರದಲ್ಲಿ ಬಂದು ಅಲ್ಲಿ ನಿಂತು ತನ್ನ ತೊಡೆಯ ಮೇಲೆ ಹಾಕಿ ಕೊಂಡು ಹೊಟ್ಟೆಯನ್ನು ತನ್ನ ಉಗುರುಗಳಿಂದಲೇ ಬಗೆದ. ಸ್ವಾಮಿಯು ಉಗುರನ್ನೇ ಆಯುಧವನ್ನಾಗಿ ಬಳಸಿದ್ದಾನೆ. ಅದು ಹಗಲು-ರಾತ್ರಿಗಳಲ್ಲದ ಸಂಧ್ಯಾಕಾಲವಾಗಿದ್ದಿತು. ಒಳ-ಹೊರಗಲ್ಲದ ಹೊಸಲಾಗಿದ್ದಿತು. ವರಗಳ ವಿವರಣೆಗೆ ಒಪ್ಪುವಂತಹ ಮರಣ. ಹಿರಣ್ಯಕಶಿಪುವಿನ ಕಲ್ಪನೆಯ ಸೀಮೆಗಳಿಗಿಂತ ಆಚೆ ನಿಂತ ಹರಿಯು ನರಹರಿಯಾಗಿ ಬರಬಹುದೆಂದು ಊಹಿಸಲೂ ಸಾಧ್ಯವಿಲ್ಲವಾಯಿತು. ಇದ್ದ ಆಯುಧಗಳ ನೆರವಿನಿಂದ ಇದ್ದ ಶಕ್ತಿಯನ್ನು ಮಾತ್ರವೇ ಬಳಸಿ ಯುದ್ಧಮಾಡಿದ.

ಹಿರಣ್ಯಕಶಿಪುವನ್ನು ಸಂಕಲ್ಪ ಮಾತ್ರದಿಂದಲೇ ಸೀಳಿಹಾಕಬಹುದಾಗಿದ್ದರೂ ನರಹರಿ ಯಾಗಿ ಕಂಡು ಬಂದದ್ದು ಲೋಕಕ್ಕೆ ಒಂದು ಉದಾಹರಣೆ ಕೊಡಲೆಂದಷ್ಟೆ. ಹೊಟ್ಟೆಯನ್ನು ಬಗೆದು ಕರುಳಹಾರವನ್ನು ಹಾಕಿಕೊಂಡದ್ದು ಭಾಗವತರಿಗೆ ಕಷ್ಟಕೊಡುವ ಮಂದಿ, ಪಡೆಯ ಬಹುದಾದ ಶಿಕ್ಷೆ ಸೂಚಿಸುವುದಷ್ಟೆ. ಇಲ್ಲಿ ಇನ್ನೊಂದು ಅಂಶವಿದೆ. ನರಸಿಂಹನ ರೂಪ ದಂತೆಯೇ ಕೋಪವೂ ಅಪೂರ್ವವೆಂಬುದು. ಆತನಿಗೆ ಕೋಪವೆಂದರೇನು. ಸತ್ವಮಾತ್ರನಾದ ವನು ಆತ. ರೂಪದಂತೆಯೇ ಅದೂ ಆ ಕ್ಷಣಕ್ಕಾಗಿ ಆರೋಪಿಸಿಕೊಂಡದ್ದು ಎನ್ನಿಸಬಹುದು.

## ಒಟ್ಟು ನೋಟ

ಭಾಗವತ ಪುರಾಣದ ನರಸಿಂಹಾವತಾರ ವರ್ಣನೆ ಹರಿಯ ಅವತಾರಗಳಲ್ಲಿ ಒಂದನ್ನು ವಿವರಿಸುವುದಾಗಿದೆ. ಇಲ್ಲಿ ಹರಿಭಕ್ತಿಯ ಧರ್ಮದ ವಿವರಣೆಯೂ ಇದೆ. ಇದರಿಂದಾಗಿ ಎರಡು ವಿಧದಲ್ಲಿ ಕಥೆ ಸಾರ್ಥಕ ಪಡೆದಿದೆ. ಹರಿಯು ನರಹರಿಯಾಗಲು ಕಾರ್ಯಕಾರಣಗಳ ಯುಕ್ತ ವಿವೇಚನೆ ಆಗುವುದರೊಡನೆ ಧರ್ಮದ ವಿಚಾರವೂ ಹೆಚ್ಚು ಹೆಚ್ಚು ಖಚಿತವಾಗುತ್ತ ಹೋಗಿದೆ. ಹಿರಣ್ಯ ಕಶಿಪುವಿನ ವರಗಳನ್ನು ವಿವರಿಸಿ ಅವತಾರದ ರೂಪ ನಿರ್ದೇಶನವೂ ಆಗುವಂತೆ ಮಾಡಲಾಗಿದೆ.



## ಅಧ್ಯಾಯ - 3

# ವಿಷ್ಣು ಪುರಾಣ

*ವೇದೇಷು ಪೌರುಷಸೂಕ್ತಂ ಧರ್ಮಶಾಸ್ತ್ರೇಷು ಮಾನಸಂ /*
*ಭಾರತೇ ಭಗವದ್ಗೀತಾ ಪುರಾಣೇಷು ಚ ವೈಷ್ಣವಂ //*

- ವೇದಗಳಲ್ಲಿ ಪುರುಷಸೂಕ್ತವಿದ್ದಂತೆ, ಧರ್ಮಶಾಸ್ತ್ರಗಳಲ್ಲಿ ಮನುಧರ್ಮ ಶಾಸ್ತ್ರವಿದ್ದಂತೆ, ಮಹಾಭಾರತದಲ್ಲಿ ಭಗವದ್ಗೀತೆಯಿದ್ದಂತೆ, ಪುರಾಣಗಳಲ್ಲಿ ವಿಷ್ಣುಪುರಾಣವು ಪ್ರಧಾನವಾದ ಸ್ಥಾನವನ್ನು ಪಡೆದಿದೆಯೆಂಬ ಅರ್ಥವಿರುವ ಈ ಉಕ್ತಿಯು ಪುರಾಣದ ಹಿರಿಮೆಗೆ ನಿದರ್ಶನವಾಗಿದೆ.

ಧರ್ಮ, ದರ್ಶನ, ಲೋಕನೀತಿಗಳನ್ನು ಗುರಿಯಾಗಿ ಹೊಂದಿದ ಪುರಾಣಗಳು ಪ್ರಧಾನವಾಗಿ ಹದಿನೆಂಟು. ಇದನ್ನು ಸಂಕಲಿಸಿದವರು ಪರಾಶರ-ಸತ್ಯವತಿಯರ ಮಗ ಕೃಷ್ಣದ್ವೈಪಾಯನರು ಎಂಬುದು ಪರಂಪರಾಗತವಾದ ಮಾತಾಗಿದೆ. ಇವರನ್ನು ವ್ಯಾಸರೆಂದು ಕರೆಯುತ್ತಾರೆ. 'ಪುರಾ ಭವಂ ಪುರಾಣಂ' - ಎಂಬ ವ್ಯುತ್ಪತ್ತಿಯಿಂದ ಕೂಡಿದ ಹದಿನೆಂಟು ಪುರಾಣಗಳಲ್ಲಿ ವಿಷ್ಣುಪುರಾಣವನ್ನು ಪ್ರಾಚೀನವಾದದ್ದೆಂದು ಹೇಳಬಹುದಾಗಿದೆ. ಇದರ ಕಾಲ ನಾಲ್ಕನೆಯ ಶತಮಾನವೆಂದು ಸಂಶೋಧಕರು ಅಭಿಪ್ರಾಯಪಟ್ಟಿದ್ದಾರೆ.

ಅಧ್ಯಾತ್ಮ ಬದುಕಿಗೆ ದಾರಿದೀಪವಾದ, ಮೋಕ್ಷಸಾಧನದ ಮಾರ್ಗವೆಂದು ಪರಿಗಣಿತ ವಾಗಿರುವ ವಿಷ್ಣು ಪುರಾಣದ ಅನಂತರ ಭಾಗವತವು ರಚನೆಯಾಗಿದೆ. ಚಿಂತನೆ ಮತ್ತು ಜಿಜ್ಞಾಸೆಗಳ ವಸ್ತುಸಾಮಗ್ರಿಯಿಂದ ಕೂಡಿರುವ ವಿಷ್ಣು ಪುರಾಣವು ಪುರಾಣಗಳಲ್ಲೆಲ್ಲ ಮಹತ್ವದ್ದಾಗಿ ಕಂಡು ಬರುತ್ತಿರುವುದು ಇದಕ್ಕೆ ಸಂದಿರುವ ಹೆಗ್ಗಳಿಕೆಯಾಗಿದೆ.

# ಮಹತ್ವದ ಪುರಾಣ

ಅಷ್ಟಾದಶ ಪುರಾಣಗಳು ವ್ಯಾಸಕೃತವೆಂಬುದು ಸರ್ವಸಮ್ಮತವಾದ ವಿಚಾರ. ಆದರೆ ವಿಷ್ಣು ಪುರಾಣಕ್ಕೆ ಅನ್ವಯವಾಗುವಂತೆ ಬೇರೊಂದು ಅಭಿಪ್ರಾಯವಿರುತ್ತದೆ. ಇದನ್ನು ವ್ಯಾಸರ ತಂದೆ ಪರಾಶರರು ಮೈತ್ರೇಯರಿಗೆ ಹೇಳಿದರೆಂದು ಈ ಕೃತಿಯಿಂದಲೇ ತಿಳಿದು ಬರುತ್ತದೆ. ಪುರಾಣ ಸಾಹಿತ್ಯದ ಪ್ರಾಚೀನತೆಯನ್ನು ಅರ್ಥೈಸಿಕೊಳ್ಳುವ ಹಿನ್ನೆಲೆಯಲ್ಲಿ ಈ ಅಭಿಪ್ರಾಯವು ಸಾಧುವಾದದ್ದೆಂಬುದಾಗಿ ಭಾವಿಸಬಹುದು. ಇದು ಹೇಗೇ ಇರಬಹು ದಾದರೂ ಈ ವಿಷ್ಣುಪುರಾಣಕ್ಕೆ ಸಾತ್ವಿಕ ಪುರಾಣಗಳಲ್ಲಿ ಅಗ್ರಗಣ್ಯ ಸ್ಥಾನವು ದೊರೆಯುತ್ತಿರು ವುದು ಬಹುಸಮ್ಮತವಾಗಿದೆ.

ವಿಷ್ಣು ಪುರಾಣವು ಸುಮಾರು ಇಪ್ಪತ್ತಮೂರು ಸಾವಿರ ಶ್ಲೋಕಗಳಿಂದ ಕೂಡಿ ಆರು ಅಂಶಗಳಲ್ಲಿ ವಿಭಜನೆಗೊಂಡಿದೆ. ಪ್ರತಿಯೊಂದು ಅಂಶವನ್ನು ಅಧ್ಯಾಯಗಳಾಗಿ ವಿಂಗಡಣೆ ಮಾಡಲಾಗಿದ್ದು ಒಟ್ಟು ೧೨೬ ಅಧ್ಯಾಯಗಳನ್ನು ಹೊಂದಿದೆ. ಪ್ರಸಿದ್ಧರಾದ ವಿದ್ವಾಂಸರ ಟೀಕೆ-ವ್ಯಾಖ್ಯಾನಗಳ ಗೌರವವನ್ನೂ ಇದು ಪಡೆದಿದೆ.

ಭಾಗವತ-ಭಗವದ್ಗೀತೆಗಳಿಗೆ ವ್ಯಾಖ್ಯಾನವನ್ನು ಬರೆದಿರುವ ಶ್ರೀಧರ ಸ್ವಾಮಿಗಳೇ ವಿಷ್ಣುಪುರಾಣಕ್ಕೂ ವ್ಯಾಖ್ಯಾನವನ್ನು ರಚಿಸಿದ್ದಾರೆ. ಇವರ ಕಾಲವನ್ನು ಸುಮಾರು ಹದಿನಾರನೇ ಶತಮಾನವಿದ್ದಿರಬೇಕೆಂದು ಊಹಿಸಲಾಗಿದೆ. ಇವರ ವ್ಯಾಖ್ಯಾನವೊಂದರ ಜೊತೆಗೆ ವಿಷ್ಣುಪುರಾಣಕ್ಕೆ 'ವಿಷ್ಣುಚಿತ್ತೀಯ' ವೆಂಬ ಮತ್ತೊಂದು ವ್ಯಾಖ್ಯಾನವು ಇರುವಂತೆ ತಿಳಿದುಬರುತ್ತದೆ. ಇವುಗಳು ಈ ಪುರಾಣದ ಪ್ರಾಶಸ್ತ್ಯಕ್ಕೆ ನಿದರ್ಶನಗಳು.

ಈ ಪುರಾಣದಲ್ಲಿ ಭರತಖಂಡವನ್ನು ಆಳಿದ ರಾಜರ ವಿಷಯ, ಅವರ ವಂಶ ಚರಿತ್ರೆ, ಲೋಕಸೃಷ್ಟಿ ವಿಭಾಗಗಳು, ಭೌಗೋಳಿಕ ವಿಷಯಗಳಿವೆ. ತೀರ್ಥಗಳ ಮಹಾತ್ಮೆ, ದೇವಕ್ಷೇತ್ರಗಳ ಮಹಾತ್ಮೆ ಮೊದಲಾದ ಹಲವು ವಿಷಯಗಳಿವೆ. ಇತರ ಪುರಾಣಗಳಲ್ಲಿ ಬರುವ ಸಂಗತಿಗಳ ವಿಸ್ತಾರವನ್ನು ಇದರಲ್ಲಿ ಕಾಣಲಾರೆವು. ಧಾರ್ಮಿಕ ವಿಚಾರಗಳಿಗೆ ಅತಿ ದೀರ್ಘವಾದ ಸ್ಥಾನವಿಲ್ಲದೆ, ಇದೊಂದು ಪ್ರಾಮಾಣಿಕತೆಗೆ ಹೆಚ್ಚು ಅವಕಾಶವನ್ನು ಕೊಟ್ಟಿರುವ ಪುರಾಣವೆಂದು ಹೇಳುವುದು ಸೂಕ್ತವಾದೀತು.

ಇದರಲ್ಲಿನ ಅನೇಕ ಸಂಗತಿಗಳು ನೀತಿ ಬೋಧೆಗೆ ಹತ್ತಿರವಾಗಿ ಅಧ್ಯಾತ್ಮತತ್ವಗಳನ್ನು ವಿಶೇಷವಾಗಿ ಪ್ರಚಾರಗೊಳಿಸುತ್ತಿವೆ. ನೈತಿಕ ಮಾರ್ಗವನ್ನು ವೃದ್ಧಿಗೊಳಿಸುವ ಸಾಧನಗಳ ಆಕರವೆಂಬಂತೆ ಕಂಡು ಬರುವ ವಿಷ್ಣು ಪುರಾಣದಲ್ಲಿ ಭಕ್ತಿ-ಜ್ಞಾನಗಳನ್ನು ಅಧಿಕಗೊಳಿಸಿಕೊಳ್ಳಲು ಅಗತ್ಯವಾದ ಸಂಪನ್ಮೂಲ ವಿದೆ. ಪುರಾಣ ಪ್ರಪಂಚದಲ್ಲಿ ಮಹಾಪುರಾಣವೆಂಬ ಹೆಸರನ್ನು ಸಾರ್ಥಕಪಡಿಸುವಂತಿರುವ ಇದನ್ನು ಪ್ರಾಚೀನ ಪುರಾಣಗಳ ಸಾಲಿಗೆ ಸೇರಿಸಿರುವುದು ಸೂಕ್ತವಾಗಿಯೇ ಇದೆ.

## ವಿಶಿಷ್ಟ ರಚನೆ

ಅಭಿವ್ಯಕ್ತಿಗೊಂದು ಭಾಷೆಯಿದ್ದು ಅದು ಸಹಜ-ಸರಳ-ಸುಂದರವಾಗಿದ್ದಾಗ ಸಾರ್ವಕಾಲಿಕ ಮಾನ್ಯತೆಯನ್ನು ಪಡೆಯಬಲ್ಲದು. ಹೀಗೆಯೇ ವಿಷ್ಣುಪುರಾಣದ ಭಾಷೆ ಲಲಿತವಾದ ರೀತಿಯಿಂದ ಕೂಡಿದ್ದಾಗಿದೆ. ಇದರಲ್ಲಿ ಪದ್ಯ ಭಾಗವು ಅಧಿಕವಾಗಿರುವುದಾದರೂ ಅಲ್ಲಲ್ಲಿ ಬರುವ ಗದ್ಯವಾಕ್ಯಗಳನ್ನು ರಮಣೀಯವಾದದ್ದೆಂಬುದಾಗಿ ಗುರುತಿಸಬಹುದಾಗಿದೆ. ಶಾಸ್ತ್ರಸಿದ್ಧವಾದ ಬರವಣಿಗೆಯಲ್ಲಿ ಆರ್ಷ ಪ್ರಯೋಗಗಳು ಸಾಕಷ್ಟು ಸಂಖ್ಯೆಯಲ್ಲಿರುತ್ತವೆಯಾದರೂ ವಿಷ್ಣುಪುರಾಣದಲ್ಲಿನ ಇಂತಹ ಪ್ರಯೋಗಗಳು ಕಡಮೆಯೆಂದೋ, ಇಲ್ಲವೆ ಪರಿಮಿತವಾದದ್ದೆಂದೋ ಹೇಳಬೇಕಾಗುತ್ತದೆ. ಆಖ್ಯಾನಗಳನ್ನು ಅತಿಯಾಗಿ ಬೆಳೆಸದೆ ಅವನ್ನು ಅಗತ್ಯಕ್ಕೆ ತಕ್ಕ ರೀತಿಯಲ್ಲಿ ಹೇಳಿರುವುದು ಈ ಪುರಾಣದ ಹಿರಿಮೆಗೆ ಸಾಕ್ಷಿಯಾಗಿದೆ. ಇದರಲ್ಲಿ ಬರುವ ಧ್ರುವಚರಿತ್ರೆ ಮತ್ತು ಪ್ರಹ್ಲಾದ ಚರಿತ್ರೆಗಳು ಕಥೆಗಿಂತಲೂ ಮಿಗಿಲಾದ ಕಾವ್ಯದ ಅಂಶಗಳಿಂದ ಕೂಡಿ ಸುಂದರವಾಗಿವೆ. ಕಾವ್ಯವು ಸಾಧಿಸಬೇಕಾದ ರಮಣೀಯತೆಯು ಪ್ರತಿಪಾದನೆಯಲ್ಲಿ ಇಲ್ಲಿ ಸಾಧಿಸಿದಂತಾಗಿದೆ.

ಪ್ರಹ್ಲಾದನ ಚರಿತ್ರೆಯನ್ನು ವಿಷ್ಣುಪುರಾಣದ ಮೊದಲನೆಯ ಅಂಶದಲ್ಲಿಯೇ ವಿವರಿಸಲಾಗಿದೆ. ಒಟ್ಟು ಐದು ಅಧ್ಯಾಯಗಳಲ್ಲಿ ಸುಮಾರು ಇನ್ನೂರ ಎಂಬತ್ತು ಪದ್ಯಗಳಲ್ಲಿ ಪ್ರಹ್ಲಾದನ ಬಾಲ್ಯ ವಿದ್ಯಾಭ್ಯಾಸಗಳು, ವಿಷ್ಣುವಿನಲ್ಲಿ ಅನನ್ಯ ಭಕ್ತಿ, ಹರಿದ್ವೇಷಿ ತಂದೆಯಿಂದ ಒದಗಿದ ಆಪತ್ತು, ಭಗವಂತನಿಂದ ಅದರ ನಿವಾರಣೆಯಾದ ಸಂಗತಿಗಳ ವೃತ್ತಾಂತವಿದೆ. ಆದರೆ ಇಡೀ ವಿಷ್ಣುಪುರಾಣದಲ್ಲಿ ಎಲ್ಲಿಯೂ ನರಸಿಂಹಾವತಾರದ ವಿವರಗಳು ಸರಿಯಾಗಿ ಕಂಡುಬರುವುದಿಲ್ಲ. ನರಸಿಂಹಾವತಾರದ ಅದ್ಭುತ ವಿವರಗಳನ್ನು ಕಾಣಬೇಕಾದಲ್ಲಿ ವಿಷ್ಣುಪುರಾಣದ ವಿಸ್ತೃತ ಅಂಶಗಳ ವಿವರವೆಂಬಂತೆ ಕಂಡುಬರುವ ಭಾಗವತವನ್ನೇ ಗಮನಿಸಬೇಕಾಗುತ್ತದೆ. ಭಾಗವತದ ರಚನೆಗೆ ವಿಷ್ಣುಪುರಾಣದ ಹಿನ್ನೆಲೆಯಿದ್ದದ್ದು, ಅಥವಾ ಭಾಗವತಕಾರರ ಕಣ್ಣೆದುರಿಗೆ ವಿಷ್ಣುಪುರಾಣವಿತ್ತೆಂಬ ಅಭಿಪ್ರಾಯ ಸರ್ವಸಮ್ಮತವಾದುದು. ಅವತಾರಗಳ ಹಿರಿಮೆಯನ್ನು ಎತ್ತಿಹಿಡಿದಿರುವ ವಿಷ್ಣುಪುರಾಣದಲ್ಲಿ ನರಸಿಂಹನಿಂದ ಹಿರಣ್ಯಕಶಿಪುವು ಸಂಹರಿಸಲ್ಪಟ್ಟ ವೃತ್ತಾಂತ ಆನುಷಂಗಿಕವಾಗಿ ಬಂದಿರುವುದಾಗಿದೆ.

## ಹಿನ್ನೆಲೆ

ವಿಷ್ಣು ಪುರಾಣದ ಪ್ರಥಮಾಂಶದ ಹದಿನೈದನೆ ಅಧ್ಯಾಯದಲ್ಲಿ ಕೊನೆಯ ಹದಿನಾರು ಪದ್ಯಗಳು ಪ್ರಹ್ಲಾದನಿಗೊದಗಿದ ವಿಪತ್ತುಗಳ ಸ್ಥೂಲ ನೋಟವನ್ನು ನೀಡುತ್ತವೆ. ಪ್ರಹ್ಲಾದ ಚರಿತ್ರೆಯು ಒಂದು ರೀತಿಯಲ್ಲಿ ಇಲ್ಲಿಂದಲೇ ಆರಂಭವಾಗಿದೆಯೆನ್ನಬಹುದು. ದಕ್ಷಪ್ರಜಾಪತಿಯ ಸಂತತಿಯ ವಿವರಗಳು ಈ ಅಧ್ಯಾಯದಲ್ಲಿ ವಿವರಗೊಂಡಿವೆ. ಕಶ್ಯಪ ಮತ್ತು ದಿತಿಯರ ವೀರಪುತ್ರರಾಗಿ ಹಿರಣ್ಯಕಶಿಪು, ಹಿರಣ್ಯಾಕ್ಷರು ಜನಿಸುತ್ತಾರೆ. ಇವರಲ್ಲಿ

ಹಿರಣ್ಯಕಶಿಪುವಿಗೆ ನಾಲ್ಕು ಜನ ಮಕ್ಕಳು. ಅನುಹ್ಲಾದ, ಹ್ಲಾದ, ಪ್ರಹ್ಲಾದ ಮತ್ತು ಸಂಹ್ಲಾದ. ಇವರಲ್ಲಿ ಪ್ರಹ್ಲಾದನು ಸಮದರ್ಶಿಯೂ, ಜಿತೇಂದ್ರಿಯನೂ ಆಗಿದ್ದನಲ್ಲದೆ ಜನಾರ್ದನನಲ್ಲಿ ಪರಮಭಕ್ತಿಯುಳ್ಳವನಾಗಿರುತ್ತಾನೆ. ದೈತ್ಯರಾಜನಾದ ಹಿರಣ್ಯಕಶಿಪು ಪ್ರಹ್ಲಾದನಿಗೆ ಅನೇಕ ತೆರನಾದ ಹಿಂಸೆಗಳನ್ನು ನೀಡಿದನಾದರೂ ಪ್ರಹ್ಲಾದನು ತನ್ನಲ್ಲಿ ವಿಷ್ಣು ಭಕ್ತನಾದ ಕಾರಣ ಅವೆಲ್ಲವೂ ವಿಫಲವಾಗುತ್ತವೆ.

ವಿಷ್ಣುವಿನ ಮಹಿಮೆಯನ್ನು ವಿವರಿಸುವುದಕ್ಕಾಗಿಯೇ ಇರುವ ಈ ಪುರಾಣದಲ್ಲಿ ಸತ್ವಗುಣಪ್ರಧಾನನಾದ ಆತನ ಸ್ತುತಿಯನ್ನು ವಿಶೇಷವಾಗಿ ಮಾಡಲಾಗಿದೆ. ಭಕ್ತನಾದ ಪ್ರಹ್ಲಾದನು ಸಹ ಈ ಕೈಂಕರ್ಯದಲ್ಲಿ ಪಾಲುಗೊಂಡಿರುವುದನ್ನು ಅವನ ಕತೆಯನ್ನು ವಿವರವಾಗಿ ಕೇಳುವ ಅಭಿಲಾಷೆ ಪರಾಶರರ ಶಿಷ್ಯರಾದ ಮೈತ್ರೇಯರಲ್ಲಿ ಉಂಟಾಗುತ್ತದೆ. ಅವರ ಕೋರಿಕೆಯ ಮೇರೆಗೆ ಪ್ರಹ್ಲಾದ ಚರಿತ್ರೆಯ ಕಥಾ ಹಂದರವು ಬಿಚ್ಚಿಕೊಂಡು ಸುಮಾರು ಐದು ಅಧ್ಯಾಯಗಳಲ್ಲಿ ಸಾಗಿಬಂದಿರುವುದನ್ನು ವಿಷ್ಣುಪುರಾಣದಲ್ಲಿ ಗಮನಿಸಬೇಕು.

ಪ್ರಹ್ಲಾದನು ವಾಸುದೇವನ ಹೃದಯಲ್ಲಿ ನೆಲೆಸಿದವನಾಗಿದ್ದು ಸರ್ವತ್ರಾಚ್ಯುತ ಚೇತಸನಾಗಿರುತ್ತಾನೆ. ಇವನು ವಿಷ್ಣು ಸ್ಮರಣದಂಶಿತನೂ, ಚಿತ್ತಸ್ಥ ಮಧುಸೂದನನೂ ಆಗಿದ್ದಾನೆ. ಇವನ ವಿಷ್ಣು ಭಕ್ತಿಪಾರಮ್ಯವನ್ನು ವಿಷ್ಣುಪುರಾಣವು ತಿಳಿಸುತ್ತದೆ. ಸೃಷ್ಟಿ ಪಾಲನೆಯ ಜವಾಬ್ದಾರಿಯನ್ನು ಹೊತ್ತ ಸ್ವಾಮಿಯು ಹಿಂಸೆಗೊಳಗಾದ ತನ್ನ ಭಕ್ತನನ್ನು ರಕ್ಷಿಸುವ ಮಹಿಮಾಗುಣವನ್ನು ನಾವಿಲ್ಲಿ ಕಾಣುತ್ತಿದ್ದೇವೆ. ಯಾರನ್ನು ಯಾರೂ ಹಿಂಸಿಸದೇ ಇದ್ದಲ್ಲಿ ರಕ್ಷಿಸುವುದಕ್ಕೆ ಅವಕಾಶವೇ ಇರುವುದಿಲ್ಲವಾಗಿ ಶಿಷ್ಟರಕ್ಷಣೆಯ ವಿಚಾರ ಬಹುದೂರದ ಮಾತಾಗಿ ಉಳಿಯುತ್ತದೆ. ದುಷ್ಟನಾದ ವ್ಯಕ್ತಿಯು ಶಿಕ್ಷೆಗೊಳಗಾದನೆಂಬ ವಿಚಾರವು ಸಾರ್ವತ್ರಿಕವಾಗಿ ಒಪ್ಪಿತವಾಗಬಹುದು. ಆದರೆ ಶಿಷ್ಟನೂ, ಸಂಭಾವಿತನೂ ಆದವನಿಗೆ ಕಿರುಕುಳವುಂಟಾದಾಗ ಅಂಥವನನ್ನು ಅದರಿಂದ ಪಾರುಮಾಡುವುದು ಅಗತ್ಯವಾದ ಕಾರ್ಯ. 'ಪರಿತ್ರಾಣಾಯ ಸಾಧೂನಾಂ' ಎಂಬುದು ಭಗವದ್ಗೀತೆಯಲ್ಲಿ ಬಂದಿರುವ ಭಗವಂತನ ಅಮೂಲ್ಯವಾದ ನುಡಿಯಾಗಿದೆ. ಅವತಾರದ ಉದ್ದೇಶವೂ ಇದೇ ಆಗಿದೆಯೆಂಬುದು ಸ್ಮರಣೀಯವಾದದ್ದು.

ಹಿರಣ್ಯಕಶ್ಯಪನ ಹರಿದ್ವೇಷಿ ಮನೋಭಾವಕ್ಕೆ ಕಾರಣವಾದ ಸನ್ನಿವೇಶವಾಗಿ ಅವನ ಸೋದರನ ವಧೆಯ ಪ್ರಸಂಗವನ್ನು ಕೆಲವೊಂದು ಆಧಾರಗಳಲ್ಲಿ ಪರಿಭಾವಿಸಲಾಗುತ್ತಿದೆ. ಆದರೆ ವಿಷ್ಣುಪುರಾಣದಲ್ಲಿ ಹಿರಣ್ಯಾಕ್ಷನ ಅಂತ್ಯದ ವಿವರಗಳ ಉಲ್ಲೇಖವಾಗಲೀ, ಅವನು ಭೂಮಿಯನ್ನು ಚಾಪೆಸುತ್ತಿ ಪಾತಾಳಕ್ಕೆತ್ತಿಕೊಂಡು ಹೋದ ಘಟನೆಯಾಗಲೀ ಇಲ್ಲವಾಗಿದೆ. ಇಲ್ಲಿ ವರಾಹಾವತಾರದ ವಿವರವೇ ಕಡಮೆ ಪ್ರಮಾಣದಲ್ಲಿದೆ. ಭೂಮಿಯನ್ನು ವರಾಹ ಕಲ್ಪದಲ್ಲಿ ರಸಾತಲದಿಂದ ಮೇಲೆತ್ತಿದ ಸಂದರ್ಭದಲ್ಲಿ ವರಾಹನ ಪ್ರಶಂಸೆಯನ್ನು ಭೂದೇವಿ ಮಾಡಿರುವುದನ್ನು ಇಲ್ಲಿ ಹೇಳಲಾಗಿದೆ.

## ವರಗಳ ಮಹಿಮೆ

ಹಿರಣ್ಯಕಶಿಪು ಮೊದಲೇ ಬ್ರಹ್ಮನಿಂದ ವರಗಳನ್ನು ಪಡೆದುಕೊಂಡಿದ್ದು, ಅದರ ಪ್ರಭಾವದಿಂದ ಮೂರು ಲೋಕಗಳನ್ನೂ ವಶಪಡಿಸಿಕೊಂಡಿರುತ್ತಾನೆ. ಮಹಾವೀರನಾದ ಅವನು ಅತಿಯಾದ ದರ್ಪದಿಂದ ಕೂಡಿದವನಾಗಿ ಸಮಸ್ತ ದೇವತೆಗಳ, ಅವರೊಡೆಯರ ಶಕ್ತಿಗಳನ್ನು ಪಡೆದು ಅವರೆಲ್ಲರ ಪ್ರತಿರೂಪವೂ ತಾನೇ ಆದಂತಿರುತ್ತಾನೆ. ಅವನ ಅಟ್ಟಹಾಸಕ್ಕೆ ಎಡೆಯೇ ಇರುವುದಿಲ್ಲ. ಅವನ ಉಪಟಳವನ್ನು ತಾಳಲಾರದ ದೇವತೆಗಳು ಸ್ವರ್ಗವನ್ನು ತ್ಯಜಿಸಿ ಭೂಲೋಕದಲ್ಲಿ ಮನುಷ್ಯ ವೇಷದಿಂದ ಸಂಚರಿಸುತ್ತಿದ್ದರೆಂಬ ಮಾತಿನಿಂದ ಅವನ ಕಿರುಕುಳದ ಪರಮಾಧಿಕ್ಯತೆ ಅರಿವಾಗುತ್ತದೆ.

ಹಿರಣ್ಯಕಶ್ಯಪನು ಹಿಂದೆ ಪಡೆದ ವರಗಳ ಮಹಿಮೆಯಿಂದ ಪಡೆದುಕೊಂಡ ಹೇರಳವಾದ ಸುಖಸಾಧನಗಳಿಂದ ಪ್ರಮತ್ತನಾಗಿದ್ದಾನೆ. ಆತನ ಆಸ್ಥಾನದಲ್ಲಿ ಗೀತ-ನರ್ತನಗಳು ಸದಾ ಕಾಲ ಸಾಗಿರುತ್ತದೆ. ಅವನು ಸ್ಫಟಿಕಮಯವಾದ ಮನೋಹರ ಪ್ರಾಸಾದದಲ್ಲಿ ಅಪ್ಸರೆಯರ ನಡುವೆ ಮಧುಪಾನ ಮಾಡುತ್ತ ಆನಂದದಲ್ಲಿರುತ್ತಾನೆ. ಭೋಗಸಾಮ್ರಾಜ್ಯದಲ್ಲಿ ತೇಲಾಡುತ್ತಿದ್ದ ಈ ಮಹಾನುಭಾವನ ಮಗ ಪ್ರಹ್ಲಾದನು ಗುರುಕುಲದಲ್ಲಿ ವಿದ್ಯಾಭ್ಯಾಸ ಮಾಡುತ್ತಿರುತ್ತಾನೆ. ತನ್ನ ಮಗನು ಗುರುಗಳಿಂದ ಪಡೆದಿರಬಹುದಾದ ಅಮೂಲ್ಯವಾದ ವಿದ್ಯೆಯನ್ನು ಅಮಲಿನಲ್ಲಿದ್ದ ತಂದೆಯು ಅವಲೋಕಿಸುವ ಸಂದರ್ಭವೊದಗಿ ಬರುತ್ತದೆ. ಸಾರಭೂತವಾದ ಸುಭಾಷಿತವನ್ನು ತಾನು ಕೇಳಬೇಕೆಂಬುದಾಗಿ ಅವನು ಮಗನಿಗೆ ತಿಳಿಸುತ್ತಾನೆ.

## ವಿದ್ಯೆಯ ಪರೀಕ್ಷೆ

ಪ್ರಹ್ಲಾದನು ತನ್ನ ತಂದೆಯ ಕೋರಿಕೆಯಂತೆ ಅರ್ಥಪೂರ್ಣವೂ, ಸ್ವಾರಸ್ಯವೂ ಆದ ಶ್ಲೋಕವೊಂದನ್ನು ಹೇಳುತ್ತಾನೆ. ಅವನ ಆ ಪದ್ಯದ ಅರ್ಥವು ಆದಿ ಮಧ್ಯಾಂತ ಶೂನ್ಯನಾದ ಅಜನೂ, ವೃದ್ಧಿ-ಕ್ಷಯ ರಹಿತನೂ, ಸರ್ವಕಾರಣಗಳಿಗೆ ಕಾರಣನೂ, ಮಹಾತ್ಮನೂ ಆದ ಅಚ್ಯುತನಿಗೆ ತಾನು ನಮಸ್ಕರಿಸುವೆನೆಂದಾಗಿರುತ್ತದೆ. ತನ್ನ ಮನಸ್ಸಿಗೆ ವಿರುದ್ಧವಾದ ಮಾತುಗಳು ದೈತ್ಯರಾಜನಿಗೆ ಅಸಹನೀಯವಾಗುತ್ತದೆ. ಅವನಲ್ಲುಂಟಾದ ಶಾರೀರಿಕ ಬದಲಾವಣೆಯಿಂದ ಇದು ಪ್ರಕಟಗೊಳ್ಳುತ್ತದೆ. ಮೊದಲೇ ಕೆಂಪಾದ ಕಣ್ಣುಗಳು ಮತ್ತಷ್ಟು ಕೆಂಪೇರುತ್ತವೆ. ತುಟಿಗಳು ಅದುರುತ್ತವೆ. ಗುರುಗಳೇ ತನ್ನ ಮಗನಿಗೆ ಇದನ್ನು ಕಲಿಸಿರುವರೆಂದು ಅವರ ಮೇಲೆ ಕಿಡಿಕಾರುತ್ತಾನೆ.

ವಿದ್ಯೆಯನ್ನು ಕಲಿಸುವುದರ ಮೂಲಕ ಜ್ಞಾನದಾನವನ್ನು ಮಾಡುತ್ತಿದ್ದ ಪ್ರಾಮಾಣಿಕರೂ ಆದ ಗುರುಗಳು ಇದು ತಾವು ಕಲಿಸಿದ್ದಲ್ಲವೆಂದು ದೈತ್ಯೇಶ್ವರನಿಗೆ ಮನವರಿಕೆ ಮಾಡಿ ಕೊಡುತ್ತಾರೆ. ಪ್ರಹ್ಲಾದನೂ ಸಹ, ಸಮಸ್ತ ಜಗತ್ತನ್ನೂ ನಿಯಮಿಸುತ್ತಾ ಹೃದಯಸ್ಥನಾಗಿರುವ ಪರಮಾತ್ಮನಲ್ಲದೆ ಇತರರು ಯಾರೂ ಯಾರಿಗೂ ಉಪದೇಶಿಸುವುದು ಸಾಧ್ಯವಿಲ್ಲವೆಂಬುದನ್ನು

ತಂದೆಗೆ ತಿಳಿಸುತ್ತಾನೆ. ಪ್ರಹ್ಲಾದನ ಮೂಲಕ ವಿಷ್ಣುವಿನ ಸರ್ವವ್ಯಾಪಕಗುಣವನ್ನೂ ವಿಷ್ಣುಭಕ್ತಿಯ ಸಂದೇಶವನ್ನೂ ಜಗತ್ತಿನ ಅನಂತಕೋಟಿ ಜೀವಿಗಳಿಗೆ ಮುಟ್ಟಿಸುವಂತಿರುವ ಸನ್ನಿವೇಶವನ್ನು ವಿಷ್ಣುಪುರಾಣದಲ್ಲಿ ಕಾಣುತ್ತೇವೆ.

'ಯತೋ ಯಚ್ಚ ಸ್ವಯಂ ವಿಶ್ವಂ ಸ ವಿಷ್ಣುಃ ಪರಮೇಶ್ವರಃ' -ಎಂಬುದು ಪ್ರಹ್ಲಾದ ಉವಾಚವಾಗಿದೆ. ಯಾರಿಂದ ಈ ವಿಶ್ವವು ಹುಟ್ಟಿದೆಯೋ, ಯಾವಾತನೇ ಸ್ವಯಂ ವಿಶ್ವವಾಗಿದ್ದಾನೋ ಆ ವಿಷ್ಣುವೇ ಪರಮೇಶ್ವರನೆಂಬುದು ಇದರ ಯಥಾರ್ಥವಾಗಿದೆ.

ಈತನನ್ನು ಯೋಗಿಗಳೂ ಧ್ಯಾನಿಸುತ್ತಿದ್ದಾರೆ. ಈತನ ಪರಮಪದವು ಶಬ್ದಗಳಿಗೆ ಅಗೋಚರವಾದದ್ದು, ಈ ಮಾತಿಗೆ ಹಿರಣ್ಯಕಶಿಪುವಿನ ಪ್ರತಿವಾದವಿದ್ದೇ ಇದೆ. ತಾನಿರುವಾಗ ಪರಮೇಶ್ವರನೆಂಬ ಹೆಸರು ಬೇರೆ ಯಾರಿಗೂ ಇರಲಾರದೆಂಬ ಅಹಂಭಾವದಿಂದ ಅವನು ಮೆರೆದಿರುತ್ತಾನೆ. ಅವನಾಡಿದ ಮಾತುಗಳಲ್ಲಿ ಅವನ ಸಿಟ್ಟು ವ್ಯಕ್ತವಾಗಿರುತ್ತದೆ. ಅದಕ್ಕೆ ವಿನಯವಾಗಿಯೇ ಪ್ರಹ್ಲಾದನು 'ಪರಬ್ರಹ್ಮನಾದ ವಿಷ್ಣುವು ತನಗೆ ಮಾತ್ರವಲ್ಲ, ಪ್ರಜೆಗಳಿಗೆ ಮಾತ್ರವಲ್ಲ, ತನ್ನ ತಂದೆಯಾದವನಿಗೂ ಕರ್ತನೂ, ನಿಯಾಮಕನೂ ಆಗಿರುವುದರಿಂದ ಅವನ ಕೋಪಕ್ಕೆ ಕಾರಣವಿಲ್ಲ'ವೆಂದೆನ್ನುತ್ತಾನೆ. ಸರ್ವವ್ಯಾಪಿಯಾದ ವಿಷ್ಣುವು ತನ್ನ ಹೃದಯದಲ್ಲಿ ಮಾತ್ರವಲ್ಲದೆ ಸಮಸ್ತ ಪ್ರಾಣಿಗಳ ಹೃದಯದಲ್ಲೂ ಪ್ರವೇಶಿಸಿ ನೆಲೆಸಿರುವನಾಗಿದ್ದಾನೆ. ಆತನು ಅವರಿವರೆನ್ನದೆ ಸರ್ವರನ್ನೂ ಸಕಲ ಕ್ರಿಯೆಗಳಲ್ಲಿ ಪ್ರೇರೇಪಣೆ ಮಾಡುವವನಾಗಿದ್ದಾನೆ ಎಂದೂ ಪ್ರಹ್ಲಾದನು ವಿವರಿಸುತ್ತಾನೆ. ಇಂತಹ ಪರಮಪುರುಷನನ್ನು ನಿನ್ನಲ್ಲಿಯೂ ಕಂಡುಕೊಳ್ಳಬಹುದೆಂದು ಹೇಳಿದ ಬಾಲಕನ ಮಾತುಗಳನ್ನು ತಂದೆಯಾದ ಹಿರಣ್ಯಕಶಿಪು ಧಿಕ್ಕರಿಸಿ ಅವನನ್ನು ಹೊರದೂಡುತ್ತಾನೆ.

## ತಿದ್ದುವ ಮಾರ್ಗ

ಪ್ರಹ್ಲಾದನನ್ನು ಮತ್ತೊಮ್ಮೆ ಗುರುಕುಲಕ್ಕೆ ಕಳುಹಿಸಲಾಗುತ್ತದೆ. ಅಲ್ಲಿ ಅವನು ತನ್ನ ಶಿಕ್ಷಣವನ್ನು ಮುಂದುವರೆಸುತ್ತಾನೆ. ಇವನ ಪುನರ್‌ಶಿಕ್ಷಣದಿಂದ ಪರಿವರ್ತನೆಯಾಗಿರಬಹುದೆಂಬ ಭಾವನೆಯಿಂದ ಸುದೀರ್ಘಕಾಲದ ನಂತರ ಮಗನನ್ನು ಕರೆಸಿಕೊಂಡ ದೈತ್ಯರಾಜನು ಹಿಂದಿನಂತೆಯೇ ಅವನ ಕಲಿಕೆಯ ಸಾರವನ್ನು ಪ್ರತಿಬಿಂಬಿಸುವ ಪದ್ಯವೊಂದನ್ನು ಹೇಳಲು ತಿಳಿಸುತ್ತಾನೆ.

*ಯತಃ ಪ್ರಧಾನಪುರುಷಾ ಯತಶ್ಚೈತಚ್ಚರಾಚರಮ್।*
*ಕಾರಣಂ ಸಕಲಸ್ಯಾಸ್ಯ ಸ ನೋ ವಿಷ್ಣುಃ ಪ್ರಸೀದತು॥*

- ಯಾರಿಂದ ಪ್ರಕೃತಿಯೂ ಜೀವಾತ್ಮನೂ ಹುಟ್ಟಿದ್ದಾರೋ, ಯಾರಿಂದ ಈ ಚರಾಚರ ಜಗತ್ತು ನಿರ್ಮಿತವಾಗಿದೆಯೋ ಸಮಸ್ತಕ್ಕೂ ಕಾರಣನಾದ ಆ ವಿಷ್ಣುವು ನಮ್ಮಲ್ಲಿ ಪ್ರಸನ್ನನಾಗಲಿ ಎಂದು ಹೇಳಿದ ಬಾಲಕನು ಮತ್ತೊಮ್ಮೆ ಅಚ್ಯುತನನ್ನು ಹೊಗಳುತ್ತಾನೆ.

ಆದರೆ ಇದಾವುದೂ ಹಿರಣ್ಯಕಶಿಪುವಿನ ಹೃದಯಾಂತರಾಳವನ್ನು ಪ್ರವೇಶಿಸಲು ಸಾಧ್ಯವಾಗಲಿಲ್ಲ. ಇದಕ್ಕೆ ವಿರುದ್ಧವಾಗಿ ಅವನಲ್ಲಿ ಕ್ರೋಧವು ಹೆಚ್ಚಾಗುತ್ತದೆ. ಮಗನ ಉಪದೇಶಗಳೆಲ್ಲವೂ ಅವನನ್ನು ಅಸಹನೀಯನನ್ನಾಗಿಸುತ್ತವೆ. ಇದರ ಪರಿಣಾಮವಾಗಿ ತನ್ನ ಮಗನಿಗೆ ಶಿಕ್ಷೆಯನ್ನು ನೀಡಿ ಹೇಗಾದರೂ ಮಾಡಿ ಅವನನ್ನು ಹರಿಯ ಚಿಂತನೆಯಿಂದ ವಿಮುಖನನ್ನಾಗಿ ಮಾಡಬೇಕೆಂಬ ಹಂಬಲವು ಅವನ ಮನಸ್ಸಿನಲ್ಲಿ ಬೇರೂರುತ್ತದೆ. ತಾನೇ ನೇರವಾಗಿ ಹಿಂಸಿಸಲು ಇಷ್ಟಪಡದ ತಂದೆಯು ತನ್ನ ಸೇವಕರಿಂದ ಆ ಕೆಲಸವನ್ನು ಮಾಡಿಸುತ್ತಾನೆ.

## ಹಿಂಸೆಯ ಬಗೆಗಳು

ಪ್ರಹ್ಲಾದನನ್ನು ಅಸಂಖ್ಯಾತವಾದ, ಅತ್ಯಂತ ಹರಿತವಾದ ಆಯುಧಗಳಿಂದ ವಧಿಸಲು ದೈತ್ಯರು ಸಜ್ಜಾಗುತ್ತಾರೆ. ಅವರು ಹಿಡಿದ ಆಯುಧಗಳಲ್ಲಿ, ಅದನ್ನು ಪ್ರಯೋಗಿಸುವ ಅವರಲ್ಲಿ ತನ್ನಲ್ಲಿ ಎಲ್ಲೆಡೆ ವಿಷ್ಣುವೇ ನೆಲೆಸಿದ್ದಾನೆಂಬ ದೃಢವಾದ ನಂಬಿಕೆಯು ಮೊನಚಾದ ಆಯುಧಗಳನ್ನು ಮೊಂಡಾಗಿಸುತ್ತದೆ. ಲೆಕ್ಕವಿಲ್ಲದಷ್ಟು ಬಾರಿ ಹೊಡೆದರೂ ಸಹ ಅವನಿಗೆ ಅದರಿಂದ ಕಿಂಚಿತ್ತಾದರೂ ಗಾಯವಾಗಲಿಲ್ಲ, ಶ್ರೀಹರಿಯ ಅಚ್ಚಳಿಯದ ಭಕ್ತಿಯ ಗುರುತನ್ನು ಹೊಂದಿದ್ದವನ ಮೇಲೆ ಕ್ರೂರಾದ ಆಯುಧಗಳಿಗೆ ಮತ್ತಾವ ಗೀರನ್ನೂ ಮೂಡಿಸಲು ಸಾಧ್ಯವಾಗಲಿಲ್ಲ. ಈ ಸಮಯದಲ್ಲಿ ಅವನಿಗೆ ವೈರಿಪಕ್ಷ ಪರವಾದ ಸ್ತುತಿಯನ್ನು ಕೈಬಿಡುವಂತೆ ಬೋಧಿಸಲಾಗುತ್ತದೆ. ಆದರೆ ಅವನು ಸಕಲಭಯಗಳನ್ನು ನಿವಾರಿಸುವ ಅನಂತನ ಸ್ಮರಣೆಯನ್ನು ಬಿಟ್ಟರೆ ಬಿಡುಗಡೆ ದೊರೆಯದೆಂದೂ ಇದಕ್ಕೆ ಬದಲಾಗಿ ಆತನನ್ನು ನಿರಂತರ ಸ್ಮರಿಸುತ್ತಿದ್ದರೆ ಹುಟ್ಟು ಮುಪ್ಪು ಸಾವುಗಳ ಎಲ್ಲ ಭಯವೂ ದೂರವಾಗುವುದೆಂದು ಮನವರಿಕೆ ಮಾಡಿಕೊಡುತ್ತಾನೆ.

ಅನಂತನ ಮಹಿಮೆಯನ್ನು ಪ್ರಹ್ಲಾದನು ವರ್ಣಿಸುತ್ತಿದ್ದ ಸಮಯದಲ್ಲಿ ಆತನನ್ನು ಭೀಕರರೂಪಗಳಾದ ಸರ್ಪಗಳಿಂದ ಕಚ್ಚಿಸಿ ಕೊಲ್ಲಿಸುವ ಉಪಾಯವು ಹೊಳೆಯುತ್ತದೆ. ರಾಜನ ಅಪ್ಪಣೆಯ ಮೇರೆಗೆ ಅತ್ಯಂತ ಕ್ರೂರವಾದ ತಕ್ಷಕಾದಿ ಭೀಕರ ಸರ್ಪಗಳು ಪ್ರಹ್ಲಾದನ ದೇಹದ ಎಲ್ಲ ಭಾಗಗಳನ್ನು ಎಡೆಬಿಡದೆ ಕಚ್ಚುತ್ತವೆ. ಆದರೆ ಪ್ರಹ್ಲಾದನು ಮಾತ್ರ ಅನಂತಶಯನನಾದ ಶ್ರೀಹರಿಯ ಧ್ಯಾನದಲ್ಲಿ ನಿರತನಾಗಿ ತನಗೆ ಯಾವುದೇ ಅಪಾಯವೂ ಆಗಿಲ್ಲವೆಂಬಹಾಗೆ ಸಮಾಧಾನ ಸ್ಥಿತಿಯಲ್ಲಿಯೇ ಇರುತ್ತಾನೆ.

ಆಯುಧಗಳಿಂದ ಅನಂತರೂಪಿ ಸರ್ಪಗಳಿಂದ ಆಗದಿದ್ದ ಕಾರ್ಯವನ್ನು ಬಲಿಷ್ಠವಾದ ದಿಗ್ಗಜಗಳ ಸಹಾಯದಿಂದ ಮಾಡಿಸಲೆತ್ನಿಸುತ್ತಾರೆ. ಪರ್ವತದ ಶಿಖರಗಳಂತಿದ್ದ ದಿಗ್ಗಜಗಳು ತಮ್ಮ ತೀಕ್ಷ್ಣವಾದ ದಂತಗಳಿಂದ ತಿವಿಯುತ್ತವೆ. ಅವನ ಎದೆಗೆ ಸಾವಿರಾರು ಬಾರಿ ತಿವಿದರೂ ವಿಷ್ಣುಚಿತ್ತನಾದ ಪ್ರಹ್ಲಾದನಿಗೆ ಯಾವ ಕೊಂಕೂ ಉಂಟಾಗಲಿಲ್ಲ. ಅದಕ್ಕೆ ಬದಲಾಗಿ ಅವುಗಳ ದಂತಗಳೇ ಮುರಿದು ಹೋಗುತ್ತವೆ. ಗಜಗಳ ದಂತಗಳು ಮುರಿದು

ಹೋದದ್ದಕ್ಕೆ ತಾನು ಕಾರಣನಲ್ಲವೆಂದೂ, ಇದಕ್ಕೆ ಕಾರಣವಾದದ್ದು ಎಲ್ಲ ವಿಪತ್ತುಗಳಿಂದ ರಕ್ಷಿಸಬಲ್ಲ ಜನಾರ್ದನನ ಮಹಿಮೆಯೊಂದೇ ಎಂಬುದಾಗಿ ಅವನು ತಿಳಿಸುತ್ತಾನೆ. ನಮ್ಮ ರಕ್ಷಕನಾದ ಸ್ವಾಮಿಯ ಶಕ್ತಿಸಾಮರ್ಥ್ಯಗಳು ಏಕಾಗ್ರಭಕ್ತಿಯುಳ್ಳವರಿಗೆ ರಕ್ಷಾಕವಚವಾಗಬಲ್ಲ'ದೆಂಬುದಕ್ಕೆ ಇದು ಸಾಕ್ಷಿಯಾಗಿದೆ.

ಹಿರಣ್ಯಕಶಿಪುವಿಗೆ ತನ್ನ ಮಗನನ್ನು ಕೊಲ್ಲಿಸುವ ಮತ್ತೊಂದು ಉಪಾಯವು ಮನಸ್ಸಿಗೆ ಹೊಳೆಯುತ್ತದೆ. ಅವನು ತನ್ನ ಕುಲವೈರಿಯಂತಿರುವ ಮಗನನ್ನು ಬೆಂಕಿಗೆ ಆಹುತಿಯಾಗಿಸಲು ಬಯಸುತ್ತಾನೆ. ಪ್ರಭುವಿನ ಅಪ್ಪಣೆಯ ಮೇರೆಗೆ ಬೃಹತ್ಪ್ರಮಾಣದಲ್ಲಿ ಸೌದೆಯನ್ನು ಒಟ್ಟುಗೂಡಿಸಿ ಹುಡುಗನನ್ನು ಅದರ ಒಳಗಿರಿಸಿ ಬೆಂಕಿಹಚ್ಚುತ್ತಾರೆ. ಪ್ರಬಲವಾದ ಗಾಳಿಯು ಬೀಸುತ್ತದೆ. ಧಗಧಗನೆ ಬೆಂಕಿ ಉರಿದರೂ ಅವನಿಗೆ ಯಾವ ಪುಟ್ಟ ಸುಟ್ಟ ಗಾಯವೂ ಆಗುವುದಿಲ್ಲ, 'ನೈನಂ ದಹತಿ ಪಾವಕಃ' -ಎಂಬ ಮಾತು ಇಲ್ಲಿ ಸ್ಮರಣಾರ್ಹವಾದೀತು. ತನ್ನ ಸುತ್ತಲೂ ಕವಿದ ಬೆಂಕಿಯು, ಎಲ್ಲ ದಿಕ್ಕುಗಳಿಂದಲೂ ಮುಚ್ಚಿಕೊಂಡ ತಾವರೆ ಎಲೆಗಳಂತೆ ತಣ್ಣಗಿನ ಅನುಭವವನ್ನು ಅವನಿಗೆ ಉಂಟುಮಾಡಿತು.

ಪ್ರಹ್ಲಾದನನ್ನು ಕೊಲ್ಲಲು ತಂದೆಯಾದ ಹಿರಣ್ಯಕಶಿಪು ಮತ್ತಷ್ಟು ಕಠಿಣವಾದ ಮಾರ್ಗಗಳನ್ನು ಅನುಸರಿಸುವ ಯೋಚನೆಯನ್ನು ಮಾಡುತ್ತಿರುವಷ್ಟರಲ್ಲಿ ತಂದೆ-ಮಗನ ನಡುವೆ ಪ್ರವೇಶಿಸಿದ -ಪುರೋಹಿತರೂ ಆದ- ಗುರುಗಳು ಹುಡುಗನ ಸ್ವಭಾವದಿಂದಾಗಿ ಹೀಗಾಯಿತೆಂದು ದೈತ್ಯರಾಜನಿಗೆ ತಿಳಿಸಿ ಹೇಳುತ್ತಾರೆ. ಪ್ರಹ್ಲಾದನನ್ನು ಮರಳಿ ಕರೆದೊಯ್ದು ಅವನಿಗೆ ಯೋಗ್ಯವಾದ ಶಿಕ್ಷಣವನ್ನು ನೀಡಿ ಸರಿದಾರಿಗೆ ತರುವುದಾಗಿ ಹೇಳಿ ಅಗ್ನಿರಾಶಿಯಿಂದ ಬಿಡಿಸಿ ತಮ್ಮ ಗುರುಕುಲಕ್ಕೆ ಕರೆದೊಯ್ಯುತ್ತಾರೆ. ಇದರಿಂದಾಗಿ ರಾಜನ ಸಿಟ್ಟು ತಕ್ಷಣಕ್ಕೆ ಶಮನಗೊಂಡಂತಾಗಿ ಪ್ರಹ್ಲಾದನು ಮೂರನೆ ಬಾರಿಗೆ ಗುರುಕುಲವನ್ನು ಸೇರಿದಂತಾಗುತ್ತದೆ.

## ಪ್ರಹ್ಲಾದ ಬೋಧನಾಮೃತ

ಗುರುಕುಲದಲ್ಲಿದ್ದ ಸಮಯದಲ್ಲಿ ಪ್ರಹ್ಲಾದನು ತನ್ನ ಗೆಳೆಯರಿಗೆ ನೀಡಿದ ಬೋಧನಾಮೃತವನ್ನು ವಿಷ್ಣುಪುರಾಣದಲ್ಲಿ ಕಾಣಬಹುದಾಗಿದೆಯಾದರೂ ಈ ಪ್ರಸಂಗವು ಭಾಗವತದಲ್ಲಿರುವ ಹಾಗೆ ದೀರ್ಘವೃತ್ತಾಂತದಿಂದ ಕೂಡಿರುವುದಿಲ್ಲ. ಪ್ರಹ್ಲಾದನು ತನ್ನ ಸಹಪಾಠಿಗಳಿಗೆ ಸಮಯ ಸಿಕ್ಕಾಗ ತಾನು ತಿಳಿದುಕೊಂಡಿದ್ದನ್ನು ಅವರಿಗೂ ತಿಳಿಸಿ ಹೇಳುತ್ತಿದ್ದನೆಂದು ಇದರಲ್ಲಿ ನಿರೂಪಿಸಲಾಗಿದೆ.

ದಿತಿಯ ಸಂತತಿಯವರೇ ಆದ ತನ್ನ ಓರಗೆಯವರಿಗೆ ಪ್ರಹ್ಲಾದನು ಪರಮಾರ್ಥದ ರಹಸ್ಯವಾಗಿ ಉಪದೇಶಿಸಿದ ಬೋಧನೆಯನ್ನು ಸ್ವಾರಸ್ಯ ಕೆಡದಂತೆ ವಿಷ್ಣುಪುರಾಣದಲ್ಲಿ ಬಣ್ಣಿಸಲಾಗಿದೆ. ಜೀವಿಗೆ ಉಂಟಾಗುವ ಹುಟ್ಟು, ಬಾಲ್ಯ, ಯೌವನ, ಮುಪ್ಪು, ನಂತರದ ಮರುಹುಟ್ಟುಗಳ ವಿಚಾರವನ್ನು ಪ್ರಹ್ಲಾದನು ವಿವರಿಸುತ್ತಾನೆ. ಮನುಷ್ಯನ ಎಲ್ಲ ಅನುಭವಗಳ ಹಿಂದೆ ಅಪಾರವಾದ ದುಃಖವಿದೆ. ಆತನ ಶರೀರದಲ್ಲಿ ಮಾಂಸ, ಮಜ್ಜೆಗಳು ತುಂಬಿರುವು

ದಾದರೂ ಭೌತಿಕವಾದ ದೇಹದ ಬಗ್ಗೆ ಮಾನವನಿಗೆ ಅಪಾರ ವ್ಯಾಮೋಹವಿದೆಯೆಂದು ಆತನು ವರ್ಣಿಸುತ್ತಾನೆ. ಚಳಿಯಾದಾಗ ಬೆಂಕಿಯ ಸನಿಹವು ಹಿತವಾಗಿರುತ್ತದೆ. ಬಾಯಾರಿಕೆಯಾದಾಗ ನೀರು ಕುಡಿಯುವ, ಹಸಿವಾದಾಗ ಆಹಾರವನ್ನು ಸೇವಿಸುವ ಮನುಷ್ಯನ ಪ್ರಾಕೃತಿಕವಾದ ಸಹಜ ಸ್ವಭಾವಗಳನ್ನೇ ಪ್ರಹ್ಲಾದನು ತಿಳಿಸಿ ಹೇಳುತ್ತಾನೆ.

ಅತ್ಯಂತ ದುಃಖಗಳಿಗೆ ಆಸ್ಪದವಾದ ಈ ಸಂಸಾರದಲ್ಲಿ ಸತ್ಯವಾದ ಗತಿಯಾಗಿ ಕಂಡುಬರುವ ವಿಷ್ಣುವಿನ ಧ್ಯಾನದ ಅಗತ್ಯತೆಯನ್ನು ಅವನು ವಿವರಿಸುತ್ತಾನೆ. ಬಾಲ್ಯದಲ್ಲಿ, ಯುವಕನಾದಾಗ ಪಾರಮಾರ್ಥಕ್ಕಾಗಿ ಚಿಂತಿಸೋಣವೆಂದಾಗಲೀ, ಯುವಕನಾದಾಗ, ವಯಸ್ಸಾದ ಮೇಲೆ ಆತ್ಮಹಿತಕ್ಕಾಗಿ ಕೆಲಸ ಮಾಡೋಣವೆಂದಾಗಲೀ, ವಯಸ್ಸಾದಾಗ ತಾನು ಮುದುಕನಾಗಿರುವ ಕಾರಣ ತನಗೆ ಯಾವ ಕಾರ್ಯವೂ ಸಾಧ್ಯವಾಗದೆಂದು ಭಾವಿಸದೆ ಆಗಿಂದಾಗ್ಗೆ ಶ್ರೀಹರಿಯನ್ನು ಧ್ಯಾನಿಸುವುದು ಸರಿಯಾದ ಮಾರ್ಗವೆಂಬ ಸಾರಾಂಶವನ್ನು ಪ್ರಹ್ಲಾದನ ಬೋಧನೆಯಲ್ಲಿ ಮನಗಾಣಬಹುದು.

ವಿಷ್ಣುವು-ಸರ್ವಭೂತಗಳಲ್ಲಿಯೂ ನೆಲೆಸಿದ್ದಾನೆ. ಆತನಲ್ಲಿ ಸದಾಕಾಲವೂ ಸ್ನೇಹವನ್ನು ಹೊಂದಿರುವುದು ಅತ್ಯಗತ್ಯವಾದದ್ದು. ಇದರಿಂದ ಅವರ ಸಮಸ್ತ ಕಷ್ಟಗಳೂ ಕಳೆಯುತ್ತವೆ. ತಾಪತ್ರಯಗಳಿಂದ ಕೂಡಿದವನಿಗೆ ಮತ್ತಷ್ಟು ಕ್ಲೇಶವನ್ನುಂಟುಮಾಡಬೇಕೆಂಬ ವಿಚಾರವು ಬುದ್ಧಿವಂತರಿಗೆ ಯೋಗ್ಯವಾದದ್ದಲ್ಲ, ಸಮಸ್ತ ವಿಶ್ವವನ್ನೂ ತನ್ನಲ್ಲಿ ಅಡಗಿಸಿಕೊಂಡಿರುವ ವಿಷ್ಣುವಿನ ವಿಕಾಸದಿಂದಲೇ ಇದೆಲ್ಲವೂ ಆಗಿರುವುದಾಗಿದೆ. ಆದ್ದರಿಂದ ಸರ್ವವಸ್ತುಗಳನ್ನೂ ಸಮಾನಭಾವದಿಂದ ಕಂಡಾಗ ಮಾತ್ರವೆ ಅಚ್ಯುತನ ಆರಾಧನೆ ಸಾಧ್ಯವಾಗುತ್ತದೆಂಬ ಉಪದೇಶವನ್ನು ಸಾರಾಂಶದಲ್ಲಿ ತಿಳಿದುಕೊಳ್ಳಬಹುದಾಗಿದೆ.

ಪ್ರಹ್ಲಾದನು ಚಿಕ್ಕಹುಡುಗನಾದರೂ ಅವನಲ್ಲಿ ತುಂಬಿದ್ದ ಅಪಾರವಾದ ಜ್ಞಾನ-ಪ್ರೌಢಿಮೆಗಳ ಪ್ರಕಟರೂಪವೇ ಇಲ್ಲಿನ ಉಪದೇಶಾಮೃತವಾಗಿದೆಯೆಂದು ಹೇಳುವುದು ಸೂಕ್ತವಾದೀತು. ತಾನು ತಿಳಿದುಕೊಂಡಿರುವುದನ್ನು ಯೋಗ್ಯರಾದ ಇತರರಿಗೂ ತಲುಪಿಸಬೇಕೆಂಬ ತವಕವು ಅವನಲ್ಲಿ ಎದ್ದುಕಾಣುತ್ತದೆ. ತನ್ನ ಸಹಪಾಠಿಗಳನ್ನು ವಿಷ್ಣುವಿನ ಮಹಿಮೆಗೆ ಒಳಪಡಿಸುತ್ತಿದ್ದ ಅವನ ಕಾರ್ಯದಿಂದ ಅವನ ಗುರುಗಳಿಗೆ ಆತಂಕವುಂಟಾಗುತ್ತದೆ. ಹುಡುಗನ ವರ್ತನೆಯಿಂದ ಬೇರೆದಾರಿ ಕಾಣದಾದ ಅವರು ದೈತ್ಯರಾಜನಿಗೆ ಸುದ್ದಿಯನ್ನು ಮುಟ್ಟಿಸುತ್ತಾರೆ.

## ವಿಷಪ್ರಾಶನ

ಗುರುಗಳ ಮೂಲಕವಾಗಿ ತನ್ನ ಮಗನ ನಡವಳಿಕೆಯನ್ನು ಕೇಳಿ ತಿಳಿದುಕೊಂಡ ಹಿರಣ್ಯಕಶ್ಯಪನು ಕನಲಿ ಕೆರಳುತ್ತಾನೆ. ತನ್ನ ವೈರಿಯ ಗುಣಗಳನ್ನೆ ಮೈಗೂಡಿಸಿಕೊಂಡ ಅವನನ್ನು ಮುಗಿಸಿಬಿಡಬೇಕೆಂಬ ಆಲೋಚನೆ ಮತ್ತೊಮ್ಮೆ ಅವನ ಮನಸ್ಸಿನಲ್ಲಿ ಮೂಡುತ್ತದೆ. ಹೀಗಾಗಿ ಅವನು ತನ್ನ ಮಗನು ಸೇವಿಸುವ ಆಹಾರದಲ್ಲಿ ವಿಷವನ್ನು ಬೆರೆಸಿ ನೀಡಲು

ಸೇವಕರಿಗೆ ಅಪ್ಪಣೆ ಮಾಡುತ್ತಾನೆ. ಭಾಗವತೋತ್ತಮನಾದ ಪ್ರಹ್ಲಾದನು ಗುಣಹೀನವಾದ ವಿಷವನ್ನು ಸ್ವಸ್ಥಚಿತ್ತನಾಗಿದ್ದು ಯಾವ ವಿಕಾರವೂ ಇಲ್ಲದೆ ಜೀರ್ಣಿಸಿಕೊಂಡು ಬಿಡುತ್ತಾನೆ.

ಪ್ರಹ್ಲಾದನಿಗೆ ವಿಷವನ್ನು ನೀಡಿದ ವಿಚಾರವು ಕೆಲವು ಕಥೆಗಳಲ್ಲಿ ಬೇರೊಂದು ತೆರನಾಗಿ ಕಂಡುಬರುತ್ತದೆ. ದಾನವೇಂದ್ರನು ತನ್ನ ಮಗನಿಗೆ ವಿಷವನ್ನು ನೀಡುವ ಕಾರ್ಯಕ್ಕೆ ಹೆಂಡತಿಯಾದ ಕಯಾದುವನ್ನು ನೇಮಿಸುತ್ತಾನೆಂದು ತಿಳಿದುಬರುತ್ತದೆ. ಇದು ಆಕೆಯು ಅವನ ತಾಯಿಯೆಂಬ ಕಾರಣಕ್ಕೋ ಅಥವಾ ಮಗನ ಮೇಲಿನ ಮೋಹದ ಕಾರಣವಾಗಿ ಅವನು ತಾಯಿಯ ವಾತ್ಸಲ್ಯಕ್ಕೆ ಒಳಗಾಗಿ ತಂದೆಯ ಮಾರ್ಗದಲ್ಲಿ ನಡೆಯಬಲ್ಲನೆಂಬ ಆಶಾಭಾವದ ಕಡೆಯ ಪ್ರಯತ್ನವಾಗಿಯೋ ಇದ್ದಿರಬಹುದು. ತಾಯಿಯೇ ಮಗನಿಗೆ ವಿಷವನ್ನು ನೀಡಿದಳೆಂಬ ವಿಚಾರದ ಹಿನ್ನೆಲೆಯಲ್ಲಿ ಮಗುವನ್ನು ಹೆತ್ತು ಹೊತ್ತು ಸಲಹುವ ಮಾತೆಯ ಪ್ರಭಾವದಿಂದ ವಿಷವೂ ಜೀರ್ಣವಾಗಬಲ್ಲುದೆಂಬ ಮಹತ್ವಪೂರ್ಣ ದನಿಯಿರುವಂತೆ ತೋರುತ್ತದೆ. ಇದೇನೇ ಇದ್ದರೂ ಕಾಲಕೂಟದಂತಹ ವಿಷವನ್ನು ಇತರ ಆಹಾರ ಪದಾರ್ಥಗಳಂತೆ ಜೀರ್ಣಿಸಿಕೊಂಡ ಪ್ರಹ್ಲಾದನ ಮನಸ್ಥೈರ್ಯದ ಗಟ್ಟಿತನವನ್ನು ಇಲ್ಲಿ ಅರಿತುಕೊಳ್ಳಬೇಕು.

## ಪಿತೃಗೌರವ

ಪ್ರಹ್ಲಾದನು ತಂದೆಯ ವಿರೋಧಿಯೇನೂ ಆಗಿರಲಿಲ್ಲ, ಆತನಿಗೆ ತಂದೆಯ ಬಗ್ಗೆ ಅಪಾರ ಗೌರವ, ಅಭಿಮಾನಗಳಿದ್ದವು. ಇದನ್ನು ವಿಷ್ಣುಪುರಾಣದಲ್ಲಿರುವ ಕೆಲವು ಪದ್ಯಗಳಿಂದ ಮನಗಾಣಬಹುದು. ಪ್ರಹ್ಲಾದನೇ ಇದನ್ನು ಹೇಳುತ್ತಾನೆ.

ಈ ಪದ್ಯಗಳನ್ನು ಹದಿನೆಂಟನೇ ಅಧ್ಯಾಯದಲ್ಲಿ ಕಾಣಬಹುದಾಗಿದೆ.

*ಪಿತಾ ಚ ಮಮ ಸರ್ವಸ್ಮಿಞ್ಜಗತ್ಯುತ್ಕೃಷ್ಟಚೇಷ್ಟಿತಃ /*
*ಏತದಪ್ಯವಗಚ್ಛಾಮಿ ಸತ್ಯಮತ್ರಾಪಿ ನಾನ್ಯತಮ್ //*

– ಈ ಜಗತ್ತಿನಲ್ಲಿ ನನ್ನ ತಂದೆ ಮಹಾ ಪರಾಕ್ರಮಿಯೂ ಹೌದು. ಇದು ನನಗೆ ಗೊತ್ತಿದೆ. ಇದು ಸತ್ಯವೇ ಸರಿ, ಹುಸಿಯಲ್ಲವೆಂದು ನುಡಿಯುವ ಪ್ರಹ್ಲಾದನ ಮಾತುಗಳು ಅವನ ಮನಸ್ಸಿನ ಕನ್ನಡಿಯಾಗಿದೆ.

*ಗುರೂಣಾಮಪಿ ಸರ್ವೇಷಾಂ ಪಿತಾ ಪರಮಕೋ ಗುರುಃ /*
*ಯದುಕ್ತಂ ಭ್ರಾನ್ತಿಸ್ತತ್ರಾಪಿ ಸ್ವಲ್ಪಾಪಿ ಹಿ ನ ವಿದ್ಯತೇ//*
*ಪಿತಾ ಗುರುರ್ನ ಸನ್ದೇಹಃ ಪೂಜನೀಯಃ ಪ್ರಯತ್ನತಃ/*
*ತತ್ರಾಪಿ ನಾಪರಾಧ್ಯಾಮೀತ್ಯೇವಂ ಮನಸಿ ಮೇ ಸ್ಥಿತಮ್//*

- ತಂದೆಯು ಸಮಸ್ತ ಗುರುಗಳಿಗೂ ಶ್ರೇಷ್ಠನಾದ ಪರಮಗುರುವೆಂದು ಹೇಳಿದಿರಷ್ಟೆ, ಆ ವಿಷಯದಲ್ಲಿ ನನಗೆ ಲವಲೇಶವಾದರೂ ಸಂದೇಹವಿಲ್ಲ. ತಂದೆಯು ಗುರು ಹೌದು, ಸಂಶಯವಿಲ್ಲ. ಆತನನ್ನು ಎಲ್ಲ ವಿಧದಿಂದಲೂ ಗೌರವಿಸಬೇಕು. ಆ ವಿಷಯದಲ್ಲಿ ನಾನೇನೂ ತಪ್ಪು ಮಾಡುತ್ತಿಲ್ಲವೆಂದು ನನ್ನ ಮನಸ್ಸಿನಲ್ಲಿ ನಂಬಿಕೆಯಿದೆಯೆಂದು ಗುರುಗಳ ಮುಂದೆ ನುಡಿದ ಅವನ ಮಾತುಗಳಿಂದ ಪುತ್ರಸ್ಥಾನದ ಮಹತ್ವವನ್ನು ಅರಿತುಕೊಳ್ಳಬಹುದಾಗಿದೆ. ತಂದೆಯಾದವನು ಎಷ್ಟೇ ದುಷ್ಟನಾಗಿದ್ದರೂ ಮಗನ ಮಮಕಾರವು ಕಾರಣವಾಗಿ ಅವನನ್ನು ಮನ್ನಿಸಬೇಕೆಂಬ ವಿವೇಕಕ್ಕೆ ಇದು ಕಾರಣವಾಗುತ್ತದೆ.

ವಿಷ್ಣುಪಾರಮ್ಯದ ಬಗ್ಗೆ ಪ್ರಹ್ಲಾದನು ಗುರುಗಳ ಮುಂದೆ ನಿವೇದಿಸುವ ಸಂದರ್ಭವು ಗುರು-ಶಿಷ್ಯ ಸಂಬಂಧದ ಅವಿಸ್ಮರಣೀಯ ಅನುಭವವಾಗಿ ಉಳಿಯಬಲ್ಲದ್ದಾಗಿದೆ. ಅವನ ಮಾತುಗಳಲ್ಲಿ ಚಿಂತನೆಯ ನೋಟವಿದ್ದಂತೆ ವಿವೇಚನೆಯ ತರ್ಕವೂ ಇದ್ದಿತ್ತೆಂದು ಹೇಳ ಬಹುದಾಗಿದೆ. ಅವನಿಗೆ ಗುರುಗಳ ತರ್ಕಸರಣಿಯು ಸಮ್ಮತವಾಗಿರಬಹುದು ಅಥವಾ ಆಗದೆಯೂ ಇರಬಹುದು. ಗುರುಗಳ ಘನತೆಯ ಮುಂದೆ ತನ್ನ ವಿಚಾರಶಕ್ತಿ ಮಹತ್ವ ವಾದದ್ದೇನಲ್ಲವೆಂಬ ಅರಿವೂ ಅವನಲ್ಲಿ ಅಡಕವಾಗಿರುವುದು ಅವನ ಮಾತುಗಳ ಸಾರಾಂಶ ದಿಂದ ತಿಳಿದುಕೊಳ್ಳಬಹುದು. ಇದು ಗುರುಭಕ್ತಿಯ ನಿದರ್ಶನವೂ ಆಗಬಹುದು. ಒಟ್ಟಿನಲ್ಲಿ ವಿಷ್ಣುವಿನ ಜಗದೀಶ್ವರ ಗುಣವೇ ಪ್ರಹ್ಲಾದನ ಮಾತುಗಳಲ್ಲಿ ಅಡಗಿದೆ ಎಂಬುದು ಸರಿಯಾದ ಮಾತಾದೀತು.

ವಿಷ್ಣುವಿನ ಬಗ್ಗೆ ಪ್ರಹ್ಲಾದನಲ್ಲಿ ಅಚಲವಾದ ಶ್ರದ್ಧೆಯಿತ್ತು, ಆತನು ವಿಶ್ವಾಧಿಪತಿ ಯೆಂಬ ಭಾವನೆಯು ಅವನಲ್ಲಿ ಗಟ್ಟಿಯಾಗಿ ನೆಲೆಯೂರಿತ್ತು. ಆದರೆ ಗುರುಗಳಾದವರಿಗೆ ಪ್ರಹ್ಲಾದನ ಚಿಂತನ ಬೋಧನದಂತಿದ್ದ ಮಾತುಗಳಿಂದ ಅಷ್ಟೇನೂ ತೃಪ್ತಿಯಾದಂತೆ ಕಂಡುಬರಲಿಲ್ಲ.

ಅವರು ತಮ್ಮನ್ನು ಸಮರ್ಥಿಸಿಕೊಳ್ಳಲು ಬೇರೆಯದೇ ಆದ ವಾದವನ್ನು ಹೂಡುತ್ತಾರೆ. ತಾವು ಪ್ರಹ್ಲಾದನನ್ನು ಕಾಪಾಡಿದವರು ಇಲ್ಲವೇ ಮೃತ್ಯುವಿನಿಂದ ಅವನನ್ನು ಪಾರು ಮಾಡಿದವರೆಂಬ ಸಮರ್ಥನೆಯನ್ನು ಅವನ ಮುಂದಿಡುತ್ತಾರೆ. ಆದರೆ ಪ್ರಹ್ಲಾದನು ಯಾರು ಯಾರನ್ನು ಕೊಲ್ಲುತ್ತಾರೆ ಅಥವಾ ಯಾರು ಯಾರನ್ನು ರಕ್ಷಿಸುತ್ತಾರೆಂಬ ಮಾತುಗಳು ಬುದ್ಧಿಯ ಮಾತುಗಳಾಗುತ್ತದೆಯೇ ಹೊರತು ಅದು ವಿವೇಕಕ್ಕೆ ಸಂಬಂಧಿಸಿದ್ದಲ್ಲ ವೆಂಬುದನ್ನು ಸ್ಪಷ್ಟಪಡಿಸುತ್ತಾನೆ.

ಕರ್ಮದಿಂದಲೇ ಎಲ್ಲವೂ ಹುಟ್ಟುವುದೆಂದೂ, ಅದರಿಂದ ಮುಂದಿನ ಮಾರ್ಗವು ಸೂಚಿತವಾಗುತ್ತದೆಂದೂ, ಸರ್ವಪ್ರಯತ್ನಪೂರ್ವಕವಾಗಿ ಶುಭಕರ್ಮಗಳ ಆಚರಣೆಯೇ ಗುರಿಯಾಗಬೇಕೆಂಬ ನಿರ್ಣಯವು ಗುರುಗಳಾದವರಿಗೆ ಹಿತವೆನ್ನಿಸಿತು. ಆದರೆ ಅವರಲ್ಲಿ ಉಂಟಾದ ಸಿಟ್ಟಿನ ವೇಗವು ಅವರ ತಾಳ್ಮೆಯನ್ನು ಹಾಳುಮಾಡಿತೆನ್ನಬೇಕು.

## ಕೃತ್ಯೆಯ ಸೋಲು

ಅವರು ವಿವೇಕವನ್ನು ಕಳೆದುಕೊಂಡರು. ತಾವು ಮಾಡುತ್ತಿರುವ ಕೃತ್ಯದ ಪರಿಜ್ಞಾನ ವಿಲ್ಲದೆ ಜ್ವಾಲಾಮಾಲೆಗಳಿಂದ ಭೀಕರವಾಗಿ ಕಾಣುವ ಕೃತ್ಯೆ ಎಂಬುವವಳನ್ನು ಸೃಷ್ಟಿಸಿ ಪ್ರಹ್ಲಾದನ ಮೇಲೆ ಪ್ರಯೋಗಿಸಿದರು. ಪ್ರಹ್ಲಾದನಿಗೆ ನೀಡಿದ ಶಿಕ್ಷೆಗಳಲ್ಲಿ ಕೃತ್ಯೆಯ ಪ್ರಸಂಗವನ್ನು ಹೊಸದೊಂದು ವಿಧಾನವೆಂದು ಹೇಳಬಹುದು.

ಪುರೋಹಿತರು ಸೃಷ್ಟಿಸಿದ ಕೃತ್ಯೆಯು ಪ್ರಹ್ಲಾದನಿಗೆ ಯಾವುದೇ ಹಾನಿಯನ್ನು ಮಾಡಲು ಸಾಧ್ಯವಾಗದೆ ತನ್ನನ್ನು ಸೃಷ್ಟಿಸಿದವರನ್ನೆ ಸುಡಲಾರಂಭಿಸಿದಳು. ಅಭಿಚಾರ ಪ್ರಯೋಗಗಳ ಪರಿಣಾಮವೇ ಈ ರೀತಿಯಾದದ್ದೆನ್ನಬೇಕು. ತನ್ನ ಗುರುಗಳನ್ನೇ ದಹಿಸುತ್ತಿರುವ ಭೀಕರ ಜ್ವಾಲಾರೂಪದಿಂದ ಅವರನ್ನು ಪಾರುಮಾಡಬೇಕೆಂದು ಅರ್ಥಾತ್ ಅವರೇ ಸಿದ್ಧಿಸಿಕೊಂಡ ಮಂತ್ರಫಲವಾದ ಬೆಂಕಿಯಿಂದ ಅವರನ್ನು ರಕ್ಷಿಸಬೇಕೆಂದು ಸರ್ವವ್ಯಾಪಿಯಾದ ಭಗವಂತನಲ್ಲಿ ಪ್ರಹ್ಲಾದನು ಪ್ರಾರ್ಥಿಸುತ್ತಾನೆ.

*ಯಥಾ ಸರ್ವೇಷು ಭೂತೇಷು ಸರ್ವವ್ಯಾಪೀ ಜಗದ್ಗುರುಃ ।*
*ವಿಷ್ಣುರೇವ ತಥಾ ಸರ್ವೇ ಜೀವನ್ತ್ವೇತೇ ಪುರೋಹಿತಾಃ ॥*

- ಸರ್ವಭೂತಗಳಲ್ಲಿ ಸರ್ವವ್ಯಾಪಿಯೂ ಜಗದ್ಗುರುವೂ ಆದ ವಿಷ್ಣುವಿರುವುದೇ ಸತ್ಯ ಇದರ ಬಲದಿಂದ ಈ ಪುರೋಹಿತರು ಬದುಕಲಿ ಎಂದು ನುಡಿದ ಪ್ರಹ್ಲಾದನ ಪ್ರಾರ್ಥನೆಗೆ ಮನ್ನಣೆ ದೊರೆತು ಅವನ ಗುರುಗಳು ಕೃತ್ಯೆಯ ಸುಡುವ ಕೆನ್ನಾಲಗೆಗಳಿಂದ ಪಾರಾದರು. ತಮ್ಮನ್ನು ಸಂಕಷ್ಟದಿಂದ ಪಾರುಮಾಡಿದ ತಮ್ಮ ಶಿಷ್ಯನ ಬಗ್ಗೆ ಅಧಿಕವಾದ ಪ್ರೀತಿ-ವಿಶ್ವಾಸಗಳನ್ನು ಹೊಂದಿದರು. ಅವರು ಅವನನ್ನು ತುಂಬು ಮನಸ್ಸಿನಿಂದ ಹರಸಿದರು. ಈ ಪ್ರಕರಣವು ಗುರುಶಿಷ್ಯರ ಬಾಂಧವ್ಯವನ್ನು ದ್ವಿಗುಣಗೊಳಿಸಿತು.

ಪರರ ಪೀಡೆಗೆ ಬಯಸುವವರು ಯಾವ ರೀತಿಯಲ್ಲಿ ತಾವೇ ಅದಕ್ಕೆ ಒಳಗಾಗು ತ್ತಾರೆಂಬುದನ್ನು ಕೃತ್ಯೆಯ ಪ್ರಸಂಗದಿಂದ ತಿಳಿದುಕೊಳ್ಳಬಹುದಾಗಿದೆ. ಅಭಿಚಾರ, ಮಂತ್ರ-ತಂತ್ರಗಳು ಭಗವಂತನ ಆರಾಧಕರ ಮೇಲೆ ಪ್ರಯೋಗವಾಗತಕ್ಕದ್ದಲ್ಲ, ಇದನ್ನು ಪಂಡಿತ ರಾದವರೂ ಅರಿತುಕೊಂಡು ಭಕ್ತಿಷ್ಠ ಮಾರ್ಗದಲ್ಲಿ ನಡೆಯಬೇಕಾದದ್ದು ಅಗತ್ಯವೆಂಬ ವಿಚಾರವು ವಿಷ್ಣುಪುರಾಣದಲ್ಲಿ ಕೃತ್ಯೆಯ ಪ್ರಸಂಗದ ಮೂಲಕವಾಗಿ ನಿರೂಪಿತವಾಗಿದೆ.

ಪ್ರಹ್ಲಾದನಿಗೆ ಕೃತ್ಯೆಯಂತಹ ಮಾಯೆಯಿಂದಲೂ ಯಾವ ಕೆಡುಕೂ ಆಗಲಿಲ್ಲ ವೆಂಬುದನ್ನರಿತ ಹಿರಣ್ಯಕಶಿಪು ಶಂಬರಾಸುರನ ಮೂಲಕವಾಗಿ ಮಗನ ಮೇಲೆ ಅನೇಕ ಮಾಯೆಗಳನ್ನು ಪ್ರಯೋಗಿಸುತ್ತಾನೆ. ಇದರಿಂದಲೂ ಪ್ರಯೋಜನ ಕಾಣದಿದ್ದಾಗ ಮತ್ತೊಮ್ಮೆ ಅವನನ್ನು ಗುರುಕುಲಕ್ಕೆ ಕಳುಹಿಸುತ್ತಾನೆ. ಇಲ್ಲಿ ಆತನಿಗೆ ಶುಕ್ರಪ್ರಣೀತವಾದ ರಾಜನೀತಿಯನ್ನು ಕಲಿಸಿಕೊಡುತ್ತಾರೆ. ಇನ್ನೊಮ್ಮೆ ತಂದೆಯ ಸಮ್ಮುಖದಲ್ಲಿ ಅವನ ಪರೀಕ್ಷೆಯು ನಡೆಯುತ್ತದೆ.

## ಕೆರಳಿದ ಕೋಪ

ತಂದೆಯ ಮುಂದೆ ತಾನು ಕಲಿತ ರಾಜನೀತಿಯ ಸಾರವನ್ನು ಒಪ್ಪಿಸುವ ಸಂದರ್ಭದಲ್ಲಿ ಪ್ರಹ್ಲಾದನು ನುಡಿದ ಮಾತುಗಳು ಮನನೀಯವಾಗಿವೆ. ಅವಿವೇಕಿಗಳಾದ, ಜಡಸ್ವಭಾವದವರಾದ, ಕೈಲಾಗದ, ರಾಜನೀತಿಯ ಗಂಧವಿಲ್ಲದವರು ಈ ಲೋಕದಲ್ಲಿ ರಾಜ್ಯಗಳನ್ನು ಭೋಗಿಸುತ್ತಿದ್ದಾರೆಂದು ಆತನು ಹೇಳುತ್ತಾನೆ. ದೇವತೆಗಳು, ಮನುಷ್ಯರು, ಪಶುಗಳು, ಪಕ್ಷಿವೃಕ್ಷ, ಸರೀಸೃಪಗಳೆಲ್ಲವೂ ಭಿನ್ನವೆಂಬಂತೆ ಕಂಡರೂ ಅನಂತನಾದ ವಿಷ್ಣುವಿನ ರೂಪವೇ ಅವೆಲ್ಲವೂ ಆಗಿರುತ್ತವೆ. ಯಾರು ಇದನ್ನು ಅರಿತಿರುವರೋ ಅವರು ಸ್ಥಾವರ ಜಂಗಮಾತ್ಮಕವಾದ ಸಮಸ್ತ ಜಗತ್ತನ್ನೂ ಆತ್ಮಸ್ವರೂಪವೆಂದು ತಿಳಿಯುವವರಾಗಿದ್ದಾರೆಂಬುದು ಆತನ ಮಾತಿನ ಸಾರವಾಗಿದೆ.

ಪ್ರಹ್ಲಾದನ ನುಡಿಗಳು ಹಿರಣ್ಯಕಶಿಪುವಿನ ಕೋಪವನ್ನು ಮತ್ತಷ್ಟು ಕೆರಳಿಸುತ್ತದೆ. ತಾನೇನು ಮಾಡುತ್ತಿರುವೆನೆಂಬ ವಿವೇಚನೆಗೂ ಅವಕಾಶವೀಯದೆ ಆತನು ತನ್ನ ಮಗನನ್ನು ಕಾಲಿಂದ ಒದೆಯುತ್ತಾನೆ. ತನ್ನ ದೃಷ್ಟಿಯಲ್ಲಿ ಮಿತಿಯ ಎಲ್ಲೆಯನ್ನು ದಾಟಿದ ಪ್ರಹ್ಲಾದನಿಗೆ ಮತ್ತೊಂದು ಘೋರವಾದ ವಿಪತ್ತನ್ನುಂಟು ಮಾಡುವ ಮಾರ್ಗವು ಅವನಿಗೆ ಹೊಳೆದಂತಾಗಿ ಅವನನ್ನು ಸಮುದ್ರದಲ್ಲಿ ಮುಳುಗಿಸಿ ಎದ್ದು ಬರದಂತೆ ಮಾಡಬೇಕೆಂದು ಆದೇಶಿಸುತ್ತಾನೆ.

ಹಿರಣ್ಯಕಶಿಪುವಿನ ಸೇವಕರು ಪ್ರಹ್ಲಾದನನ್ನು ನಾಗಪಾಶಗಳಿಂದ ಬಂಧಿಸಿ ಸಮುದ್ರದಲ್ಲಿ ಎಸೆದುಬಿಡುತ್ತಾರೆ. ಹಿಂದಿನ ಯಾವ ಉಪಾಯಗಳಿಂದಲೂ ವಧಿಸಲು ಸಾಧ್ಯವಾಗದ ಅವನನ್ನು ಬೃಹದಾಕಾರದ ಪರ್ವತಗಳಿಂದ ಮುಚ್ಚಿಬಿಡುತ್ತಾರೆ. ಮುನ್ನೀರಿನಲ್ಲಿ ಸಿಲುಕಿಸುತ್ತಾರೆ. ಅವನ ಸುತ್ತಲೂ ಸಾವಿರ ಯೋಜನಗಳವರೆಗೆ ಪರ್ವತಗಳನ್ನು ಒತ್ತಿಟ್ಟ ವಿಚಾರವನ್ನು ಪುರಾಣವು ಪ್ರಸ್ತಾಪಿಸುತ್ತದೆ. ಜಲಶಯನನಾದ ಭಗವಂತನ ಸಾತ್ತ್ವಿಕಭಕ್ತನಾದವನಿಗೆ ನೀಡಿದ ಘೋರ ಶಿಕ್ಷೆಯ ವಿಧಾನವು ಇಲ್ಲಿ ಕಂಡುಬಂದಿದೆ. ಇದಾವುದಕ್ಕೂ ವಿಚಲಿತನಾಗದೆ ಏಕಾಗ್ರಚಿತ್ತನಾಗಿ ಪ್ರಹ್ಲಾದನು ಭಗವಂತನನ್ನು ಧ್ಯಾನಿಸಿದ ಸ್ತೋತ್ರಭಾಗವನ್ನು ಇಲ್ಲಿನ ಸಂದರ್ಭಕ್ಕೆ ತಕ್ಕದ್ದೆಂದು ಹೇಳಬಹುದು.

*ನಮಸ್ತೇ ಪುಣ್ಡರೀಕಾಕ್ಷ ನಮಸ್ತೇ ಪುರುಷೋತ್ತಮ /*
*ನಮಸ್ತೇ ಸರ್ವಲೋಕಾತ್ಮನ್ ನಮಸ್ತೇ ತಿಗ್ಮಚಕ್ರಿಣೇ //*

*ನಮೋ ಬ್ರಹ್ಮಣ್ಯದೇವಾಯ ಗೋಬ್ರಾಹ್ಮಣಹಿತಾಯ ಚ /*
*ಜಗದ್ಧಿತಾಯ ಕೃಷ್ಣಾಯ ಗೋವಿನ್ದಾಯ ನಮೋ ನಮಃ //*

*ಬ್ರಹ್ಮತ್ವೇ ಸೃಜತೇ ವಿಶ್ವಂ ಸ್ಥಿತೌ ಪಾಲಯತೇ ಪುನಃ /*
*ರುದ್ರರೂಪಾಯ ಕಲ್ಪಾನ್ತೇ ನಮಸ್ತುಭ್ಯಂ ತ್ರಿಮೂರ್ತಯೇ //*

(ವಿಷ್ಣುಪುರಾಣ 19- 64, 65, 66)

- ಪುಂಡರೀಕಾಕ್ಷನೂ, ಪುರುಷೋತ್ತಮನೂ ಆದ ನಿನಗೆ ನಮಸ್ಕಾರ. ಸರ್ವ ಲೋಕಾತ್ಮನೂ ಸರ್ವರಲ್ಲಿಯೂ ಅಡಕವಾಗಿರುವವನೂ ಆದ ನಿನಗೆ ನಮಸ್ಕಾರಗಳು. ಕೃಷ್ಣನೇ, ಗೋವಿಂದನೇ ನಿನಗೆ ನಮಸ್ಕಾರ.

ಬ್ರಹ್ಮನಾಗಿ ವಿಶ್ವವನ್ನು ಸೃಷ್ಟಿ ಮಾಡುತ್ತಾ, ಸ್ಥಿತಿಕಾಲದಲ್ಲಿ ವಿಷ್ಣುವಿನ ರೂಪದಿಂದ ಪರಿಪಾಲನೆ ಮಾಡುತ್ತಾ ಕಲ್ಪಾಂತದಲ್ಲಿ ರುದ್ರನಾಗಿ ಕ್ಷಗೊಳಿಸುವ ಮೂರ್ತಿತ್ರಯ ರೂಪನಾದ ನಿನಗೆ ನಮಸ್ಕಾರ.

ಸಮುದ್ರದಲ್ಲಿ ಪರ್ವತಗಳ ನಡುವೆ ಸಿಕ್ಕಿಕೊಂಡಿದ್ದ ಪ್ರಹ್ಲಾದನು ಪರಮ ಪುರುಷನಾದ ಗೋವಿಂದನನ್ನು ಧ್ಯಾನ ಮಾಡುತ್ತಿರುತ್ತಾನೆ. ಅವನಿಗೆ ಬಾಹ್ಯದ ಯಾವ ಪರಿವೆಯೂ ಇರುವುದಿಲ್ಲ. ಶುದ್ಧವಾದ ಅವನ ಅಂತಃಕರಣದಲ್ಲಿ ಅಚ್ಯುತನು ಜ್ಞಾನಮಯನಾಗಿ ನೆಲೆಸಿರುತ್ತಾನೆ. ವಿಷ್ಣುವು ಹೃದಯಸ್ಥನಾಗಿದ್ದಾನೆ. ಪ್ರಹ್ಲಾದನ ಪ್ರಾರ್ಥನೆಯ ಪರಿಣಾಮವಾಗಿ ಅವನನ್ನು ಬಂಧಿಸಿದ್ದ ನಾಗಪಾಶಗಳ ಕಟ್ಟುಗಳೆಲ್ಲ ಕ್ಷಣಾರ್ಧದಲ್ಲಿ ಹರಿದುಹೋಗುತ್ತವೆ. ಸಮುದ್ರದ ಅಲೆಗಳು ಮೇಲೆದ್ದು ಮಹಾಸಾಗರವು ಕ್ಷೋಭೆಗೊಳಗಾಗುತ್ತದೆ. ದೈತ್ಯರು ತನ್ನ ಮೇಲೆ ಪೇರಿಸಿಟ್ಟಿದ್ದ ಪರ್ವತಗಳನ್ನು ಲೀಲಾಜಾಲವಾಗಿ ತಳ್ಳಿಹಾಕಿದ ಪ್ರಹ್ಲಾದನು ನಿದ್ರೆಯಿಂದ ಎದ್ದು ಬಂದವನಂತೆ ಸಮುದ್ರಜಲದಿಂದ ಮೇಲೆದ್ದು ಬರುತ್ತಾನೆ.

ಪ್ರಹ್ಲಾದನು ಪುರುಷೋತ್ತಮನನ್ನು ಸ್ತೋತ್ರಮಾಡಿದ ರೀತಿಯು ನಮ್ಮ ಮನಸ್ಸಿನಲ್ಲಿ ಭಗವಂತನ ಸಹಸ್ರನಾಮಾವಳಿಯ ಚಿತ್ರಣವನ್ನು ಮೂಡಿಸುತ್ತದೆ. ವಿಷ್ಣು ಪುರಾಣದ ರಮಣೀಯವಾದ ಈ ಭಾಗವು ಕೃತಿಯ ಮೌಲ್ಯವನ್ನು ಅಧಿಕಗೊಳಿಸಿರುತ್ತದೆ. ದಯಾಮಯ ನಾದ ಭಗವಂತನಲ್ಲಿ ನಮ್ಮ ಮನಸ್ಸನ್ನು ತಲ್ಲೀನಗೊಳಿಸಿಕೊಳ್ಳುವ ವಿಧಾನಕ್ಕೆ ಇದೊಂದು ಉದಾಹರಣೆಯಾಗಿದೆ.

## ಭಗವಂತನ ಸಾಕ್ಷಾತ್ಕಾರ

ಪ್ರಹ್ಲಾದನ ಪರಮಭಕ್ತಿಗೆ ಸಾಕ್ಷಾತ್ಕಾರವುಂಟಾಗಿ ಆತನು ಪರಮಾತ್ಮನನ್ನು ಕಂಡ ಕೂಡಲೇ ತನ್ನ ತೊದಲುನುಡಿಗಳಿಂದ ಸ್ತುತಿಸುತ್ತಾನೆ. ಅನೇಕ ಬಾರಿ 'ನಮೋಸ್ತು ವಿಷ್ಣುವೇ' ಎಂದು ಹೇಳಿಕೊಳ್ಳುವ ಪರಿಯು ಪ್ರಹ್ಲಾದನ ತದೇಕಚಿತ್ತಭಾವವನ್ನು ತೋರ್ಪಡಿ ಸುತ್ತದೆ. ತನ್ನನ್ನು ಕೃಪೆಯಿಂದ ನೋಡಿ ಪಾವನಗೊಳಿಸಬೇಕೆಂದು ಅವನು ಪ್ರಾರ್ಥಿಸುತ್ತಾನೆ. ತನ್ನ ಭಕ್ತನ ಮೊರೆಯನ್ನು ಆಲಿಸಿದ ಭಗವಂತನು ಅವನಿಗೆ ಇಷ್ಟವಾದ ವರವನ್ನು ಬೇಡಿ ಕೊಳ್ಳುವಂತೆ ತಿಳಿಸುತ್ತಾನೆ.

ತನ್ನ ಭಕ್ತನಾದವನಿಗೆ ತನಗೆ ಮನಸ್ಸಿಗೆ ಬಂದ ವರವನ್ನು ಬೇಡಿಕೊಳ್ಳಲು ಅವಕಾಶ ನೀಡಿದ್ದು ಅವನ ಮಾನಸಿಕ ಸ್ಥಿತಿಯನ್ನು ಪರೀಕ್ಷಿಸಿದಂತೆಯೂ ಆಗಿರಬಹುದೆನ್ನಿಸು ತ್ತದೆ. ಇಲ್ಲಿಯವರೆಗೆ ಪರಿಪರಿಯ ದಂಡನೆಗಳಿಂದ ತನ್ನನ್ನು ಕೊಲ್ಲಲು ಬಯಸಿದ

ತಂದೆಯ ವಿರುದ್ಧವಾಗಿ ಪ್ರಹ್ಲಾದನು ಬೇಡಬಹುದೆಂಬ ಭಾವನೆ ಒಂದು ಕ್ಷಣ ಮಾತ್ರ ಮನಸ್ಸಿನಲ್ಲಿ ಸುಳಿಯಬಹುದು. ಆದರೆ ಪ್ರಹ್ಲಾದನು ಈ ಸಮಯದಲ್ಲಿ ಬೇಡಿಕೊಂಡದ್ದು ತನ್ನ ತಂದೆಗೆ ಘೋರವಾದ ಶಿಕ್ಷೆಯಾಗಬೇಕೆಂದಾಗಲೀ, ತನ್ನ ಸ್ವಾರ್ಥಕ್ಕೆ ಅಗತ್ಯವಾದ ಭೋಗಸಾಮ್ರಾಜ್ಯವನ್ನಾಗಲೀ ಆಗಿರಲಿಲ್ಲ. ಅಪರೂಪವಾದ ಪರಮೋತ್ಕೃಷ್ಟವಾದ ಕೋರಿಕೆಯನ್ನು ಆತನು ಭಗವಂತನ ಮುಂದಿಡುತ್ತಾನೆ. ವಿಷ್ಣುಪರವಾದ ತನ್ನ ಸ್ತುತಿಯು ಹೆಚ್ಚಾದಂತೆ ತನ್ನ ತಂದೆಯಲ್ಲಿನ ದ್ವೇಷವು ಅಧಿಕಗೊಂಡಿತೆಂಬುದಾಗಿಯೂ, ಅದರಿಂದಾಗಿ ಆತನಲ್ಲಿ ಪಾಪದ ಮೊತ್ತವು ಬೆಳೆಯಿತೆಂದೂ ನಿವೇದಿಸುತ್ತಾನೆ. ತನ್ನ ತಂದೆಗೆ ಅಂಟಿಕೊಂಡ ಪಾಪವು ನಾಶವಾಗಲೆಂದು ಪ್ರಾರ್ಥಿಸಿಕೊಳ್ಳುತ್ತಾನೆ. ತನ್ನ ಆದರ್ಶವನ್ನು ಪ್ರಕಟಿಸಿದ್ದಾನೆ. ಮಕ್ಕಳಿಗಾಗಿ ತಂದೆತಾಯಿಗಳು ಬೇಡಿಕೊಳ್ಳುವ ಸಾಮಾನ್ಯ ವಿಚಾರಕ್ಕೆ ಹೊರತಾದ ಅಸಾಮಾನ್ಯತೆಯನ್ನು ಮೆರೆದಿದ್ದಾನೆ.

*ನಾಥ ಯೋನಿಸಹಸ್ರೇಷು ಯೇಷು ಯೇಷು ವ್ರಜಾಮ್ಯಹಮ್ /*
*ತೇಷು ತೇಷ್ವಚ್ಯುತಾ ಭಕ್ತಿರಚ್ಯುತಾಸ್ತು ಸದಾ ತ್ವಯಿ //*

- ಒಡೆಯನೇ, ಸಾವಿರಾರು ಜನ್ಮಗಳಲ್ಲಿ ಹೇಗೆಯೇ ಹುಟ್ಟಿದರೂ ನಿನ್ನಲ್ಲಿ ಚ್ಯುತವಾಗದಂತೆ ನಾಶವಾಗದಂತಹ ಭಕ್ತಿಯು ಸದಾ ನೆಲೆಸಿರುವಂತೆ ಕರುಣಿಸು ಎಂಬುದಾಗಿ ಪ್ರಹ್ಲಾದನು ತನ್ನ ತಂದೆಗಂಟಿದ ಪಾಪದಿಂದ ಮುಕ್ತಿ ಸಿಗುವಂತೆ ಕೇಳಿಕೊಳ್ಳುವುದು ಒಂದು ಮಹತ್ತರವಾದ ಅಂಶವಾಗಿರುತ್ತದೆ. ಇಲ್ಲಿ ಹಿರಣ್ಯಕಶ್ಯಪನು ಹರಿದ್ವೇಷದ ಕಾಳಿಕೆಯನ್ನು ಕಳೆದುಕೊಂಡು ಪಾವನವಾಗುವಿಕೆಯು ವಾಸ್ತವವಾಗುತ್ತದೆ. ಹಾಗಾಗಿ ಅವನು ಮತ್ತೆ ಹರಿಯ ಭಕ್ತನಾಗುವತ್ತ ನಡೆಯುವಲ್ಲಿ ಅಡ್ಡಿಯೇನಿಲ್ಲ.

ತನ್ನ ಸ್ವಾಮಿಯಿಂದ ಅನನ್ಯವಾದ ವರವನ್ನು ಪಡೆದುಕೊಂಡ ಬಳಿಕ ಪ್ರಹ್ಲಾದನು ತಂದೆಯ ಬಳಿಗೆ ಬರುತ್ತಾನೆ. ಅವನ ಪಾದಗಳಿಗೆ ವಂದಿಸುತ್ತಾನೆ. ಮಗನು ಬದುಕಿ ಬಂದದ್ದು ತಂದೆಯಾದವನಿಗೂ ಹಿತವೆನ್ನಿಸುತ್ತದೆ. ಅಸುರರಾಜನು ಮಗನನ್ನು ಅತಿಶಯವಾಗಿ ಪ್ರೀತಿಸುತ್ತಾನೆ. ಮುಂದೆ ಕಾಲಲಬ್ಧಿ ಒಳಗೊಂಡಾಗ ನರಸಿಂಹಾವತಾರವಾಗಿ ಹಿರಣ್ಯಕಶ್ಯಪನ ವಧೆಯಾಗುತ್ತದೆ. ಆಗ ಪ್ರಹ್ಲಾದನು ಪಟ್ಟವನ್ನೇರಿ ರಾಜನಾಗುತ್ತಾನೆ ಎಂದು ವಿಷ್ಣುಪುರಾಣದಲ್ಲಿ ವಿವರಗೊಂಡಿದೆ.

## ಒಟ್ಟು ನೋಟ

ನರಸಿಂಹಾವತಾರದ ಕಥೆಯನ್ನು ನಿರೂಪಿಸುವ ಪುರಾಣಗಳಲ್ಲಿ ವಿಷ್ಣುಪುರಾಣಕ್ಕೆ ಇತರ ಪುರಾಣಗಳಿಗಿಂತ ಪ್ರತ್ಯೇಕವಾದ ಪ್ರಾಶಸ್ತ್ಯವಿರುವುದು ಪರಿಶೀಲನೆಯಿಂದ ಮನದಟ್ಟಾಗುತ್ತದೆ. ನರಸಿಂಹನ ಸ್ತಂಭೋದ್ಭವಪ್ರಸಂಗದಿಂದ ಇದು ಹೊರತಾಗಿದೆ. ಇದರಲ್ಲಿ ಬರುವ ವಿವರಗಳು ವಿಷ್ಣುವಿನ ಮಹಿಮೆಯನ್ನು ನಿರೂಪಿಸುತ್ತಿವೆ. ಶಿಷ್ಟಪಾಲನೆಯ ವಿಚಾರಗಳನ್ನು ಪೋಷಿಸುತ್ತಿವೆ. ಪ್ರಹ್ಲಾದನ ಸಂರಕ್ಷಣೆಗೆ ಇಲ್ಲಿ ಹೆಚ್ಚಿನ ಅವಕಾಶ ನೀಡಲಾಗಿದೆ.

ಭಗವಂತನ ಉಗ್ರವಾದ ಸ್ವಭಾವದಿಂದ ಕೂಡಿದ ವಿಚಿತ್ರ ಸ್ವರೂಪದ ಅಗತ್ಯತೆಯನ್ನು ಇಲ್ಲಿ ಗಹನವಾಗಿ ಪರಿಗಣಿಸಲಾಗಿಲ್ಲ. ಭಾಗವತ, ನರಸಿಂಹ ಮುಂತಾದ ಪುರಾಣಗಳಲ್ಲಿ ನರಸಿಂಹನ ಸ್ತಂಭೋದ್ಭವ ಘಟನೆಯು ಪ್ರಭಾವಯುತವಾಗಿ ಬೆಳವಣಿಗೆಗೊಂಡು ನಿರೂಪಣೆಯಾಗಿದ್ದರೂ ವಿಷ್ಣುಪುರಾಣವು ತನ್ನ ಸಹಜತೆಯಿಂದ ಆಚೆಗೆ ಬರದೆ ಹಾಗೆಯೇ ಉಳಿದುಕೊಂಡಿರಬೇಕು. ವಿಷ್ಣುವಿನ ೨೪ ವಿಶಿಷ್ಟವಾದ ಹೆಸರುಗಳಲ್ಲಿ ನರಸಿಂಹನಮೂ ಒಂದಾಗಿದೆ. ಇಲ್ಲಿ ಕೇವಲ ಮಾನವಾಕೃತಿಯ ಕಲ್ಪನೆ ಗರಿಗೆದರುತ್ತದೆ.

ಈ ರೀತಿಯ ಒಂದು ಕಾಲಘಟ್ಟದಲ್ಲಿ ವಿಷ್ಣುಪುರಾಣದ ನರಸಿಂಹನನ್ನಿರಿಸಿ ಆತನ ರೂಪ ವಿಶ್ಲೇಷಣೆಯನ್ನು ಅರಿತುಕೊಳ್ಳಲು ತಕ್ಕ ಮಟ್ಟಿಗೆ ನೆರವಾಗಿದೆ ಎಂಬುದು ಸತ್ಯಕ್ಕೆ ಹತ್ತಿರವಾದ ಮಾತಾದೀತು.

## ಪ್ರಹ್ಲಾದನು ಮಾಡಿದ ವಿಷ್ಣು ಸ್ತೋತ್ರ

*ರೂಪಂ ಮಹತ್ತೇ ಸ್ಥಿತಮತ್ರ ವಿಶ್ವಂ*
*ತತಶ್ಚ ಸೂಕ್ಷ್ಮಂ ಜಗದೇತದೀಶ ।*
*ರೂಪಾಣಿ ಸರ್ವಾಣಿ ಚ ಭೂತಭೇದಾ -*
*ಸ್ತೇಷ್ವನ್ತರಾತ್ಮಾಖ್ಯಮತೀವ ಸೂಕ್ಷ್ಮಮ್ ॥*

*ತಸ್ಮಾಚ್ಚ ಸೂಕ್ಷ್ಮಾದಿವಿಶೇಷಣಾನಾ -*
*ಮಗೋಚರೇ ಯತ್ಪರಮಾತ್ಮರೂಪಮ್ ।*
*ಕಿಮಪ್ಯಚಿನ್ತ್ಯಂ ತವ ರೂಪಮಸ್ತಿ -*
*ತಸ್ಮೈ ನಮಸ್ತೇ ಪುರುಷೋತ್ತಮಾಯ ॥*

- ಈ ವಿಶ್ವವು ನಿನ್ನ ಸ್ಥೂಲರೂಪವಾಗಿದೆ. ಈ ಭೂಮಂಡಲವು ಅದಕ್ಕಿಂತ ಸೂಕ್ಷ್ಮವಾದ ರೂಪವನ್ನುಳ್ಳದ್ದು. ಇಲ್ಲಿರುವ ಸಕಲ ಪ್ರಾಣಿಗಳೂ ನಿನ್ನ ರೂಪಗಳೇ ಆಗಿವೆ. ಅವುಗಳಲ್ಲೆಲ್ಲಾ ಅಂತರಾತ್ಮನಾಗಿರುವುದು ನಿನ್ನ ಅತ್ಯಂತ ಸೂಕ್ಷ್ಮ ಸ್ವರೂಪ.

ಸ್ಥೂಲ, ಸೂಕ್ಷ್ಮ, ಅತಿಸೂಕ್ಷ್ಮ ಮುಂತಾದ ವಿಶೇಷಣಗಳಿಗೆ ನಿಲುಕದ ಅಚಿಂತ್ಯವಾದ ನಿನ್ನ ಯಾವ ಪರಮಾತ್ಮ ಸ್ವರೂಪವಿದೆಯೋ ಅಂತಹ ಪುರುಷೋತ್ತಮನಾದ ನಿನಗೆ ಅನಂತ ನಮಸ್ಕಾರಗಳು.

( ವಿಷ್ಣು ಪುರಾಣದಿಂದ )



ಅಧ್ಯಾಯ - 4

# ನರಸಿಂಹ ಪುರಾಣ

*ಹರಿಃ ಸುರೇಶೋ ನರಲೋಕಪೂಜಿತೋ ।*
*ಹಿತಾಯ ಲೋಕಸ್ಯ ಚರಾಚರಸ್ಯ ॥*
*ಕೃತ್ವಾ ವಿರೂಪಂ ಚ ಪುರಾತ್ಮಮಾಯಯಾ ।*
*ಹಿರಣ್ಯಕಂ ದುಃಖಕರಂ ನಖೈರ್ಭಿನತ್ ॥*

- ದೇವತೆಗಳಿಗೆ ಒಡೆಯನಾದ ಶ್ರೀಹರಿಯನ್ನು ನರಲೋಕದ ಮನುಜರೆಲ್ಲರೂ ಪೂಜಿಸುತ್ತಿದ್ದಾರೆ. ಈತನು ಚರಾಚರಾತ್ಮಕವಾದ ಜಗತ್ತಿಗೆ ಹಿತವನ್ನುಂಟುಮಾಡುವುದಕ್ಕಾಗಿ ತನ್ನ ಮಾಯೆಯ ರೂಪವಾದ ನರಸಿಂಹಾವತಾರವನ್ನೆತ್ತುತ್ತಾನೆ, ಲೋಕದ ಜನಕ್ಕೆ ದುಃಖವನ್ನುಂಟು ಮಾಡುತ್ತಿದ್ದ ಹಿರಣ್ಯಕಶ್ಯಪನನ್ನು ಆಯುಧ ಶ್ರೇಷ್ಠದಂತೆ ಕಂಗೊಳಿಸುತ್ತಿದ್ದ ತನ್ನ ಉಗುರುಗಳಿಂದ ಸೀಳಿಹಾಕುತ್ತಾನೆ.

ಉಪಪುರಾಣಗಳಲ್ಲೊಂದಾಗಿ ಪ್ರಸಿದ್ಧವಾದ ನರಸಿಂಹ ಪುರಾಣದಲ್ಲಿ ಈ ಪದ್ಯವು ಉಕ್ತವಾಗಿದೆ. ಇದನ್ನು ಸೂತಪುರಾಣಿಕರು ಭಾರದ್ವಾಜ ಮುನಿಗಳಿಗೆ ಹೇಳಿದ್ದಾರೆ. ಇದಕ್ಕೂ ಪೂರ್ವದಲ್ಲಿ ಮಾರ್ಕಂಡೇಯ ಮುನಿಗಳು ಸಹಸ್ರಾನೀಕರಾಯನಿಗೆ ಇದನ್ನು ಹೇಳಿದ್ದರು. ನರಸಿಂಹಾವತಾರದ ಹಿರಿಮೆಯನ್ನು ಅರ್ಥಪೂರ್ಣವಾಗಿ ವಿವರಿಸುವ ಈ ಪದ್ಯವನ್ನೊಳಗೊಂಡ ನರಸಿಂಹ ಪುರಾಣವು ಅದರ ಕಾಲ, ಹಿರಿಮೆ, ಪುರಾಣಗಳಲ್ಲಿ ಅದಕ್ಕಿರುವ ವಿಶಿಷ್ಟವಾದ ಸ್ಥಾನದ ಕಾರಣಗಳಿಂದಾಗಿ ವೈಷ್ಣವ ಉಪಪುರಾಣಗಳಲ್ಲಿ ಮೇಲ್ತರದ ಸ್ಥಾನವನ್ನು ಗಳಿಸಿದೆ. ಪುರಾಣ ಪ್ರಪಂಚದಲ್ಲಿ ಗಮನಾರ್ಹ ಪಾತ್ರವನ್ನು ಹೊಂದಿದೆ.

# ಉಪ ಪುರಾಣಗಳ ವಿಶಿಷ್ಟತೆ

ಪುರಾಣಗಳನ್ನು 'ಮಹಾಪುರಾಣಗಳು' 'ಉಪಪುರಾಣ'ಗಳೆಂಬ ಎರಡು ವರ್ಗೀಕರಣದಲ್ಲಿ ಅಧ್ಯಯನ ಮಾಡಬಹುದು. ಮಹಾಪುರಾಣಗಳನ್ನು ಸಾಂಪ್ರದಾಯಿಕವಾದ ಸಂಖ್ಯೆಗೆ ಅನುಗುಣವಾಗಿ ಹದಿನೆಂಟು ಎಂದು ಹೇಳಲಾಗುತ್ತಿದೆ. ಇದರ ಸಾಹಿತ್ಯ ವ್ಯಾಪ್ತಿಯು ಇನ್ನೂ ಆಚೆಗೆ ಹರಡಿರಬಹುದಾದರೂ ಇದನ್ನು ಇಷ್ಟಕ್ಕೆ ನಿಗದಿಗೊಳಿಸಲಾಗಿದೆ. ಉಪ ಪುರಾಣಗಳೂ ಸಹ ಹದಿನೆಂಟರ ಸಂಖ್ಯೆಗೆ ಒಳಪಡುತ್ತವೆ. ಇವುಗಳಲ್ಲಿ ಕೆಲವು ಉಪ ಪುರಾಣಗಳು ಪ್ರಮುಖ ಸ್ಥಾನವನ್ನು ಗಳಿಸಿವೆ. ಹಾಗೆಯೇ ಪ್ರಮಾಣದ ದೃಷ್ಟಿಯಿಂದಲೂ ಇವು ವಿಸ್ತಾರವಾಗಿರುವುದು ಗಮನಕ್ಕೆ ಬರುತ್ತವೆ. ಮಹಾಪುರಾಣಗಳ ಕಾಲದಲ್ಲಿಯೇ ಹಲವು ಉಪಪುರಾಣಗಳ ರಚನೆಯಾಗಿರಬಹುದು. ಆದರೆ ಒಟ್ಟಾಗಿ ಎಲ್ಲ ಉಪ ಪುರಾಣಗಳಿಗೂ ಮಹಾಪುರಾಣಗಳಿಗಿಂತ ತುಸುವೇ ಕಡಮೆಯಾದ ಸ್ಥಾನವಿದ್ದು ಇದರ ಅಧ್ಯಯನ ಸಾಗಿದೆ.

ಉಪಪುರಾಣಗಳನ್ನು ಉಲ್ಲೇಖಿಸಲಾಗಿರುವ ಪುರಾಣಗಳು, ಸ್ಮೃತಿ ಗ್ರಂಥಗಳು ನಮ್ಮ ಗಮನಕ್ಕೆ ಬಂದಿವೆ. ಇವುಗಳ ಹೆಸರುಗಳಿಗೆ ಸಂಬಂಧಿಸಿದ ಬೇರೆ ಬೇರೆ ಕೋಷ್ಟಕಗಳನ್ನು ಕೂರ್ಮ ಪುರಾಣ, ಏಕಾಮ್ರ ಮತ್ತು ಬೃಹದ್ಧರ್ಮ ಉಪಪುರಾಣಗಳು ನೀಡುತ್ತಿವೆ. ಇದೇ ರೀತಿ ಇನ್ನಿತರ ಪಟ್ಟಿಗಳೂ ಇದ್ದಿರಬೇಕು. ಇದೆಲ್ಲವನ್ನೂ ಕ್ರೋಡೀಕರಿಸಿದರೆ ಹದಿನೆಂಟಕ್ಕೂ ಹೆಚ್ಚಾದ ಉಪಪುರಾಣಗಳು ದೊರೆಯುವಂತಾಗುತ್ತದೆ. ಇದರಿಂದ ಹದಿನೆಂಟರ ಸಂಖ್ಯೆಯನ್ನು ಮೀರಿದ ಉಪಪುರಾಣಗಳಿದ್ದು ಅವುಗಳಲ್ಲಿ ಎಷ್ಟೋ ಅಳಿದುಹೋಗಿರಬೇಕೆಂಬ ಸಂಗತಿ ಮನದಟ್ಟಾಗುತ್ತದೆ.

ಕೂರ್ಮಪುರಾಣ, ಗರುಡಪುರಾಣಗಳಲ್ಲಿನ ಹಲವೊಂದು ದೃಷ್ಟಾಂತಗಳು, ಬಲ್ಲಾಳಸೇನನ ದಾನಸಾಗರದಲ್ಲಿರುವ ಪ್ರಮಾಣಗಳು ಉಪಪುರಾಣಗಳ ರಚನೆಯ ಕಾಲದ ಸುಳಿವನ್ನು ನೀಡುವಂತಿವೆ. ಮತ್ಸ್ಯಪುರಾಣವು ನಾರಸಿಂಹ, ನಂದಿ, ಶಾಂಬ ಮತ್ತು ಆದಿತ್ಯಗಳೆಂಬ ನಾಲ್ಕು ಪುರಾಣಗಳನ್ನು ಲೋಕಪ್ರತಿಷ್ಠೆಗಳಿಸಿದ ಸಾಲಿಗೆ ಸೇರಿಸುತ್ತವೆ. ಈ ಎಲ್ಲ ಸಾಕ್ಷ್ಯಾಧಾರಗಳೂ ಉಪಪುರಾಣಗಳ ರಚನೆಯ ಕಾಲವನ್ನು ಕ್ರಿ.ಶ. ೬೫೦ರಿಂದ ೮೫೦ರ ನಡುವೆ ನಿಲ್ಲಿಸಬುದಾದರೂ ಇದಮಿತ್ಥಂ ಎಂದು ಹೇಳುವ ಸಾಹಸ ಮಾಡುವಂತಿಲ್ಲ.

ಉಪಪುರಾಣಗಳ ರಚನಾ ಕಾಲವೆಂಬುದು ಎಲ್ಲ ಕೃತಿಗಳ ಒಟ್ಟು ರಚನೆಯ ಅರ್ಥದಲ್ಲಿ ಬಳಕೆಯಾಗಿರುವ ಮಾತಾಗಲಾರದು. ಬೇರೆ ಬೇರೆ ಪಂಥಗಳಿಗೆ, ಪ್ರತ್ಯೇಕವಾದ ಪ್ರಾಂತಗಳಿಗೆ ಒಳಪಡುವ ಉಪಪುರಾಣಗಳ ವರ್ಗೀಕರಣ ಕಾಲವೆಂಬುದು ನಿರ್ದಿಷ್ಟವಾಗಿ ಗೊತ್ತು ಪಡಿಸಿದ ಕಾಲವೊಂದನ್ನು ಹೇಳುತ್ತಿಲ್ಲ. ಇವುಗಳಲ್ಲಿ ನಾರಸಿಂಹ, ನಂದಿ, ಶಾಂಬ ಮತ್ತು ಆದಿತ್ಯ ಪುರಾಣಗಳು ಮಾತ್ರ ಪ್ರಾಚೀನ ಕಾಲಕ್ಕೆ ಸೇರಿದವೆಂಬುದು ಮುಖ್ಯವಾದ ವಿಷಯವಾದೀತು.

ಅತ್ಯಂತ ಪ್ರಾಚೀನ ಕಾಲಕ್ಕೆ ಸೇರಿದ ಉಪಪುರಾಣವೆಂಬುದು ಯಾವುದೇ ಇದ್ದಿರ ಬಹುದಾದರೂ ವರ್ಗೀಕರಣ ಕಾರ್ಯವು ಮುಗಿದ ನಂತರವೇ ಇದು ಅಸ್ತಿತ್ವಕ್ಕೆ ಬಂದಿರಬೇಕು. ಸಂಸ್ಕೃತ ಭಾಷೆಯಲ್ಲಿ ಶ್ರೇಷ್ಠವಾದ ಕೃತಿಯಾಗಿರುವ ಅಮರಕೋಶವು ಉಪಪುರಾಣಗಳನ್ನು ಹೆಸರಿಸುವುದಿಲ್ಲ. ವಿಷ್ಣು, ಮಾರ್ಕಂಡೇಯ ಪುರಾಣಗಳಲ್ಲಿ ಹದಿನೆಂಟು ಪುರಾಣಗಳ ಹೆಸರಿನ ಪಟ್ಟಿಯಿರುತ್ತದೆಯಾದರೂ ಉಪಪುರಾಣಗಳ ಪ್ರಸ್ತಾಪವಿಲ್ಲ. ಈ ಹಲವು ಕಾರಣಗಳಿಂದಲೂ ಮತ್ತು ಮಹಾಪುರಾಣಗಳ ವಸ್ತುವಿನೊಂದಿಗೆ ಉಪಪುರಾಣಗಳನ್ನು ಹೋಲಿಸಿ ನೋಡಬಹುದಾದ ಪ್ರಾಮಾಣ್ಯದಿಂದಲೂ ಉಪಪುರಾಣಗಳು ಮಹಾಪುರಾಣಗಳ ನಂತರವೇ ರಚಿತವಾಗಿದೆಯೆನ್ನಬಹುದು.

ಪುರಾಣಗಳು ಹದಿನೆಂಟು. ಅವು ನಿರೂಪಿಸಿದ ಮುಖ್ಯವಾದ ಪಂಥಗಳು ಹಲವೊಂದು. ಇವುಗಳಿಂದ ಹುಟ್ಟಿಕೊಂಡ ಉಪಪಂಥಗಳು ಇನ್ನೂ ಕೆಲವಾರು. ಈ ಉಪಪಂಥಗಳು ತಮ್ಮ ದೇವತೆಗಳನ್ನು ಮುಖ್ಯಪಂಥದ ದೇವತೆಗಳಲ್ಲಿ ಒಂದಲ್ಲ ಒಂದು ರೀತಿ ಐಕ್ಯಗೊಳಿಸುವ ಉದ್ದೇಶವನ್ನು ಹೊಂದಿರುವುದು. ಈಗಾಗಲೇ ಅಸ್ತಿತ್ವದಲ್ಲಿದ್ದ ಪುರಾಣಗಳಲ್ಲಿ ಪ್ರಕ್ಷೇಪಗೊಂಡ ಅಧ್ಯಾಯಗಳು ಸೇರ್ಪಡೆಯಾದವು. ಇದರ ಪರಿಣಾಮವೆಂದರೆ ಮುಖ್ಯಪುರಾಣದಿಂದ ಮತ್ತೊಂದು ಸ್ವತಂತ್ರ ಕೃತಿಯ ಆವಿಷ್ಕಾರವಾದದ್ದು. ಇವಕ್ಕೂ ಪುರಾಣಗಳೆಂಬ ಹೆಸರೇ ಬಳಕೆಯಾಯಿತು. ಕಾಲಕ್ರಮದಲ್ಲಿ ಇವುಗಳ ಸಂಖ್ಯೆಯೂ ಅಧಿಕವಾಯಿತು. ಹೊಸದಾದ ಪುರಾಣಗಳಿಗೆ ಹದಿನೆಂಟರ ಸ್ಥಾನಮಾನವನ್ನು ಕೊಡಲು ಸಾಧ್ಯವಾಗದೆಂಬ ವಿಚಾರವು ಪ್ರಬಲವಾಗಿರಬೇಕು. ಈಗಾಗಲೇ ಹೊಸ ಪುರಾಣಗಳು ಪ್ರಸಿದ್ಧಿಗೆ ಬಂದುಬಿಟ್ಟಿದ್ದವು. ಹೀಗಾಗಿ ಹದಿನೆಂಟು ಮಹಾ ಪುರಾಣಗಳಲ್ಲಿ ಯಾವುದಾದರೊಂದರಿಂದ ಇವು ಜನಿಸಿದ್ದೆಂಬ ಸಿದ್ಧಾಂತವು ಇವುಗಳ ಬಗ್ಗೆ ಹುಟ್ಟಿಕೊಂಡಿದ್ದಿರಬೇಕು. ಈ ಸಿದ್ಧಾಂತವನ್ನು ಮತ್ಸ್ಯ ಪುರಾಣವು ಪ್ರತಿಪಾದಿಸಿದ್ದು ಇದಕ್ಕೆ ಕಾಲಕಳೆದಂತೆ ಮಹತ್ವ ದೊರೆತಿದೆ. ಇದರಿಂದಾಗಿ ಹೊಸ ಪುರಾಣ ಕೃತಿಗಳಿಗೆ ಪ್ರಾಮಾಣ್ಯವೊಂದು ಸಿದ್ಧವಾದಂತಾಗಿರುವುದಲ್ಲದೆ ಹದಿನೆಂಟು ಪುರಾಣಗಳ ಪ್ರತಿಷ್ಠೆಯನ್ನೂ ಕಾಪಾಡಿದಂತಾಗಿದೆ.

ಹೊಸ ಪುರಾಣಕೃತಿಗಳೆಲ್ಲದಕ್ಕೂ ಉಪಪುರಾಣಗಳೆಂಬ ಹೆಸರನ್ನು ನೀಡಿ ಪ್ರಸಿದ್ಧವಾದ ಹದಿನೆಂಟು ಪುರಾಣಗಳ ಪರಿಶಿಷ್ಟವೆಂದು ಮುಂದಿನ ಕಾಲದಲ್ಲಿ ಭಾವಿಸಲಾಗಿದೆ. ಕೆಲವೊಂದು ಹೊಸ ಪುರಾಣ ಕೃತಿಗಳು ವಸ್ತುತಃ ಒಂದಿಲ್ಲೊಂದು ಅಷ್ಟಾದಶ ಪುರಾಣಗಳ ಪರಿಶಿಷ್ಟಗಳಾಗಿಯೇ ಕಂಡುಬರುವ ಇಲ್ಲವೇ ಸ್ವತಂತ್ರ ಕೃತಿಗಳಾಗಿದ್ದರೂ ತಮ್ಮನ್ನು ತಾವೇ ಉಪ ಪುರಾಣಗಳೆಂದು ಕರೆದುಕೊಂಡಿರುವ ವಿಚಾರವು ಗಮನಕ್ಕೆ ಬರವಂತಿದೆ.

ಭಾಗವತ ಸಂಪ್ರದಾಯಕ್ಕೆ ಸಮೀಪರಾದ ಪಾಂಚರಾತ್ರರಿಂದ ನಿರ್ಮಿತವಾದದ್ದೆಂದು ಹೇಳಲಾಗುವ ನರಸಿಂಹ ಪುರಾಣವು ವೈಷ್ಣವ ಪುರಾಣಗಳ ಗುಂಪಿಗೆ ಸೇರುತ್ತದೆ. ವೈಷ್ಣವ ಉಪಪುರಾಣಗಳಲ್ಲಿ ಇತರ ಮುಖ್ಯವಾದ ಕೃತಿಗಳಾಗಿ ವಿಷ್ಣುಧರ್ಮ, ವಿಷ್ಣು ಧರ್ಮೋತ್ತರ, ಬೃಹನ್ನಾರದೀಯ ಮತ್ತು ಕ್ರಿಯಾಯೋಗಸಾರಗಳು ಮಹತ್ವ ಪಡೆದಿವೆ.

ವಿಷ್ಣುವಿನ ಅವತಾರ ರೂಪಿ ನರಸಿಂಹನನ್ನು ನರಸಿಂಹಪುರಾಣವು ಹೊಗಳುವುದಲ್ಲದೆ ಅವನನ್ನು ಪರಬ್ರಹ್ಮ ಸ್ವರೂಪಿ ನಾರಾಯಣನೆಂದು ವರ್ಣಿಸುತ್ತದೆ. ಎಲ್ಲ ಪುರಾಣ ಕೃತಿಗಳಲ್ಲೂ ಇರುವಂತೆ ಇಲ್ಲಿಯೂ ಪಂಚಲಕ್ಷಣಾನುಗುಣ ವಿಷಯಗಳ ನಿರೂಪಣೆಯಿದೆ. ಜನರ ಆಚಾರ-ವಿಚಾರಗಳು, ಯೋಗಾಭ್ಯಾಸ, ನರಸಿಂಹ ಪೂಜಾಕಲ್ಪ ಮತ್ತು ಅದರ ಪ್ರಶಂಸೆಗಳು ಇಲ್ಲಿ ಬಂದಿವೆ. ಸೂರ್ಯ ಮತ್ತು ಚಂದ್ರ ವಂಶಗಳ ರಾಜರ ಸಂಕ್ಷಿಪ್ತ ವಂಶಾವಳಿಗಳ ಸಂಕ್ಷಿಪ್ತ ಪಟ್ಟಿಯೂ ಇದರಲ್ಲಿದೆ.

## ಕಾಲ ಮತ್ತು ವಿಷಯ

ನರಸಿಂಹ ಪುರಾಣದ ಖ್ಯಾತಿಯನ್ನು ಇದು ಕ್ರಿ.ಶ. ಸುಮಾರು 1300ರಲ್ಲಿ ತೆಲುಗು ಭಾಷೆಗೆ ಅನುವಾದವಾಗಿರುವುದರ ಮೂಲಕ ಗ್ರಹಿಸಬಹುದಾಗಿದೆ. ಪ್ರಾಚೀನ ಹಾಗೂ ಅರ್ವಾಚೀನ ಸ್ಮೃತಿಕಾರರು ಇದನ್ನು ವಿಪುಲವಾಗಿ ಉದ್ಧರಿಸಿದ್ದಾರೆ. ರಾಮಾಯಣ ಮತ್ತು ಮಹಾಭಾರತಗಳ ಪರಿಚಯವನ್ನು ಈ ಪುರಾಣವು ಹೊಂದಿರುವುದಾಗಿದೆ. ವಿಷ್ಣು ಪುರಾಣದ ಅನುಸರಣೆಯನ್ನು ನಾವಿಲ್ಲಿ ಗಮನಿಸಬಹುದಾಗಿದ್ದು, ವಾಯುಪುರಾಣದ ಅನುಸರಣೆಯನ್ನೊಳಗೊಂಡ ಕೆಲವು ಭಾಗಗಳು ಈ ಪುರಾಣ ರಚನೆಯ ಕಾಲವನ್ನು ಸುಮಾರು ಆರನೆಯ ಶತಮಾನಕ್ಕೆ ತೆಗೆದುಕೊಂಡು ಹೋಗಬಹುದಾಗಿರುತ್ತದೆ. ಇದರ ಕೆಲವು ಅಧ್ಯಾಯಗಳು ಸ್ವತಂತ್ರ ರಚನೆಗಳಾಗಿ ಪರಿಣಮಿಸಿವೆ.

ಉಪಪುರಾಣಗಳ ವಿಷಯಕ್ಕೆ ಸಂಬಂಧಿಸಿದಂತೆ ಒಂದೆರಡು ವಿಚಾರಗಳು ಇಲ್ಲಿ ಪ್ರಸ್ತುತವಾಗುತ್ತದೆ. ಪುರಾಣವು ಪಂಚಲಕ್ಷಣೋಕ್ತ ವಿಷಯಗಳನ್ನು ಒಳಗೊಳ್ಳುವುದರಿಂದ ಅದರ ಖಿಲ ಅಥವಾ ಪರಿಶಿಷ್ಟಗಳಾದ ಉಪಪುರಾಣಗಳಿಗೂ ಇದೇ ಅನ್ವಯವಾಗುತ್ತದೆಂಬ ಅಭಿಪ್ರಾಯವನ್ನು ಸೌರಪುರಾಣದಲ್ಲಿ ಕಾಣಬಹುದು. ಆದರೆ ಭಾಗವತ ಮತ್ತು ಬ್ರಹ್ಮವೈವರ್ತ ಪುರಾಣಗಳ ಪ್ರಕಾರ ಉಪಪುರಾಣದ ಲಕ್ಷಣಗಳು ಐದು ಮತ್ತು ಮಹಾಪುರಾಣದ ಲಕ್ಷಣಗಳು ಹತ್ತಾಗುತ್ತವೆ. ವಾಸ್ತವವಾಗಿ ಈ ಹತ್ತು ಸಾಂಪ್ರದಾಯಿಕ ಐದರ ವಿಸ್ತೃತ ರೂಪಗಳೇ ಹೊರತು ಬೇರೇನೂ ಅಲ್ಲ. ಧರ್ಮ ಹಾಗೂ ಸಾಮಾಜಿಕ ಚರಿತ್ರೆಯ ದೃಷ್ಟಿಯಿಂದ ಉಪಪುರಾಣಗಳ ಮಹತ್ವವು ಮಿಗಿಲಾಗಿರುವುದಾಗಿ ಕಂಡು ಬರುತ್ತದೆ. ಧರ್ಮ ಹಾಗೂ ಸಮಾಜಗಳ ಹಲವಾರು ಪ್ರಕಾರಗಳ ಮತ್ತು ಅಂಶಗಳ ವಿಷಯದಲ್ಲಿ ಇವು ನಮಗೆ ಆಳವಾದ ಒಳನೋಟಗಳನ್ನೊದಗಿಸುತ್ತವೆ. ಹೀಗಾಗಿ ಇವು ಮಹತ್ವಪೂರ್ಣವಾಗಿವೆ.

ಭಗವಂತನು ಸರ್ವವ್ಯಾಪಿಯಾಗಿದ್ದಾನೆ. ಆತನ ಲೀಲೆಗಳೂ, ಈ ಲೋಕದಲ್ಲಿ ಪ್ರಕಟಗೊಂಡ ಮಹಿಮೆಗಳೂ ಅಪಾರವಾಗಿವೆ. ಸರ್ವಜ್ಞನೂ ಸರ್ವಶಕ್ತನೂ ಆದ ಆತನು ನಿತ್ಯಶುದ್ಧನೂ ಆಗಿದ್ದಾನೆ. ಈತನ ನಿಜಸ್ವರೂಪವನ್ನು ಅರಿತುಕೊಳ್ಳಲು ಶ್ರವಣ, ಮನನ, ನಿಧಿಧ್ಯಾಸನಗಳು ಅತ್ಯಗತ್ಯವಾದದ್ದಾಗಿವೆ. ಪುರಾಣಗಳು ಭಗವಂತನ ಸ್ಮರಣೆಗೆ ಸಾಧನಗಳೂ

ಸಹಾಯಕಗಳೂ ಆಗಿವೆ. ಶ್ರದ್ಧೆ, ಭಕ್ತಿ, ಜ್ಞಾನಗಳಿಂದ ಕೂಡಿದ ಸಾಧಕನಿಗೆ ಭಗವಂತನ ಸನ್ನಿಧಾನವನ್ನು ನಿರ್ದೇಶಿಸುವ ಕೈಮರಗಳಾಗಿವೆ.

ನರಸಿಂಹ ಪುರಾಣವು ಭಕ್ತನಾದ ಪ್ರಹ್ಲಾದನು ಶ್ರೀಹರಿಯ ನಾಮಸಂಕೀರ್ತನೆಯಿಂದ ಭಗವಂತನ ರಕ್ಷಣೆಯನ್ನು ಹೊಂದಲು ಸಾಧ್ಯವಾದ ಸಂಗತಿಗಳನ್ನು ವಿವರಿಸುತ್ತದೆ. ಅವನು ದುಷ್ಟನ ಉಪಟಳದಿಂದ ಹೊರಬಂದು ಪಾರಾದ ಸಂಗತಿಗಳನ್ನು ನಿರೂಪಿಸಿದೆ. ಭಾಗವತೋತ್ತಮನಾದ ಪ್ರಹ್ಲಾದನ ದಿವ್ಯವಾದ ಚರಿತ್ರೆಯನ್ನು ಇದು ಮನೋಜ್ಞವಾಗಿ ತಿಳಿಸಿಕೊಡುತ್ತದೆ. ಈ ಪುರಾಣದಲ್ಲಿ ಒಟ್ಟು ಅರವತ್ತೆಂಟು ಅಧ್ಯಾಯಗಳಿವೆ ಇದನ್ನು ಸೃಷ್ಟಿಕಾಂಡ, ವಂಶಾನುಚರಿತ, ಭೂಗೋಲ ಕಥನ, ಹರಿಯ ಅವತಾರಾದಿ ನಿರೂಪಣ, ವರ್ಣಾಶ್ರಮ ಧರ್ಮಾದಿ ನಿರೂಪಣ, ಮಂತ್ರತೀರ್ಥಾದಿ ಮಹಿಮೆಗಳೆಂಬ ಆರು ವಿಭಾಗಗಳಲ್ಲಿ ವಿಂಗಡಿಸಲಾಗಿದೆ. ಇದರ ಪೈಕಿ ನಲವತ್ತೊಂದರಿಂದ ನಲವತ್ತೈದನೆಯ ಅಧ್ಯಾಯಗಳಲ್ಲಿ ನರಸಿಂಹಾವತಾರದ ಕಥೆಯು ಬಿತ್ತರಗೊಂಡಿದೆ. ಭಕ್ತಪ್ರಹ್ಲಾದನ ನಾರಾಯಣಭಕ್ತಿಯು ಸಾದರಗೊಂಡು ಪಸರಿಸಿದೆ.

## ಹಿರಣ್ಯ ತಪಸ್ಸು

ಹಿರಣ್ಯಕಶಿಪು ತಾನು ಲೋಕೈಕವೀರನಾಗಬೇಕೆಂಬ ಕಾರಣಕ್ಕೆ ತಪಸ್ಸನ್ನಾಚರಿಸಲು ಕಾಡಿಗೆ ತೆರಳುತ್ತಾನೆ. ಹೀಗೆ ಹೋಗುವಾಗ ದಿಕ್ಕುಗಳು ಹೊತ್ತಿಕೊಂಡು ಉರಿದು ಭೂಮಿಯು ಕಂಪಿಸುತ್ತದೆ. ಇದು ಅಪಶಕುನವಾದ ಕಾರಣ ಅವನು ತಪಶ್ಚರ್ಯೆಗೆ ಹೋಗಕೂಡದೆಂದು ಬಂಧುಗಳು ತಡೆಯುತ್ತಾರೆ. ಆದರೆ ವಿವೇಕರಹಿತನಾದ ಅವನು ಇದಾವುದನ್ನೂ ಲೆಕ್ಕಿಸದೆ ಇಬ್ಬರು ಮೂವರು ಗೆಳೆಯರೊಂದಿಗೆ ಕೈಲಾಸದ ಶಿಖರಕ್ಕೆ ಹೋಗುತ್ತಾನೆ.

ಹಿರಣ್ಯಕಶ್ಯಪನ ತಪಸ್ಸಿನಿಂದ ಬ್ರಹ್ಮನಿಗೆ ಚಿಂತೆ ಆವರಿಸುತ್ತದೆ. ತಪಸ್ಸಿನಿಂದ ಅವನನ್ನು ವಿಮುಖಗೊಳಿಸುವ ದಾರಿಯು ಕಾಣದಾಗುತ್ತದೆ. ಬ್ರಹ್ಮಮಾನಸ ಪುತ್ರರಾದ ನಾರದರು ಆ ಸನ್ನಿವೇಶದಲ್ಲಿ ಆಗಮಿಸಿ ತಂದೆಯು ಯಾವ ಚಿಂತೆಯೂ ಮಾಡಬಾರದೆಂದು ಹೇಳಿ ದಾನವನ ತಪಸ್ಸನ್ನು ತಾನು ಭಂಗಗೊಳಿಸುವೆನೆಂಬ ಜವಾಬ್ದಾರಿಯನ್ನು ಹೊತ್ತು ಪರ್ವತರೊಂದಿಗೆ ಹಿರಣ್ಯನು ತಪವನ್ನಾಚರಿಸುತ್ತಿದ್ದ ಸ್ಥಳವಾದ ಕೈಲಾಸಗಿರಿಗೆ ಗುಬ್ಬಚ್ಚಿಯ ರೂಪಧರಿಸಿ ಹೋಗುತ್ತಾರೆ.

ನಾರದರು ಹಿರಣ್ಯಕಶ್ಯಪನ ತಪಸ್ಸನ್ನು ಕೆಡಿಸಲು ಬರುವ ವಿಚಾರವು ವಿನೂತನ ವಾಗಿದ್ದು ಇದು ನರಸಿಂಹ ಪುರಾಣದಲ್ಲಷ್ಟೆ ಉಕ್ತಗೊಂಡಿರುವುದಾಗಿದೆ. ಇದರಿಂದ ದಾನವನ ಜೀವನ ವೃತ್ತಾಂತಕ್ಕೆ ವಿಶೇಷವಾದ ಅಂಶವೊಂದು ಸೇರ್ಪಡೆಯಾದಂತಿದೆ. ನಾರದರು ಗುಬ್ಬಚ್ಚಿಯ ರೂಪದಲ್ಲಿ ಬಂದು ಅವನು ತಪಸ್ಸನ್ನಾಚರಿಸುತ್ತಿದ್ದ ಸ್ಥಳಕ್ಕೆ ಸನಿಹವಾದ ಮರದಲ್ಲಿ ಕುಳಿತು 'ನಮೋ ನಾರಾಯಣಾಯ' ಎಂಬುದಾಗಿ ಉಚ್ಚಾರ ಮಾಡುತ್ತಾರೆ. ಹಿರಣ್ಯಕಶಿಪು ಗುಬ್ಬಚ್ಚಿ ವೇಷದ ನಾರದರ ಕಡೆಗೆ ಬಾಣ ಬಿಟ್ಟಾಗ ಅದರ

ಗುರಿಗೆ ಸಿಗಲಾರದೆ ಪುರ್ರನೆ ಹಾರಿಹೋದ ವಂಚನೆಯಿಂದ ಕಡುಮುಳಿಸುಂಟಾಗಿ ರಾಜನು ತನ್ನ ಮನೆಗೆ ತೆರಳುತ್ತಾನೆ.

ಪತಿಯು ದೀರ್ಘವಾದ ತಪಸ್ಸಿಗೆ ಕಾಡಿಗೆ ಹೋದವನು ಅತಿಶೀಘ್ರದಲ್ಲಿ ಮರಳಿ ಬಂದದ್ದು ದೈತ್ಯರಾಜನ ಪತ್ನಿಯಾದ ಕಯಾದುವಿಗೆ ಆಶ್ಚರ್ಯ-ಸಂಭ್ರಮಗಳೆರಡನ್ನೂ ಒಟ್ಟಿಗೆ ಉಂಟುಮಾಡುತ್ತದೆ. ಆ ಸಮಯಕ್ಕೆ ಸರಿಯಾಗಿ ಅವಳು ಋತುಸ್ನಾತಳಾಗಿರುತ್ತಾಳೆ, ಸೂಕ್ತವಾದ ಸಂದರ್ಭದಲ್ಲಿ ಗಂಡನೊಂದಿಗೆ ಸಮಾಗಮಗೊಂಡ ಅವಳು ಗರ್ಭವನ್ನು ಧರಿಸುತ್ತಾಳೆ.

## ಪ್ರಹ್ಲಾದನ ವಿದ್ಯಾಪರೀಕ್ಷೆ

ಹಿರಣ್ಯಕಶಿಪು-ಕಯಾದುವಿನ ಮಗನಾಗಿ ಜನಿಸಿದ ಪ್ರಹ್ಲಾದನು ಮಹಾವಿಷ್ಣುವಿನ ಭಕ್ತಿಯನ್ನು ಬಿತ್ತರಿಸುತ್ತಾ ಬೆಳೆಯತೊಡಗಿರುತ್ತಾನೆ. ಅವನು ಇತರ ಮಕ್ಕಳೊಡನೆ ಬಾಲ್ಯಸಹಜವಾದ ಆಟವಾಡುತ್ತಾ ಅತ್ಯಂತ ಚಟುವಟಿಕೆಯಿಂದ ಕೂಡಿದವನಾಗಿರುತ್ತಾನೆ. ಕತೆಗಳನ್ನು ಹೇಳುವುದು, ಶ್ರೀಹರಿಯ ನಾಮವನ್ನುಚ್ಚರಿಸುವುದು ಅವನಿಗೆ ಹುಟ್ಟುಗುಣವೇನೋ ಎಂಬಂತೆ ನೋಡಿದವರಿಗೆ ಅರಿವಾಗುತ್ತದೆ. ನಾರಾಯಣ ರೂಪದಲ್ಲಿ ಧರೆಗಿಳಿದವನಂತೆ ಅವನು ಶೋಭಿಸುತ್ತಿರುತ್ತಾನೆ. ಕಾಲಕ್ರಮದಲ್ಲಿ ಬಾಲ್ಯ ಕಳೆದ ಅವನನ್ನು ಎಲ್ಲರಿಗೂ ಅಗತ್ಯವಾದ ವಿದ್ಯಾಭ್ಯಾಸಕ್ಕಾಗಿ ಗುರುಕುಲಕ್ಕೆ ಸೇರಿಸಲಾಗುತ್ತದೆ.

ಗುರುಕುಲದಲ್ಲಿ ವಿದ್ಯಾಭ್ಯಾಸವನ್ನು ಮುಗಿಸಿಬಂದ ತನ್ನ ಮಗನನ್ನು ಹಿರಣ್ಯಕಶಿಪು ತನ್ನ ಬಳಿಗೆ ಬರಮಾಡಿಕೊಂಡು ಅವನು ಕಲಿತಿರುವ ಯಾವುದಾದರೊಂದು ಸೂಕ್ತಿಯನ್ನು ಹೇಳುವಂತೆ ಕೇಳುತ್ತಾನೆ. ಆಗ ವಿಷ್ಣುಭಕ್ತನಾದ ಪ್ರಹ್ಲಾದನು ಮೂರು ಲೋಕಗಳಿಗೂ ವಂದ್ಯನಾದ, ಸರ್ವಸ್ವಾಮಿಯಾದ ವೇದಗಮ್ಯನಾದ ಗೋವಿಂದನಿಗೆ ನಮಸ್ಕರಿಸಿ ಆರಂಭ ಮಾಡುವಷ್ಟರಲ್ಲಿಯೇ ತನ್ನ ಮಗನು ತನ್ನ ವೈರಿಯ ಹೆಸರು ಹೇಳಿದ್ದನ್ನು ಕೇಳಿ ತಂದೆಯಾದವ ನಿಗೆ ಅಸಾಧ್ಯವಾದ ಸಿಟ್ಟು ಬರುತ್ತದೆ. ಆದರೆ ಅದನ್ನು ಪ್ರಕಟಗೊಳಿಸದೆ ಗಟ್ಟಿಯಾಗಿ ನಕ್ಕು ಸಂತಸಗೊಂಡವನಂತೆ ಮಗನನ್ನು ಅಪ್ಪಿಕೊಂಡು, 'ರಾಮ ಗೋವಿಂದ ಕೃಷ್ಣ ಮಾಧವ' ಎಂದೆಲ್ಲ ಯಾರು ಹೇಳುತ್ತಾರೋ ಅವರು ತನಗೆ ಶತ್ರುಗಳೆಂದು ಹೇಳಿ ಇದನ್ನೆಲ್ಲ ಅವನಿಗೆ ಹೇಳಿಕೊಟ್ಟವರು ಯಾರು ಎಂಬುದಾಗಿ ಪ್ರಶ್ನಿಸುತ್ತಾನೆ.

ಆದರೆ ಪ್ರಹ್ಲಾದನು ತನ್ನ ತಂದೆ ಹೇಳಿದ ಮಾತುಗಳಿಂದ ವಿಚಲಿತನಾಗಲಿಲ್ಲ. ಹರಿನಾಮವು ಸಕಲೈಶ್ವರ್ಯಗಳನ್ನು ದಯಪಾಲಿಸುವುದೆಂಬುದಾಗಿಯೂ, ವಿಷ್ಣುವನ್ನು ದೂಷಿಸುವುದರಿಂದ ಪಾಪದ ಹೊರೆಯನ್ನು ಹೊರುವಂತಾಗುವುದೆಂದು ಹೇಳುತ್ತಾನೆ. ಇಷ್ಟೇ ಅಲ್ಲದೆ ತನ್ನ ತಂದೆಯಾದವನು ಸಹ ಹರಿನಾಮೋಚ್ಚರಣೆ ಮಾಡುವುದರಿಂದ ಆನಂದ ಹೊಂದುತ್ತಾನೆಂದೂ, ಅವನನ್ನು ಶರಣುಹೋಗುವುದರಿಂದ ದುರಿತಗಳು ದೂರವಾಗು ವುದೆಂದೂ ತಿಳಿಸಿಕೊಡುತ್ತಾನೆ.

## ದುರಾಲೋಚನೆ

ಬಾಲಕನ ಮಾತುಗಳು ತಂದೆಯಾದ ಹಿರಣ್ಯಕಶಿಪುವಿನಲ್ಲಿ ಕ್ರೋಧವನ್ನು ಹುಟ್ಟಿಸುತ್ತದೆ. ಮಗನನ್ನು ಧಿಕ್ಕರಿಸಿದ ಅವನು ಅವನನ್ನು ಪಾಪಿಷ್ಠ, ಪುರುಷಾಧಮ ಎಂದೆಲ್ಲ ನಿಂದಿಸುತ್ತಾನೆ. ತನ್ನ ಮಗನಿಗೆ ವಿದ್ಯೆಯನ್ನು ಕಲಿಸುತ್ತಿರುವ ಗುರುಗಳಲ್ಲಿಯೇ ದೋಷವಿರಬಹುದೆಂದು ಅರಿತುಕೊಂಡ ಅವನು ಗುರುಗಳನ್ನು ಕಟ್ಟಿತರುವಂತೆ ಅಪ್ಪಣೆ ಮಾಡುತ್ತಾನೆ. ಅಲ್ಲಿಗೆ ಬಂದ ಅವರನ್ನು ಅನೇಕ ವಿಧವಾಗಿ ಬೈದು ತೆಗಳಿ ತನ್ನ ಕುವರನಿಗೆ ವಿಷ್ಣುಸ್ತೋತ್ರವನ್ನು ಕಲಿಸಿದ್ದಕ್ಕಾಗಿ ಅವರಿಗೆ ಛೀಮಾರಿ ಹಾಕುತ್ತಾನೆ. ಇನ್ನು ಮುಂದಾದರೂ ಅವನನ್ನು ಸರಿಯಾದ ದಾರಿಯಲ್ಲಿ ನಡೆಸಬೇಕೆಂದು ಎಚ್ಚರಿಕೆ ಹೇಳಿ ಮತ್ತೊಮ್ಮೆ ಮಗನನ್ನು ಅವನ ಗುರುಗಳೊಂದಿಗೆ ಕಳಿಸುತ್ತಾನೆ.

ಅನತಿ ಕಾಲದ ಬಳಿಕ ಮತ್ತೊಮ್ಮೆ ತನ್ನ ಮಗ ಪ್ರಹ್ಲಾದನು ಗುರುಗಳ ಮೂಲಕ ಕಲಿತ ವಿದ್ಯೆಯ ಪರಿಪೂರ್ಣತೆಯನ್ನು ಪರೀಕ್ಷಿಸುವ ಹಂಬಲ ಹಿರಣ್ಯಕಶಿಪುವಿನಲ್ಲಿ ಉಂಟಾಗುತ್ತದೆ. ರಾಜನೀತಿಯನ್ನು ಕಲಿಸುವ ಶಾಸ್ತ್ರಗಳಿಂದಾಗಲಿ, ಸಂಸಾರದ ಸಂಗತಿಗಳನ್ನು ಬೋಧಿಸುವ ವಿದ್ಯೆಯಿಂದಲೇ ಆಗಲಿ ಯಾವುದೇ ಪ್ರಯೋಜನವಿಲ್ಲವೆಂದು ಹೇಳಿದ ಬಾಲಕನು, ಸದಾ ಶ್ರೀಮಹಾವಿಷ್ಣುವಿನ ಮಹತ್ವವನ್ನು ನಿರೂಪಿಸುವ ವಾಙ್ಮಯವು ಸಂಸಾರದ ಬಂಧನದಿಂದ ಬಿಡುಗಡೆಗೊಳಿಸಲು ಸಮರ್ಥವಾದದ್ದೆಂದೂ, ಅದನ್ನೇ ಅನನ್ಯ ಸೇವಿಸತಕ್ಕವರಿಗೆ ಶಾಶ್ವತವಾದ ಸುಖವು ಲಭ್ಯವಾಗುವುದೆಂದೂ ಹೇಳುತ್ತಾನೆ. ಪ್ರಹ್ಲಾದನ ಈ ನುಡಿಗಳಿಂದ ದೈತ್ಯರಾಜನಾದ ಹಿರಣ್ಯಕಶಿಪುವಿನ ಮನಸ್ಸು ನೀರಿನಿಂದ ಕೂಡಿ ಕಾದ ತುಪ್ಪದ ಹಾಗೆ ಪಟಪಟನೆ ಸಿಡಿಯುತ್ತದೆ. ಅವನು ಸೂರ್ಯನ ಪ್ರಕಾಶವನ್ನು ತುಚ್ಛವಾದ ಗೂಬೆಯು ಹೇಗೆ ಸಹಿಸುವುದಿಲ್ಲವೋ ಹಾಗೆಯೇ ಪ್ರಹ್ಲಾದನ ಮಾತುಗಳನ್ನು ಸಹಿಸದವನಾಗುತ್ತಾನೆ ಇದಕ್ಕೆ ಬದಲಾಗಿ ಮಗನನ್ನು ಕೊಲ್ಲಿಸುವ ನಿರ್ಧಾರಕ್ಕೆ ತಲುಪುತ್ತಾನೆ.

ಪ್ರಹ್ಲಾದನು ಸರ್ವಶಕ್ತನಾದ ಶ್ರೀಹರಿಗೆ ನಮಸ್ಕರಿಸಿ ಭಗವಂತನ ಧ್ಯಾನವೆಂಬ ಕವಚವನ್ನು ಧರಿಸುತ್ತಾನೆ. ಭಕ್ತರ ದುಃಖವನ್ನು ನಾಶಗೊಳಿಸತಕ್ಕ ಭಗವಂತನಾದ ವಿಷ್ಣುವು ಕಪಟರಹಿತನಾದ ಭಕ್ತ ಪ್ರಹ್ಲಾದನನ್ನು ರಕ್ಷಿಸಿದ ಕಾರಣ ಯಾವ ಆಯುಧಗಳಿಗಾಗಲಿ ಅವನ ಮೇಲೆ ಯಾವುದೇ ರೀತಿಯ ಪರಿಣಾಮವನ್ನು ಮಾಡಲಾಗಲಿಲ್ಲ. ತನ್ನ ಮಗನಿಗೆ ಯಾವ ಕೆಡುಕೂ ಆಗದಿರುವುದನ್ನು ಕಂಡು ದೈತ್ಯನ ಮನದಲ್ಲಿ ಕಳವಳವುಂಟಾಗುತ್ತದೆ. ಆ ದುರ್ಮತಿಯು ಯಾವುದಾದರೊಂದು ರೀತಿಯಲ್ಲಿ ತನ್ನ ಮಗನ ಅಂತ್ಯಕ್ಕಾಗಿ ಹಂಬಲಿಸುತ್ತಾನೆ.

ಹಿರಣ್ಯಕಶಿಪುವಿಗೆ ತನ್ನ ಮಗನನ್ನು ಕೊಲ್ಲುವ ಚಿಂತೆ ಗಾಢವಾಗಿ ಅತಿಕ್ರೂರವಾದ ವಿಷದಿಂದ ಕೂಡಿದ ದಂದಶೂಕಗಳನ್ನು ಆ ಕಾರ್ಯಕ್ಕೆ ನೇಮಿಸುತ್ತಾನೆ. ಆ ಸರ್ಪಗಳು ರಾಜನ ಆಜ್ಞೆಯನ್ನು ಸಂತಸದಿಂದ ಸ್ವೀಕರಿಸಿ ತಮ್ಮ ಕ್ರೂರವಾದ ಹಲ್ಲುಗಳಿಂದ ಕೂಡಿ

ಅತಿಯಾದ ಕೋಪದಿಂದ ಅತಿವೇಗವಾಗಿ ಪ್ರಹ್ಲಾದನು ಇರುವಲ್ಲಿಗೆ ಅವು ಹರಿದು ಬರುತ್ತವೆ. ಶ್ರೀಹರಿಯ ಧ್ಯಾನದಿಂದ ಭೇದಿಸಲಶಕ್ಯವಾಗಿದ್ದ ಪ್ರಹ್ಲಾದನ ಚರ್ಮದ ಕಿಂಚಿತ್ ಭಾಗವನ್ನಾದರೂ ಕಚ್ಚಲು ಅವಕ್ಕೆ ಸಾಧ್ಯವಾಗಲಿಲ್ಲ. ಬದಲಾಗಿ ಅವುಗಳ ಹಲ್ಲುಗಳೇ ಮುರಿದುಹೋಗುತ್ತವೆ.

ದೈತ್ಯರಾಜನ ಮುಂದೆ ಬಂದು ನಿಂತ ಸರ್ಪಗಳು ನೆತ್ತರಿನಿಂದ ತೊಯ್ದುಹೋಗಿರುತ್ತವೆ. ಅವುಗಳ ಕೋರೆಹಲ್ಲುಗಳು ಇಬ್ಭಾಗವಾಗಿ, ಕಂಪಿಸುತ್ತಿರುತ್ತವೆ. ಅಗಲವಾಗಿ ಬಿಚ್ಚಿದ ಹೆಡೆಗಳನ್ನು ಹೊಂದಿ ಅವು ನಿಂತಿರುತ್ತವೆ. ತಮ್ಮ ವಿಷಜ್ವಾಲೆಯಿಂದ ಮಹಾವೃಕ್ಷಗಳನ್ನೆ ಸುಟ್ಟು ಬೂದಿಮಾಡಬಲ್ಲ ಶಕ್ತಿಯನ್ನು ಹೊಂದಿದ ತಮಗೆ ಮಹಾಮಹಿಮೆಯಿಂದ ಕೂಡಿದ ಬಾಲಕನ ಸಂಹಾರವು ಸಾಧ್ಯವಾಗದೆಂದೂ, ಇದಕ್ಕೆ ಬದಲಾಗಿ ತಮ್ಮ ಹಲ್ಲುಗಳನ್ನು ಕಳೆದುಕೊಂಡ ತಮಗೆ ಸಾಯುವ ಹಾಗಾಗಿದೆಯೆಂದು ಪರಿತಪಿಸುತ್ತ ಹಿರಣ್ಯಕಶಿಪುವಿನ ಮುಂದೆ ನಿವೇದನೆ ಮಾಡಿಕೊಳ್ಳುತ್ತವೆ.

ಪ್ರಹ್ಲಾದನ ಶಕ್ತಿಯ ಕಾರಣವನ್ನು ತಿಳಿಯಲು ಸಾಧ್ಯವಾಗದೆ ಹೋದ ತಂದೆಯು ಮತ್ತಷ್ಟು ಚಿಂತೆಯಿಂದ ವ್ಯಾಕುಲನಾಗುತ್ತಾನೆ. ಮಂತ್ರಿಗಳೊಡನೆ ಸಮಾಲೋಚನೆ ನಡೆಸಿದ ಅಸುರಾರಿಯು ತನ್ನ ಮಗನ ಮೇಲೆ ದಂಡೋಪಾಯವು ಸಾಧ್ಯವಾಗದೆಂದು ಬಹುಬೇಗನೆ ಅರಿತುಕೊಳ್ಳುತ್ತಾನೆ. ತನ್ನ ಮನಸ್ಥಿತಿಯನ್ನು ಬದಲಿಸಿಕೊಂಡ ಅವನು ಪವಿತ್ರನೂ, ಪುಣ್ಯ ಸ್ವರೂಪನೂ ಆದ, ಸದಾಕಾಲವೂ ಹರಿಯ ಚಿಂತನೆಯಲ್ಲಿಯೇ ತೊಡಗಿದ್ದ ತನ್ನ ಮಗನಿಗೆ ಸಾಂತ್ವನದ ನುಡಿಗಳನ್ನಾಡುತ್ತಾನೆ.

ಮಗನಿಗೆ ಬುದ್ಧಿವಾದ ಹೇಳುತ್ತಿದ್ದ ಸಮಯದಲ್ಲಿ ಪುರೋಹಿತರು ಆ ಸ್ಥಳಕ್ಕೆ ಧಾವಿಸಿ ಬರುತ್ತಾರೆ. ಶಾಸ್ತ್ರಜ್ಞರಾದರೂ ವಿವೇಕವಿಲ್ಲದ ಅವರು ರಾಜನ ಮುಂದೆ ಕೈ ಜೋಡಿಸಿ ನಿಲ್ಲುತ್ತಾರೆ. ಅವನ ವಿಷಯದಲ್ಲಿ ರಾಜನು ಕರುಣೆ ತೋರಬೇಕೆಂದು ಪ್ರಾರ್ಥಿಸಿ ಕೊಳ್ಳುತ್ತಾರೆ. ಮಕ್ಕಳು ಅಯೋಗ್ಯರಾಗಬಹುದಾದರೂ ತಾಯಿತಂದೆಗಳು ಅಯೋಗ್ಯರಾಗಲಾರರೆಂದು ಹೇಳಿ ಪ್ರಹ್ಲಾದನನ್ನು ತಿದ್ದುವ ಜವಾಬ್ದಾರಿ ಹೊತ್ತು ಮತ್ತೊಮ್ಮೆ ಅವನನ್ನು ತಮ್ಮೊಂದಿಗೆ ಕರೆದೊಯ್ಯುತ್ತಾರೆ.

## ತತ್ತ್ವ ಬೋಧೆ

ಪ್ರಹ್ಲಾದನು ಗುರುಕುಲದಲ್ಲಿರುವಾಗ ಅಲ್ಲಿನ ಉಳಿದ ಸಹಪಾಠಿಗಳಲ್ಲಿ ಶ್ರೀಹರಿಯ ವಿಚಾರದಲ್ಲಿ ಗೌರವ ಭಾವನೆಯುಂಟಾಗುವಂತೆ ಅವರಿಗೆ ನೀಡಿದ ಬೋಧನೆಯ ಭಾಗವು ನರಸಿಂಹ ಪುರಾಣದಲ್ಲಿಯೂ ಸಾಕಷ್ಟು ವಿಸ್ತಾರವಾಗಿಯೇ ನಿರೂಪಿತವಾಗಿದೆ. ಸುಮಾರು ಒಂದು ಅಧ್ಯಾಯವು ಇದಕ್ಕಾಗಿ ಮೀಸಲಾಗಿದೆ. ಈ ಭಾಗದಲ್ಲಿ ಬರುವ ಬೋಧಪ್ರದವಾದ ವಿಚಾರಗಳು ಮಾನವನ ಹುಟ್ಟು, ಸಂಸಾರದ ಕ್ಲೇಶಗಳು, ಭಗವಂತನ ಬಗೆಗಿರಬೇಕಾದ ಭಕ್ತಿ ಮೊದಲಾದ ಸಂಗತಿಗಳನ್ನು ಸ್ವಾರಸ್ಯವಾಗಿ ತಿಳಿಸುತ್ತವೆ.

ಶ್ರೀಹರಿಯನ್ನು ಸದಾಕಾಲವೂ ಸ್ಮರಣೆ ಮಾಡುತ್ತ, ಈ ಜಗತ್ತನ್ನು ಆತನಿಂದ ರಕ್ಷಿತವಾದದ್ದೆಂದು ತಿಳಿದು ಇದರಲ್ಲಿ ಭಗವಂತನು ವ್ಯಾಪ್ತನಾಗಿರುವುದಾಗಿ ಭಾವಿಸಿ ಜಗತ್ತಿನ ಹೊರಗಿನ ಕೆಲಸಗಳಲ್ಲಿ ಜಡನಂತೆ ಪ್ರಹ್ಲಾದನು ನಡೆದುಕೊಳ್ಳುತ್ತಿರುತ್ತಾನೆ. ಈ ಪ್ರವೃತ್ತಿಯನ್ನು ಗಮನಿಸುತ್ತಿದ್ದ ಅವನ ಸಹಪಾಠಿಗಳು ಅವನನ್ನು ಇದರ ಕಾರಣವೇನೆಂದು ಕೇಳಲು ಪ್ರಹ್ಲಾದನು ಅವರಿಗೆ ಜೀವ-ಜಗತ್ತುಗಳ ಸಂಬಂಧವನ್ನು ಸ್ವಾರಸ್ಯಪೂರ್ಣವಾಗಿ ತಿಳಿಯಹೇಳುತ್ತಾನೆ.

ಧನ-ಕನಕಗಳಿಂದ, ವಿಲಾಸಿನಿಯರಿಂದ ಮನೋಹರವಾಗಿ ಕಾಣುತ್ತಿರುವ ಈ ಲೋಕದಲ್ಲಿ ಅನುಭವಿಸುತ್ತಿರುವ ಭೋಗವು ಶಾಶ್ವತವಾದದ್ದಲ್ಲ. ಜೀವನು ತನ್ನ ಹುಟ್ಟಿಗೆ ಮುನ್ನ ತಾಯಿಯ ಗರ್ಭದಲ್ಲಿರುವಾಗಲೇ ಅನೇಕ ಕೋಟಲೆಗಳಿಗೆ ಒಳಗಾಗಿರುತ್ತಾನೆ. ಹೀಗಾಗಿ ಮನುಷ್ಯನ ಕ್ಲೇಶವು ಗರ್ಭಾವಾಸದಿಂದಲೇ ಆರಂಭವಾಗಿರುತ್ತದೆ. ಗರ್ಭದಲ್ಲಿರುವ ಮಾನವನಿಗೆ ಹೇಗೆ ಸುಖವಿಲ್ಲವೋ ಹಾಗೆಯೇ ಬಾಲ್ಯ, ಹರೆಯ, ಮುಪ್ಪಿನಲ್ಲಿಯೂ ಅವನಿಗೆ ನೆಮ್ಮದಿಯಿಲ್ಲ. ಈ ಸಂಸಾರದಲ್ಲಿ ನಾವೆಷ್ಟು ಹುಡುಕಿದರೂ ಸುಖದ ಒಂದಂಶವನ್ನೂ ಕಾಣಲಾಗುತ್ತಿಲ್ಲ. ವಿಚಾರ ಮಾಡುತ್ತ ಹೋದಂತೆ ಸಂಸಾರಸಾಗರದಲ್ಲಿ ದುಃಖದ ಅಲೆಗಳು ಮುನ್ನುಗ್ಗುತ್ತ ಸಾಗಿವೆ.

ಎನಿತೆನಿತು ವಿಚಾರ ಮಾಡುತ್ತಾ ಹೋಗುತ್ತೇವೆಯೋ ಅನಿತನಿತು ಅತಿಶಯವಾದ ಈ ಸಂಸಾರ ಸಾಗರವು, ಮೇಲೆ ಸುಂದರವಾಗಿ ತೋರುವ ಗಣೆಯಂತಿದೆ. ಸತ್ಪುರುಷರಾದವರು ಇದರಲ್ಲಿ ಸಿಕ್ಕಿಕೊಳ್ಳುವುದಿಲ್ಲ. ಎದುರಿಗೆ ಕಾಣುತ್ತಲಿರುವ ಮನೋಹರವಾಗಿರುವ ಬೆಂಕಿಯಲ್ಲಿ ಪತಂಗದ ಹುಳುಗಳು ಕೆಡೆದುಬೀಳುವ ಹಾಗೆ ತತ್ತ್ವಜ್ಞಾನರಹಿತರಾದ ಮೂಢರು ಮಾತ್ರವೇ ಇದರಲ್ಲಿ ಬೀಳುವವರಾಗಿದ್ದಾರೆ. ಬೇರೊಂದು ಸುಖದ ಆಸರೆ ಇಲ್ಲದಿದ್ದಲ್ಲಿ ಆಗ ಸುಖದಂತೆ ತೋರುವ ಸಂಸಾರದಲ್ಲಿ ಬೀಳುವುದೇ ಉಚಿತವಾದೀತು.

ಶ್ರೀಮನ್ನಾರಾಯಣನ ಪಾದಕಮಲಗಳನ್ನು ಪೂಜೆ ಮಾಡುವುದರಿಂದ ನಾವು ಹೊಂದಲಿರುವ ಆತ್ಮಾನಂದವು ಅತಿಶಯವಾದದ್ದು. ಇದು ಯಾವ ಶ್ರಮವೂ ಇಲ್ಲದೆ ಪಡೆಯುವ ಸುಖಸಾಧನವಾಗಿದೆ. ಸುಖಸ್ವರೂಪವಾದ ಇದನ್ನುಳಿದು ಬೇರೆ ಯಾವ ಸುಖಸಾಧನಗಳನ್ನು ಯಾರೂ ಅಪೇಕ್ಷಿಸಲಾರರು. ತನ್ನ ಕರಗತವಾದ ಅಥವ ಅಂಗೈನಲ್ಲಿರುವ ಅರಮನೆಯನ್ನು ಬಿಟ್ಟು ದೀನಮನನಾದವನು ಅಥವಾ ಮೂಢನಾದವನು ಬೇರೆ ಯಾವ ಹಂಗಿನ ಭಿಕ್ಷಾನ್ನಕ್ಕೂ ಆಸೆ ಪಡುವುದಿಲ್ಲ. ಅವಿವೇಕಿಯಾದವನು ಮಾತ್ರ ಇಂತಹ ಕಾರ್ಯಕ್ಕೆ ಕೈಹಾಕಿ ಅದರಿಂದ ಪಶ್ಚಾತ್ತಾಪ ಪಡಬಲ್ಲವನಾಗಿದ್ದಾನೆ.

ಶ್ರೀಪತಿಯ ಚರಣಗಳನ್ನು ಅತುಳೈಶ್ವರ್ಯದಿಂದಾಗಲೀ, ಅನರ್ಘ್ಯ ವಸ್ತ್ರಾಭರಣದಿಂದಾಗಲೀ ಪೂಜಿಸುವುದು ಮನುಷ್ಯನ ಮೌಢ್ಯವಾದೀತು. ಮತ್ತಾವುದನ್ನೂ ನೆನೆಯದೆ ಆತನಲ್ಲಿಯೇ ಇಟ್ಟಿರುವ ಮನಸ್ಸಿನಿಂದ ಕೂಡಿದವನಾದ ಮಾನವನು ಕೇಶವ, ಮಾಧವ

ಎಂದು ಉಚ್ಚರಿಸುವುದಾದರೆ ಅದರಿಂದ ಭಗವಂತನ ಪಾದಗಳನ್ನು ಸೇವಿಸಿದಂತಾಗುತ್ತದೆ. ಶ್ರೀಹರಿಯ ಅನುಗ್ರಹ ದೊರೆಯುತ್ತದೆ. ಶಂಖ-ಚಕ್ರ-ಗದಾಪಾಣಿಯಾದ, ಕ್ರೀಡಾದಿಗುಣ ವಿಶಿಷ್ಟ, ಸರ್ವರಿಂದ ಸ್ತುತ್ಯ ನಿತ್ಯನಾದ, ಭಕ್ತರ ಇಷ್ಟಗಳನ್ನು ದಯಪಾಲಿಸುವ, ಮೋಕ್ಷ ಪ್ರದಾಯಕನಾದ ಶ್ರೀಹರಿಯನ್ನು ಭಕ್ತಿಯೋಗದಿಂದ ಸ್ಮರಿಸಬೇಕಾದದ್ದು ಮಾನವಜನ್ಮದಲ್ಲಿ ಮಾಡಬೇಕಾದ ಮುಖ್ಯ ಕರ್ತವ್ಯವಾಗಿದೆ.

ಪ್ರಹ್ಲಾದನು ತನ್ನ ಗೆಳೆಯರಾದ ಅಸುರ ಬಾಲಕರಿಗೆ ತಿಳಿಯ ಹೇಳಿದ ಮಾತುಗಳಲ್ಲಿ ತತ್ತ್ವಬೋಧೆಯ ವಿಚಾರಗಳು ಅಡಕವಾಗಿರುತ್ತದೆ. ಇದರಿಂದ ದೇವರ ಬಗ್ಗೆ ಮಾತ್ರವಲ್ಲದೆ ವೇದಾದಿಗಳ ಪ್ರಾಮಾಣ್ಯಬುದ್ಧಿಯನ್ನೂ ಸಹ ಅರಿತುಕೊಳ್ಳಬಹುದಾಗಿದೆ. ಮಹಾವಿಷ್ಣುವಿನ ಚೇತನಾಚೇತನಾತ್ಮಕವಾದ ಹಾಗೂ ಸರ್ವವ್ಯಾಪಿಯಾದ ಗುಣವನ್ನು ನಿಚ್ಚಳವಾಗಿ ಇಲ್ಲಿ ಕಾಣಬಹುದು.

## ಅರಿವಿನ ರಹಸ್ಯ

ಪ್ರಹ್ಲಾದನ ಸಹಪಾಠಿಗಳು ತಮ್ಮ ಗುರುಗಳಾದ ಶಂಡಾಮರ್ಕರ ಪಾಂಡಿತ್ಯದ ಪಾಠಗಳನ್ನು ಆದ್ಯಂತವಾಗಿ ಮನನ ಮಾಡಿದ್ದವರು. ಆದರೆ ಅವರಿಗೆ ಈಗಿನ ಪ್ರಹ್ಲಾದನ ಬೋಧನೆಯ ತಾತ್ತ್ವಿಕ ವಿಚಾರಗಳು ಬೇರೆಯಾಗಿರುವಂತೆ ಭಾಸವಾಗುತ್ತದೆ. ಅವರು ತಮ್ಮ ಮನಸ್ಸಿನ ಗೊಂದಲವನ್ನು ತಮ್ಮ ಆಪ್ತನಾದ ಭಗವದ್‌ಭಕ್ತನಾದ ಮಿತ್ರನಲ್ಲಿ ಹೇಳಿಕೊಳ್ಳುತ್ತಾರೆ. ತಮಗೆ ದಿಟದ ಅರಿವನ್ನು ಉಂಟುಮಾಡಬೇಕೆಂದು ಅವನಲ್ಲಿ ಕೇಳಿ ಕೊಳ್ಳುತ್ತಾರೆ. ಅವನು ಇದನ್ನೆಲ್ಲಾ ಅರಿತ ರಹಸ್ಯವನ್ನು ತಿಳಿಸಲು ವಿನಂತಿಸುತ್ತಾರೆ.

ಶ್ರೀಹರಿಯೇ ಗತಿ ಮತ್ತು ಮತಿಯೆಂಬ ವಿಚಾರವನ್ನು ಪ್ರಹ್ಲಾದನು ತನ್ನ ಸಹಪಾಠಿ ಮಿತ್ರರಿಗೆ ಹೇಳಿದ್ದು ಮಾತ್ರವಲ್ಲದೆ, ತಾನು ಈ ಸಂಗತಿಗಳೆಲ್ಲವನ್ನೂ ತನ್ನ ತಾಯಿಯ ಗರ್ಭದಲ್ಲಿದ್ದಾಗಲೇ ಅರಿತಿದ್ದುದಾಗಿ ಹೇಳಿ ಪೂರ್ವದ ಕತೆಯೆಲ್ಲವನ್ನು ತಿಳಿಸುತ್ತಾನೆ.

ತನ್ನ ತಂದೆಯು ತಪಸ್ಸಿಗೆ ಹೋದ ವಿಚಾರ, ದ್ವೇಷವನ್ನು ಸಾಧಿಸಲು ಹೊಂಚು ಹಾಕುತ್ತಿದ್ದ ದೇವತೆಗಳು ದಾನವರ ಮೇಲೆ ಎರಗಿಬಂದಿದ್ದು, ದೇವೇಂದ್ರನು ತನ್ನ ತಾಯಿಯನ್ನು ಸೆರೆಯಾಗಿ ಒಯ್ಯುವುದು, ಆ ಸಮಯದಲ್ಲಿ ನಾರದರ ಪ್ರವೇಶ, ದೇವೇಂದ್ರನಿಗೆ ಬುದ್ಧಿವಾದವನ್ನು ಹೇಳಿ ತನ್ನ ತಾಯಿಯನ್ನು ಬಿಡಿಸಿಕೊಂಡು ಹೋಗುವುದು, ನಂತರ ನಾರದರ ಆಶ್ರಮದಲ್ಲಿ ತನ್ನ ತಾಯಿಗೆ ಅವರಿಂದ ದೊರೆತ ಉಪದೇಶ, ಇದನ್ನು ಗರ್ಭದಲ್ಲಿದ್ದ ತಾನು ತಿಳಿದ ಸಂಗತಿಗಳನ್ನೆಲ್ಲ ಪ್ರಹ್ಲಾದನು ತಿಳಿಸಿ ಹೇಳುತ್ತಾನೆ. ತಾನು ಈ ಕಾರಣದಿಂದ ಭಗವದನುಗ್ರಹಕ್ಕೆ ಪಾತ್ರನಾಗಿ ಮರೆಯದೆ ಅದನ್ನು ಆಚರಿಸುತ್ತಿರುವುದಾಗಿ ಅವರಿಗೆ ಮನವರಿಕೆ ಮಾಡಿ ಕೊಡುತ್ತಾನೆ.

# ಅಸುರನ ಕೋಪ - ಪರಿಣಾಮ

ಹೀಗಿರುವಲ್ಲಿ ಒಂದು ದಿನ, ಹಿರಣ್ಯಕಶಿಪು ರಾತ್ರಿಯ ಸಂಚಾರಕ್ಕೆ ನಗರಪ್ರದಕ್ಷಿಣೆ ಹೊರಟಿರುತ್ತಾನೆ. ಆ ಸಂದರ್ಭದಲ್ಲಿ ಅವನು ಹರಿಯ ಪರವಾದ ಕೀರ್ತನವನ್ನು ಕೇಳುತ್ತಾನೆ. ದಾನವೇಂದ್ರನಿಗೆ ಇದು ತನ್ನ ಮಗನಾದ ಪ್ರಹ್ಲಾದನ ಮಾಟವೆಂದೇ ಅರಿವಾಗುತ್ತದೆ. ತನ್ನ ಕಿವಿಯಾರೆ ತಾನೇ ಕೇಳಿದ ಮಾತುಗಳಿಂದ ತಂದೆಯ ಕ್ರೋಧವು ಅಧಿಕವಾಗಿ ಇದಕ್ಕೆ ತಕ್ಕ ಕ್ರಮವನ್ನು ತೆಗೆದುಕೊಳ್ಳುವ ಬಗ್ಗೆ ಗಂಭೀರವಾಗಿ ಆಲೋಚಿಸುತ್ತಾನೆ.

ಪ್ರಹ್ಲಾದನ ವಿದ್ಯಾಭ್ಯಾಸದ ಬಗ್ಗೆ ಅವನ ವರ್ತನೆಗಳ ಬಗ್ಗೆ ಅಸಂತುಷ್ಟಗೊಂಡ ಅಸುರನು ಅವನ ಗುರುಗಳನ್ನು ಕ್ಷುದ್ರದ್ವಿಜರೆಂದೂ, ಹಿಂಸಕಸ್ವಭಾವದವರೆಂದೂ ಹೀಯಾಳಿಸಿ ಮಾತನಾಡುತ್ತಾನೆ. ತನ್ನ ಮಗನ ಹರಿಯ ಪರವಾದ ಸ್ತುತಿಯು ತನಗೆ ಅಸಹನೀಯವಾಗಿರುವುದೆಂದು ತಿಳಿಸಿ, ಅದು ತನ್ನ ರಾಜ್ಯದಲ್ಲಿರುವ ಇತರರನ್ನು ಮೋಸಗೊಳಿಸುತ್ತಿರುವುದಾಗಿ ನುಡಿದು, ಇದಕ್ಕೆ ಅವನ ಗುರುಗಳೇ ಕಾರಣರೆಂದು ಕೊಂಕುಮಾತುಗಳನ್ನಾಡಿ ತನ್ನ ಅರಮನೆಗೆ ಸರಸರನೆ ಹೊರಟು ಬರುತ್ತಾನೆ.

ಹಿರಣ್ಯಕಶಿಪುವಿಗೆ ಮಗನ ಬಗ್ಗೆ ಗಾಢವಾದ ಚಿಂತೆ ಆವರಿಸುತ್ತದೆ. ತನ್ನ ಅಂತ್ಯವು ಸಮೀಪಿಸಿದ ಅವನು ಪ್ರಹ್ಲಾದನ ಕೊಲೆಯ ಚಿಂತೆ ಮಾಡುತ್ತಾನೆ. ವೀರಭಟರನ್ನು, ಬಲಿಷ್ಠರಾದ ರಕ್ಕಸರನ್ನು ಕರೆದು ಅವರಿಗೆ ಗುಟ್ಟಾಗಿ ಪ್ರಹ್ಲಾದನ ವಧೆಯನ್ನು ಮಾಡಿ ಮುಗಿಸುವಂತೆ ಆದೇಶಿಸುತ್ತಾನೆ. ರಾತ್ರಿಯ ಹೊತ್ತಿನಲ್ಲಿ ಅವನು ನಿದ್ರೆ ಮಾಡುತ್ತಿರುವ ಸಮಯದಲ್ಲಿ ಅವನನ್ನು ಬಿಡಿಸಿಕೊಳ್ಳಲಾಗದ ನಾಗಪಾಶಗಳಿಂದ ಬಂಧಿಸಿ ಸಮುದ್ರದಲ್ಲಿ ಎಸೆದು ಬರುವಂತೆ ಅಪ್ಪಣೆ ಮಾಡುತ್ತಾನೆ.

ಪ್ರಹ್ಲಾದನನ್ನು ನಿಶಾಚರರು ದುರ್ಲಭವಾದ ನಾಗಪಾಶಗಳಿಂದ ಕಟ್ಟಿಹಾಕುತ್ತಾರೆ. ಶ್ರೀಮನ್ನಾರಾಯಣನಿಗೆ ಪ್ರಿಯನಾದ ಅವನನ್ನು ಮುನ್ನೀರಿನಲ್ಲಿ ಎಸೆದು ಬಿಡುತ್ತಾರೆ. ಅನಂತರ ಅವನ ಮೇಲೆ ಬಲವಾದ ಪರ್ವತಗಳನ್ನು ಹೇರಿ ಬೇಗನೆ ಹಿಂದಕ್ಕೆ ಬಂದು ದೈತ್ಯರಾಜನಿಗೆ ಹಿತವಾದ ಸಮಾಚಾರವನ್ನು ಹೇಳುತ್ತಾರೆ. ಅದಕ್ಕಾಗಿ ಅವನಿಂದ ಸೂಕ್ತ ಬಹುಮಾನವನ್ನೂ ಪಡೆಯುತ್ತಾರೆ. ಹಿರಣ್ಯಕಶಿಪು ಸಮಾಧಾನದ ನಿಟ್ಟುಸಿರನ್ನು ಬಿಡುತ್ತಾನೆ.

ಇತ್ತಕಡೆ ಆಳವಾದ ಸಮುದ್ರದಲ್ಲಿದ್ದ ಪ್ರಹ್ಲಾದನು ಮತ್ತೊಂದು ಬಡಬಾಗ್ನಿಯಂತೆ ಪ್ರಜ್ವಲಿಸುತ್ತಿರುತ್ತಾನೆ. ಅವನ ದಿವ್ಯಮಂಗಳವಾದ ರೂಪವನ್ನು ಕಂಡು ಮುನ್ನೀರಿನ ತಿಮಿಂಗಿಲಾದಿಗಳಾದ ಜಲಜಂತುಗಳು ಭಯದಿಂದ ದೂರ ಓಡಿಹೋಗುತ್ತವೆ. ಸಮಾಧಿಸ್ಥನಾಗಿ, ಅಖಂಡವಾದ ಬ್ರಹ್ಮಜ್ಞಾನದಿಂದ ಸಂತಸದಿಂದ ಇದ್ದ ಪ್ರಹ್ಲಾದನು ನಾಗಪಾಶಗಳಿಂದ ಕಟ್ಟಿಸಿಕೊಂಡು ತಾನು ಸಮುದ್ರದ ನಡುವೆ ಇರುವುದನ್ನು ಅರಿತವನಾಗಿರಲಿಲ್ಲ. ಅನಂತರದಲ್ಲಿ ಸಮುದ್ರದ ತರಂಗಗಳು ಅವನ ಸಂಕಷ್ಟಗಳನ್ನು ಕೊಡವಿಹಾಕಿದವು. ಸಮುದ್ರರಾಜನು ಅವನನ್ನು ಹಡಗಿನಿಂದ ಹೇಗೋ ಹಾಗೆ ದಾಟಿಸಿದನು. ಪೂಜ್ಯನಾದ ಸಮುದ್ರರಾಜನು

ಶ್ರೀಮಹಾವಿಷ್ಣುವಿನ ವಿಶೇಷಸನ್ನಿಧಾನಕ್ಕೆ ಒಡೆಯನಾದ ಪ್ರಹ್ಲಾದನನ್ನು ತೀರಕ್ಕೆ ಮುಟ್ಟಿಸಿದನು. ನಂತರ ಬೆಲೆಬಾಳುವ ಉಡುಗೊರೆಗಳನ್ನು ತೆಗೆದುಕೊಂಡು ಅವನನ್ನು ನೋಡಲು ಬಂದನು. ಶ್ರೀ ಮಹಾವಿಷ್ಣುವಿನ ಆಜ್ಞೆಗನುಸಾರವಾಗಿ, ಸರ್ಪಗಳನ್ನು ಆಹಾರವಾಗಿ ಉಳ್ಳ ಗರುಡ ದೇವನು ಸಂತೋಷದಿಂದ ಅಲ್ಲಿಗೆ ಬಂದು ಪ್ರಹ್ಲಾದನಿಗೆ ಕಟ್ಟಿದ್ದ ಸರ್ಪಗಳನ್ನು ತಿಂದುಹಾಕಿ ಅವನನ್ನು ವಿಮುಕ್ತಿಗೊಳಿಸಿದನು.

## ಪ್ರಹ್ಲಾದ-ಸಮುದ್ರರಾಜ

ಉತ್ತಮ ಆಕಾರವನ್ನು ಹೊಂದಿದವನಾಗಿ, ಶ್ರೀಹರಿಗೆ ಪ್ರಿಯನಾದವನೂ ಆಗಿದ್ದ ಪ್ರಹ್ಲಾದನಿಗೆ ಸಮುದ್ರರಾಜನು ನಮಸ್ಕರಿಸಿ, ಭಗವದ್ ಭಕ್ತನಾದ ಅವನ ಸಮೀಪಕ್ಕೆ ಬಂದಿರುವ ತನ್ನನ್ನು ಕಣ್ತೆರೆದು ನೋಡಬೇಕೆಂದು ಬೇಡುತ್ತಾನೆ. ತನ್ನನ್ನು ಪುನೀತನನ್ನಾಗಿ ಮಾಡಬೇಕೆಂದು ಪ್ರಾರ್ಥಿಸುತ್ತಾನೆ. ತಾನು ತಂದಿರುವ ಕಾಣಿಕೆಗಳನ್ನು ಸ್ವೀಕರಿಸಬೇಕೆಂದು ಕೋರಿ, 'ಭಕ್ತಿಯುಳ್ಳವನು ಸೂರ್ಯದೇವನಿಗೂ ಸಹ ದೀಪಗಳನ್ನರ್ಪಿಸುತ್ತಾನೆ' ಎಂಬ ಮಾತನ್ನಾಡುತ್ತಾನೆ.

ಪ್ರಹ್ಲಾದನಿಗೆ ಸಮುದ್ರರಾಜನ ಮಾತುಗಳಿಂದ ನಾಚಿಕೆಯಾಗಿ, ಪ್ರತಿಯಾಗಿ ಆತನಿಗೆ ವಂದನೆಗಳನ್ನರ್ಪಿಸಿ ಆತನನ್ನು ಶ್ಲಾಘಿಸುತ್ತಾನೆ. ಪ್ರಭುವಾದ ಶ್ರೀಹರಿಗೆ ಹಾಸಿಗೆಯಾದ ಆತನೇ ಧನ್ಯನೆಂದು ಸಮುದ್ರರಾಜನನ್ನು ಕೊಂಡಾಡುತ್ತಾನೆ. ತಾನು ಪ್ರಾರ್ಥಿಸಿದಾಗ ಮಾತ್ರವೇ ಶ್ರೀಹರಿಯನ್ನು ಕಾಣಲು ಸಮರ್ಥನಾಗಿರುವನಾದರೆ ಆತನು ಸದಾಕಾಲವೂ ಆ ಭಗವಂತನನ್ನು ಕಾಣುತ್ತಿರುವನೆಂದು ಹೊಗಳುತ್ತಾನೆ. ಶ್ರೀಹರಿಯು ಬ್ರಹ್ಮಕಲ್ಪದ ಕೊನೆಯಲ್ಲಿ ಜಗತ್ತನೆಲ್ಲ ನುಂಗಿ ಚಿರನಿದ್ರೆಯಲ್ಲಿ ಆತನನ್ನು ಹಾಸಿಗೆಯಾಗಿ ಹೊಂದಿ ಮಲಗುವನೆಂದು ಹೇಳಿ ಆತನನ್ನು ಅಭಿನಂದಿಸುತ್ತಾನೆ.

ಪ್ರಹ್ಲಾದ-ಸಮುದ್ರರಾಜರಲ್ಲಿ ಪರಸ್ಪರ ವಂದನೆ-ಪ್ರತಿವಂದನೆಗಳ ನಂತರ ನದೀ ಪತಿಯಾದ ಸಮುದ್ರರಾಜನು ಅದೃಶ್ಯನಾಗುವನು. ಆತನು ನಿರ್ದೇಶಿಸಿದಂತೆ ಪ್ರಹ್ಲಾದನು ಭಗವಂತನನ್ನು ಸ್ತುತಿಸಲು ಮಹಾವಿಷ್ಣುವು ಪ್ರತ್ಯಕ್ಷನಾಗಿ ಯಾವುದಾದರೊಂದು ವರವನ್ನು ಬೇಡಿಕೊಳ್ಳಲು ಹೇಳುವನು. ಆದರೆ ಪ್ರಹ್ಲಾದನು ತನಗೆ ಯಾವ ವರವೂ ಅಗತ್ಯವಿಲ್ಲವೆಂದೂ, ಆತನ ದಾಸ್ಯವೊಂದೇ ಸಾಕೆಂದೂ ಹೇಳುವನು. ಆದರೆ ಶ್ರೀಹರಿಯು ತಾನು ಆವನಿಗೆ ಏನನ್ನಾದರೂ ಕೊಡಲೇಬೇಕೆಂಬ ಇಚ್ಛೆಯಿರುವ ಕಾರಣ ಅವನು ಏನನ್ನಾದರೂ ಬೇಡಲೇ ಬೇಕೆಂದು ಆಗ್ರಹಿಸುವನು. ಆಗ ಪ್ರಹ್ಲಾದನು ತಾನು ಜನ್ಮಜನ್ಮಾಂತರಗಳಲ್ಲೂ ಶ್ರೀಹರಿಯಲ್ಲಿ ಗರುಡನಂತೆ ಭಕ್ತಿಯನ್ನು ಮಾಡಲು ಅನುಗ್ರಹಿಸಬೇಕೆಂದು ಕೋರಿಕೊಳ್ಳುವನು. ಅನುಗ್ರಹಿಸಿದ ಶ್ರೀಮನ್ನಾರಾಯಣನು ತಾನು ಇನ್ನೊಂದೆರಡು ದಿನದಲ್ಲಿಯೇ ಅವತರಿಸಿ ಬರುವುದಾಗಿ ಹೇಳಿ ಅಂತರ್ಧಾನನಾಗುವನು. ತಾನು ಆ ಕ್ಷಣದಲ್ಲಿ ಮರೆಯಾಗುತ್ತಿರುವುದಕ್ಕೆ ಕೋಪಿಸ ಬಾರದೆಂದು ಹೇಳಿದ ಕಾರಣವಾಗಿ ಪ್ರಹ್ಲಾದನಿಗೆ ಆಗ ಯಾವುದೇ ದುಃಖವಾಗಲಿಲ್ಲ.

ಪ್ರಹ್ಲಾದನು ನಾರಾಯಣ ಸ್ಮರಣೆಯನ್ನೆ ಮಾಡುತ್ತ ಪ್ರಾತಃಕಾಲದ ಕಲರವದಿಂದ ಎಚ್ಚೆತ್ತು ಬಂದವನ ಹಾಗೆ ಸಮುದ್ರದ ದಂಡೆಯಿಂದ ಗುರುಕುಲವನ್ನು ಸೇರುವನು.

ಸಮುದ್ರದಲ್ಲಿ ನಾಗಪಾಶಗಳಿಂದ ಬಂಧಿತನಾಗಿ ಕೆಡವಲ್ಪಟ್ಟ ಪ್ರಹ್ಲಾದನು ಸುರಕ್ಷಿತ ವಾಗಿ ವಾಪಸಾಗಿರುತ್ತಾನೆ. ಈತನು ಗುರುಕುಲದಲ್ಲಿರುವ ಸಂಗತಿಯನ್ನು ದೈತ್ಯಭಟರು ದಾನವೇಂದ್ರನಾದ ಹಿರಣ್ಯಕಶಿಪುವಿಗೆ ತಿಳಿಸುತ್ತಾರೆ. ತಂದೆಯು ಮಗನನ್ನು ಬರಮಾಡಿಕೊಂಡು ಅಕಾರಣವಾಗಿ ಕೋಪವನ್ನು ಪ್ರಕಟಿಸುತ್ತಾನೆ. ವ್ಯಗ್ರನಾದ ಅವನು ಪ್ರಹ್ಲಾದನಿಗೆ ತನ್ನ ಮಾತನ್ನು ಕೇಳಿಕೊಂಡಿದ್ದರೆ ಸರಿಯೆಂದೂ, ಇಲ್ಲವಾದರೆ ಅವನನ್ನು ಸಂಹರಿಸುವುದಾಗಿ ಅಬ್ಬರಿಸುತ್ತಾನೆ. ಚಂದ್ರಹಾಸವೆಂಬ ತನ್ನ ಕತ್ತಿಯನ್ನು ಹಿಡಿದು ಅವನು ಎಲ್ಲೆಡೆಯಲ್ಲಿಯೂ ಇರುವುದಾಗಿ ಹೇಳುತ್ತಿರುವ ಹರಿಯು ತನ್ನ ಮುಂದಿರುವ ಕಂಭದಲ್ಲಿ ಕಂಡುಬರಲಿಲ್ಲವಾದರೆ ಅವನನ್ನು ಇಬ್ಭಾಗವಾಗಿ ಸೀಳಿಹಾಕುವುದಾಗಿ ಬೊಬ್ಬೆಯಿಡುತ್ತಾನೆ.

## ನರಸಿಂಹ ದರ್ಶನ

ಭಾಗವತ ಶಿರೋಮಣಿಯಾದ ಪ್ರಹ್ಲಾದನು, ಶ್ರೀಮನ್ನಾರಾಯಣನು ಸಮುದ್ರದ ತಡಿಯಲ್ಲಿ ಹೇಳಿದ್ದ ನುಡಿಯನ್ನು ನೆನೆದು ಅವನನ್ನು ಹೃದಯದಲ್ಲಿ ಧ್ಯಾನಿಸುತ್ತಾನೆ. ಹಿರಣ್ಯಕಶಿಪು ಕತ್ತಿಯಿಂದ ಹೊಡೆದ ಕಂಭದಲ್ಲಿ ಆ ಕ್ಷಣದಲ್ಲಿ ಲೋಕವಿಚಿತ್ರವಾದ ನರಸಿಂಹ ರೂಪದಿಂದ ಹರಿಯು ಕಂಭದ ನಡುವೆ ಪ್ರತ್ಯಕ್ಷನಾಗುತ್ತಾನೆ. ಅತಿಶಯವಾದ ರೀತಿಯಲ್ಲಿ ವಿಚಿತ್ರರೂಪದಿಂದ ಕೂಡಿದ ನರಸಿಂಹಾಕೃತಿಯನ್ನು ಕೆಳಗೆ ಬಿದ್ದಿದ್ದ ಕತ್ತಿಯಲ್ಲಿ ಅಸುರನು ತನ್ನ ಪ್ರತಿಬಿಂಬದೊಂದಿಗೆ ಕಾಣುತ್ತಾನೆ.

ನರಸಿಂಹನ ರೂಪವು ಅತ್ಯಂತ ಕ್ರೋಧದಿಂದ ಕೂಡಿದ್ದಾಗಿತ್ತು. ಪೇರೊಡಲನ್ನು ಹೊಂದಿ ರಕ್ಕಸರಿಗೆ ಬೆಕ್ಕಸವನ್ನುಂಟು ಮಾಡುವ ಹಾಗಿತ್ತು. ದೊಡ್ಡ ಕಣ್ಣು, ಅಗಲವಾದ ಬಾಯಿ, ಭಯಂಕರವಾದ ಕೋರೆಹಲ್ಲುಗಳು, ನಿಡಿದಾದ ತೋಳುಗಳು, ಹರಿತವಾದ ಉಗುರುಗಳು, ಅಗಲವಾದ ಪಾದಗಳು, ಪ್ರಳಯಕಾಲದ ಅಗ್ನಿಗೆ ಸಮನಾದ ಮುಖ, ಕಿವಿಗಳವರೆಗೆ ತೆರೆದುಕೊಂಡ ಬಾಯಿ- ಈ ತೆರನಾದ ಲಕ್ಷಣಗಳಿಂದ ಕೂಡಿದ ನರಸಿಂಹ ಸ್ವಾಮಿಯು ಕಂಭದ ಮಧ್ಯದಿಂದ ಹೊರಗೆ ಆವಿರ್ಭವಿಸಿದನು.

ಹಿರಣ್ಯಕಶಿಪು ಕತ್ತಿಯಲ್ಲಿ ಕಂಡ ನರಸಿಂಹಾಕೃತಿಯು ತನ್ನ ಎದುರಿಗೆ ಬಂದು ನಿಂತಾಗ ಅಸಂಖ್ಯ ದೈತ್ಯಪಡೆಯನ್ನು ಆತನ ಮೇಲೆರಗಲು ಕಳುಹಿಸುತ್ತಾನೆ. ನರಸಿಂಹನು ತನ್ನ ಮೇಲೆ ಯುದ್ಧಕ್ಕೆ ಬಂದ ರಾಕ್ಷಸ ಪಡೆಯನ್ನೆಲ್ಲ ಅಲ್ಪಸಮಯದಲ್ಲಿಯೇ ಸಂಹರಿಸುತ್ತಾನೆ. ಆ ವೇಳೆಗೆ ರವಿಯು ಆಗಸದಿಂದ ಕಣ್ಮರೆಯಾಗುತ್ತಾನೆ. ಹಿಡಿಯಿರಿ, ಕೊಲ್ಲಿರಿ ಎಂದು ಕೂಗುತ್ತಿದ್ದ ಹಿರಣ್ಯಕಶಿಪುವನ್ನು ಹಿಡಿದು ಸಂಜೆಯ ಹೊತ್ತಿನಲ್ಲಿ ಹೊಸ್ತಿಲಿನ ಮೇಲೆ ಕುಳಿತು ಅವನ ಹೃದಯವನ್ನು ಸೀಳಿಹಾಕುತ್ತಾನೆ. ಹೃದಯದ ಎರಡು ಹೋಳುಗಳೂ ಮಹಾತ್ಮನಾದ ಶ್ರೀಹರಿಯ ಉಗುರಿನ ಸಂದಿನಲ್ಲಿ ಸಿಕ್ಕಿಕೊಂಡು ಕಾಣದಂತಾಗಲು ತನ್ನೆರಡು

ಕೈಗಳನ್ನು ಮೇಲೆತ್ತಿ ಬಲವಾಗಿ ಕೊಡಹಿದಾಗ ಉಗುರಿನ ಸಂದಿನಿಂದ ಎರಡು ಹೋಳುಗಳೂ ನೆಲದ ಮೇಲೆ ಬಿದ್ದುದನ್ನು ನೋಡಿ ಭಗವಂತನಿಗೇ ನಗು ಬಂದಿತಂತೆ.

ನರಸಿಂಹನ ತಲೆಯ ಮೇಲೆ ಹೂಮಳೆಗರೆದು ದೇವತೆಗಳು ಆತನ ಸಮೀಪಕ್ಕೆ ಬರುತ್ತಾರೆ. ನರಸಿಂಹನನ್ನು ಸ್ತುತಿಸಿ ಅವನನ್ನು ಶಾಂತಗೊಳಿಸುತ್ತಾರೆ. ಆತನಿಗೆ ಪೂಜಾದಿಗಳು ಸಲ್ಲುತ್ತವೆ. ನಂತರ ಪ್ರಹ್ಲಾದನು ದೈತ್ಯರೊಡೆಯನಾಗಿ ಪಟ್ಟಾಭಿಷಿಕ್ತನಾಗುತ್ತಾನೆ. ಇಂದ್ರನಿಗೆ ಮತ್ತೆ ದೇವರಾಜ ಪದವಿ ದೊರೆಯುತ್ತದೆ. ನರಸಿಂಹನು ಎಲ್ಲ ಲೋಕಗಳಿಗೂ ಸೊಗವನ್ನುಂಟುಮಾಡುವ ಸಲುವಾಗಿ ಶ್ರೀಶೈಲದ ಶಿಖರವನ್ನೇರುತ್ತಾನೆ.

*ಆಧಿವ್ಯಾಧಿ-ಮಹಾಭೀತಿ-ಮಹಾದುಃಖನಿವಾರಕ /*
*ಅಪಾರ ಕರುಣಾಸಿಂಧೋ ದಿವ್ಯಸಿಂಹ ನಮೋಸ್ತು ತೇ//*
*ಉಗ್ರಸಿಂಹ ಮಹಾಸಿಂಹ ತೀಕ್ಷ್ಣದಂಷ್ಟ್ರ ನಖಾಯುಧ /*
*ಸ್ತಂಭಸಂಭವ ಮಾಂ ರಕ್ಷ ಪ್ರಹ್ಲಾದಮಿವ ಬಾಲಕಂ//*

## ನರಸಿಂಹ ಪ್ರಾದುರ್ಭಾವ

*ಅತಿರೌದ್ರಂ ಮಹಾಕಾಯಂ ದಾನವಾನಾಂ ಭಯಂಕರಮ್/*
*ಮಹಾನೇತ್ರಂ ಮಹಾವಕ್ತ್ರಂ ಮಹಾದಂಷ್ಟ್ರಂ ಮಹಾಭುಜಮ್ //*

*ಮಹಾನಖಂ ಮಹಾಪಾದಂ ಕಾಲಾಗ್ನಿಸದೃಶಾನನಮ್/*
*ಕರ್ಣಾಂತಕೃತ ವಿಸ್ತಾರವದನಂ ಚಾತಿಭೀಷಣಮ್ //*

*ಕೃತ್ವೇತ್ಥಂ ನಾರಸಿಂಹಂ ತುಯಯೌ ವಿಷ್ಣುಸ್ತ್ರಿವಿಕ್ರಮಃ /*
*ನರಸಿಂಹಃ ಸ್ತಂಭಮಧ್ಯಾನ್ನಿರ್ಗತ್ಯ ಪ್ರಣನಾದ ಚ //*

– ಅತ್ಯಂತ ಕ್ರೋಧಗೊಂಡ, ಹೇರೊಡಲಿನ, ರಕ್ಕಸರಿಗೆ ಬೆಕ್ಕಸವನ್ನೆಸಗುವ, ದೊಡ್ಡಗಣ್ಣಿನ, ಅಗಲವಾದ ಬಾಯ, ದೊಡ್ಡ ಕೋರೆಯ ಹಲ್ಲಿನ, ನಿಡಿದಾದ ತೋಳ್ಗಳ, ದೊಡ್ಡ ಉಗುರುಗಳ, ದೊಡ್ಡ ಅಡಿಯ, ಪ್ರಳಯಕಾಲದ ಅಗ್ನಿಗೆ ಸಮನಾದ ಮೊಗದ, ಕಿವಿಗಳವರೆಗೆ ಬಿತ್ತರಿಸಿದ ಬಾಯ, ಕಡುಬಿಗುರ್ವಿನ ಈ ತೆರನಾದ ಶ್ರೀ ನರಸಿಂಹರೂಪವನ್ನು ತ್ರಿವಿಕ್ರಮನಾದ ಶ್ರೀ ವಿಷ್ಣುವು ಪ್ರಕಟಿಸಿ ಬಂದನು. ಶ್ರೀ ನರಸಿಂಹಸ್ವಾಮಿಯು ಕಂಭದ ನಡುವಣಿಂದ ಹೊರಗೆ ಆವಿರ್ಭವಿಸಿ ಬಂದನು.

( ನರಸಿಂಹ ಪುರಾಣದಿಂದ )



## ಅಧ್ಯಾಯ - 5

# ಹರಿವಂಶ

ಮಹಾಭಾರತವು ಭಾರತೀಯರ ವಿಶೇಷ ಆದರ ಪುರಸ್ಕಾರಗಳಿಗೆ ಪಾತ್ರವಾಗಿರುವ ಸತ್ಕೃತಿಯಾಗಿದೆ. ಇದು ಶ್ರೇಷ್ಠ ಕಾವ್ಯವಾಗಿ, ಇತಿಹಾಸ-ಧರ್ಮಗಳನ್ನು ಪ್ರಸಾರ ಮಾಡುವ ಸಾಹಿತ್ಯ ರಚನೆಯಾಗಿ ಪ್ರಸಿದ್ಧವಾಗಿದೆ. ಕಾಲದಿಂದ ಕಾಲಕ್ಕೆ ತನ್ನ ಗಾತ್ರವನ್ನು ಹಿಗ್ಗಿಸಿಕೊಂಡು ಸಾಗಿರುವ ಈ ಮೇರುಕೃತಿಯಲ್ಲಿ ಈಗಿರುವ ಶ್ಲೋಕಗಳ ಸಂಖ್ಯೆ ೮೨ ಸಾವಿರ. ದೇಶದ ಪ್ರಮುಖ ಭಾಷೆಗಳ ವಿಶಿಷ್ಟ ಪ್ರಕಾರಗಳ ಸಾಹಿತ್ಯಕೃತಿಗಳಿಗೆ ಇದು ವಸ್ತುವನ್ನೊದಗಿಸುತ್ತಿದೆ. ಇದರ ರಚನಾಕಾಲವನ್ನು ಸುಮಾರು ಕ್ರಿ.ಪೂ. ಮೂರನೆಯ ಶತಮಾನವೆಂದು ಊಹಿಸಲಾಗಿದೆ. ಅಂದಿನಿಂದ ಇಂದಿನವರೆಗೆ ಲೋಕೋತ್ತರ ಪರಿಣತವಾದ ಕೃತಿಯಾಗಿ ಚಿರಸ್ಥಾಯಿಯಾಗಿರುವ ಮಹಾ ಭಾರತಕ್ಕೆ ಪೂಜ್ಯತಮ ಸ್ಥಾನವೂ ದೊರೆತಿದೆ. ಇದರಲ್ಲಿ ಬಂದಿರುವ ಅನೇಕ ಪ್ರಮುಖವಾದ ಘಟನೆಗಳು ಮಾನವ ಜೀವನದ ಮೇಲೆ ಬೆಳಕನ್ನು ಚೆಲ್ಲಿದೆ. ಅವನ ಅಧ್ಯಾತ್ಮ ಬದುಕಿಗೆ ಲೌಕಿಕ ರೀತಿನೀತಿಗಳಿಗೆ ಮಾರ್ಗದರ್ಶನವನ್ನು ನೀಡುತ್ತಿವೆ.

ಮಹಾಭಾರತದಲ್ಲಿ ಒಟ್ಟು ಹದಿನೆಂಟು ಪರ್ವಗಳಿವೆ. ಇದೊಂದು ಲೋಕರೂಢಿಯಲ್ಲಿರುವ ಮಾತು. ಆದರೆ ಇದರಲ್ಲಿರುವ ಹತ್ತೊಂಬತ್ತನೆ ಪರ್ವವು ಈ ಸಂದರ್ಭದಲ್ಲಿ ವಿಚಾರಯೋಗ್ಯವಾದದ್ದು. ಇದನ್ನು ಹರಿವಂಶ ಪರ್ವವೆಂದು ಕರೆಯುತ್ತಾರೆ. ಹದಿನೆಂಟು ಪರ್ವಗಳ ತೊಂಬತ್ತೆಂಟು ಉಪಪರ್ವಗಳೊಂದಿಗೆ ಹರಿವಂಶದ ಎರಡನ್ನು ಕೂಡಿಸಿ ಮಹಾಭಾರತದಲ್ಲಿರುವುದು ಒಟ್ಟು ನೂರು ಪರ್ವಗಳೆಂದು ಹೇಳಬಹುದು. ಇದನ್ನು ಖಿಲಭಾಗವೆಂದು ಕರೆಯಲಾದ ಕಾರಣ ವಿಶೇಷವಾಗಿ ನಮ್ಮ ಗಮನಕ್ಕೆ ಬಾರದಿರಬಹುದು. ಖಿಲವೆಂದರೆ ಕಳೆದು ಹೋದದ್ದು ಅಥವಾ ಬಿಟ್ಟುಹೋಗಿದ್ದು ನಂತರ ಸೇರ್ಪಡೆಯಾದದ್ದು ಎಂಬರ್ಥವಿದೆ. ಇದನ್ನು ಯಾವುದೋ ಕಾಲದಲ್ಲಿ ಸೇರಿಸಿದ್ದಿರಬೇಕು. ಈ ಕಾರಣವಾಗಿ ಇದರ ರಚನೆ ಕಾಲದ ಬಗ್ಗೆ ಕುತೂಹಲ ಉಂಟಾಗದಿರದು.ಇದೇನೇ ಆದರೂ ಮಹಾಭಾರತದ ರಚನೆಯಾದ ಬಹುಕಾಲದ ನಂತರ, ಪ್ರಸಿದ್ಧ ಪುರಾಣಗಳಾದ ಭಾಗವತ, ವಿಷ್ಣುಪುರಾಣಗಳ ರಚನೆಯ ಅನಂತರ ಇದು ಮಹಾಭಾರತದಲ್ಲಿ ಸೇರ್ಪಡೆಯಾಗಿರಬಹುದಾಗಿದೆ.

## ಕೃತಿಸ್ವರೂಪ

ಹರಿವಂಶವನ್ನು ಮಹಾಭಾರತದ ಖಿಲಭಾಗ ಅಥವಾ ಅನುಬಂಧವೆಂದೂ ಹೇಳಲಾಗುತ್ತದೆ. ಇದರಲ್ಲಿ ಮೂರು ಉಪವಿಭಾಗಗಳಿವೆ. ಕ್ರಮವಾಗಿ ಇದನ್ನು ಹರಿವಂಶ ಪರ್ವ, ವಿಷ್ಣುಪರ್ವ ಮತ್ತು ಭವಿಷ್ಯಪರ್ವಗಳೆಂದು ಕರೆದಿದ್ದಾರೆ. ಮೊದಲೆರಡನ್ನು ಆದಿಪರ್ವವೆಂದು ಕರೆಯಬಹುದಾದರೆ ಮತ್ತೊಂದು ಭವಿಷ್ಯಪರ್ವವೆಂದು ಹೇಳಿ ಇದನ್ನು ಎರಡು ಉಪಪರ್ವಗಳೆಂದು ನಿಶ್ಚಯಿಸಲಾಗಿದೆ. ಇದರಲ್ಲಿರುವ ಒಟ್ಟು ಶ್ಲೋಕಗಳ ಸಂಖ್ಯೆ ಹನ್ನೆರಡು ಸಾವಿರ. ಸರ್ಗಗಳು ಮೂರುನೂರಾ ಹದಿನೇಳು. ಮೊದಲನೆಯ ಉಪ ಪರ್ವವು ಪುರಾಣದ ಛಾಯೆಯೆಂಬಂತೆ ಭಾಸವಾದ ಕಾರಣ ಇದನ್ನು ಪುರಾಣವೆಂದು ಭಾವಿಸಿರಬಹುದು.

ಪುರಾಣ ಲಕ್ಷಣಕ್ಕೆ ಸೇರುವ ವಂಶಾವಳಿಗಳ ವಿವರಣೆ ಇಲ್ಲಿ ಬಂದಿದೆ. ವಿಷ್ಣುವಿನ ಅವತಾರ ಲೀಲೆಗಳನ್ನು ಹರಿವಂಶ ಪರ್ವದಲ್ಲಿ ವಿವರಿಸಲಾಗಿದೆ. ಇದರಲ್ಲಿ ಹಿರಣ್ಯಾಕ್ಷ-ಹಿರಣ್ಯಕಶ್ಯಪರ ಕಥೆಯೂ ಅಡಕವಾಗಿದೆ. ಎರಡನೆಯದಾದ ವಿಷ್ಣುಪರ್ವವು ಕೃಷ್ಣನ ಜೀವನಕಥೆಯ ವಿವರವಾಗಿದೆ. ಭವಿಷ್ಯ ಪರ್ವವು ಭವಿಷ್ಯದ ವೃತ್ತಾಂತಗಳನ್ನು ಒಳಗೊಂಡಿರುವುದಾದರೂ ಇಲ್ಲಿಯೂ ಪ್ರಾಸಂಗಿಕವಾಗಿ ಹಿರಣ್ಯಾಕ್ಷ-ಹಿರಣ್ಯಕಶ್ಯಪರ ವಿವರವಾದ ಕಥೆಯು ಒಳಗೊಂಡಿರುತ್ತದೆ. ಈ ಎಲ್ಲ ವಿಚಾರಗಳ ಹಿನ್ನೆಲೆಯಲ್ಲಿ ನೋಡುವುದಾದರೆ ಹರಿವಂಶವು ವಿಷ್ಣುಪುರಾಣ, ಭಾಗವತ ಮತ್ತು ಭವಿಷ್ಯ ಪುರಾಣಗಳಿಂದ ಮೂಲ ಆಕರ ಮತ್ತು ಪ್ರೇರಣೆಯನ್ನು ಪಡೆದಿರುವುದು ಸ್ಪಷ್ಟವಾಗುತ್ತದೆ.

## ಪ್ರಹ್ಲಾದ ಜನನದ ವೃತ್ತಾಂತ

ಶ್ರೀಹರಿಯು ವರಾಹಾವತಾರದಿಂದ ಹಿರಣ್ಯಾಕ್ಷನನ್ನು ಸಂಹರಿಸುತ್ತಾನೆ. ತನ್ನ ಮಗನನ್ನು ಕೊಂದ ವಾರ್ತೆಯು ತಾಯಿ ದಿತಿದೇವಿಗೆ ಶೋಕವನ್ನುಂಟು ಮಾಡುತ್ತದೆ. ಆಕೆಯು ತನ್ನ ಮಕ್ಕಳ ದುರ್ವರ್ತನೆಗೆ ಬೇಸರಿಸುತ್ತಾಳೆ. ಅವರ ದೇವದ್ರೋಹ, ಧರ್ಮದ್ವೇಷದ ಕೃತ್ಯಗಳು ಅವಳಲ್ಲಿ ಬೇಗುದಿಯನ್ನುಂಟು ಮಾಡುತ್ತದೆ. ಮಕ್ಕಳ ಗತಿ ಹೀಗಾಗಿರುವಾಗ ಮೊಮ್ಮಕ್ಕಳಲ್ಲಿ ಯಾರಾದರೂ ಭಗವದ್ ಅನುಗ್ರಹಕ್ಕೆ ಪಾತ್ರರಾಗಲೆಂಬ ಹಂಬಲವು ಆಕೆಯಲ್ಲಿ ಉಂಟಾಗುತ್ತದೆ. ಈ ವಿಚಾರವಾಗಿ ಆಕೆಯು ನಾರಾಯಣನಲ್ಲಿ ಪ್ರಾರ್ಥಿಸುತ್ತಾಳೆ. ವೈಷ್ಣವಾಗ್ರೇಸರನೂ ಮಹಾತ್ಮನೂ ಆದ ಮೊಮ್ಮಗನು ಅತಿಶೀಘ್ರದಲ್ಲಿ ಜನಿಸಿ ಕುಲ ಕೋಟಿಯನ್ನು ಉದ್ಧಾರ ಮಾಡುವನೆಂದು ಆಕೆಗೆ ಶ್ರೀಮನ್ನಾರಾಯಣನು ಆಶ್ವಾಸನೆ ನೀಡುತ್ತಾನೆ. ಪ್ರಹ್ಲಾದನ ಜನನಕ್ಕೆ ಕಾರಣವಾದ ಹಿನ್ನೆಲೆ ಹರಿವಂಶದಲ್ಲಿ ಈ ರೀತಿ ವರ್ಣಿತವಾಗಿದೆ.

ಪ್ರಹ್ಲಾದನು ಭಾಗವತೋತ್ತಮನಾಗಿ ನಮ್ಮ ಪುರಾಣ ಸಾಹಿತ್ಯದಲ್ಲಿ ಕಂಡುಬರುತ್ತಾನೆ. ಭಾಗವತ, ವಿಷ್ಣುಪುರಾಣ, ನರಸಿಂಹಪುರಾಣಗಳಲ್ಲಿ ಈತನಿಗಿರುವ ಸ್ಥಾನ ವಿಶಿಷ್ಟವಾದದ್ದೆಂದು ಹೇಳಬಹುದು. ಭಗವಂತನ ದುಷ್ಟಶಿಕ್ಷಣ ಕಾರ್ಯಕ್ಕೆ ಕಾರಣಪುರುಷನಾದವನು ಭಕ್ತಪ್ರಹ್ಲಾದ.

ಕ್ರೂರವಾದ ಹಿಂಸೆ, ಮೇರೆವರಿಯದ ಕಿರುಕುಳಗಳಿಗೆ ಒಳಗಾಗಿ ತಾನು ನಂಬಿದ ದೇವರನ್ನು ಕಂಭದಲ್ಲಿ ಸಾಕ್ಷಾತ್ಕರಿಸಿಕೊಂಡು, ಭಾಗವತರಲ್ಲಿ ಅಗ್ರಗಣ್ಯವಾದ ಸ್ಥಾನಕ್ಕೆ ಈತನು ಏರಿದ್ದಾನೆ. ಇಂಥವನ ಹುಟ್ಟಿಗೆ ದಿತಿದೇವಿಯ ಪ್ರಾರ್ಥನೆಯು ಕಾರಣವಾದ ಸನ್ನಿವೇಶವನ್ನು ಹರಿವಂಶದಲ್ಲಿ ಕಾಣಬಹುದಾಗಿದೆ.

## ತಪಸ್ಸು-ಪರೀಕ್ಷೆ

ಸೋದರನ ವಧೆಯು ಹಿರಣ್ಯಕಶಿಪುವಿನಲ್ಲಿ ಸಂತಾಪವನ್ನಷ್ಟೇ ಅಲ್ಲದೆ ದ್ವೇಷವನ್ನೂ ಹುಟ್ಟಿಸುತ್ತದೆ. ಇದಕ್ಕೆ ಕಾರಣನಾದ ಶ್ರೀಹರಿಯ ಹುಟ್ಟನ್ನೇ ಅಡಗಿಸಿಬಿಡಬೇಕೆಂದು ಅವನು ಸಂಕಲ್ಪಿಸುತ್ತಾನೆ. ವಿಷ್ಣುವನ್ನು ಎದುರಿಸುವುದೆಂದರೆ ಅದು ಅಷ್ಟು ಸುಲಭವಾದ ಕಾರ್ಯವಲ್ಲ. ಅದಕ್ಕೆ ವಿಶೇಷ ಶಕ್ತಿಸಾಮರ್ಥ್ಯಗಳೇ ಇರಬೇಕು. ಇದನ್ನು ಸಂಪಾದಿಸುವುದಕ್ಕಾಗಿ ದೈತ್ಯರ ಸಾರ್ವಭೌಮನಾದ ಅವನು ಸುಮಾರು ಹತ್ತು ಸಾವಿರ ವರ್ಷಗಳಿಗೂ ಅಧಿಕ ಕಾಲದ ತಪಸ್ಸನ್ನಾಚರಿಸುತ್ತಾನೆ. ಮಂದರ ಪರ್ವತದ ತಪ್ಪಲಿನಲ್ಲಿ ನಿದ್ರೆ ಆಹಾರಗಳನ್ನು ಬಿಟ್ಟು ಘೋರವಾದ ತಪಸ್ಸಿನಲ್ಲಿ ನಿರತನಾಗುತ್ತಾನೆ. ಉಗ್ರವಾದ ತಪಸ್ಸು, ಕಠೋರನಿಷ್ಠ ನಿಶ್ಚಲವಾದ ಧ್ಯಾನಗಳಿಗೆ ಬ್ರಹ್ಮದೇವನು ಪ್ರಸನ್ನನಾಗುತ್ತಾನೆ. ಆತನು ಹಿರಣ್ಯಕಶ್ಯಪನಿಗೆ ಬೇಕಾದ ವರವನ್ನು ಬೇಡಿಕೊಳ್ಳುವಂತೆ ಅಕ್ಕರೆಯಿಂದ ನುಡಿಯುತ್ತಾನೆ.

ದೇವ-ಮಾನವ, ಯಕ್ಷ-ಗಂಧರ್ವ, ರಾಕ್ಷಸರಾರಿಂದಲೂ ತನಗೆ ಸಾವು ಬರಬಾರದು. ಅಸ್ತ್ರ-ಶಸ್ತ್ರಗಳಿಂದಾಗಲಿ, ಗಿಡಗುದ್ದ-ಹಸಿಒಣ ವಸ್ತುಗಳಿಂದಾಗಲೀ ತನಗೆ ಮರಣ ಪ್ರಾಪ್ತ ವಾಗಬಾರದು. ಹಗಲಿನಲ್ಲಾಗಲೀ, ರಾತ್ರಿಯಲ್ಲಾಗಲೀ, ಒಳಗಾಗಲೀ, ಹೊರಗಾಗಲೀ ಸ್ವರ್ಗ, ಭೂಮಿ, ಪಾತಾಳಗಳು ತನ್ನ ಸಾವಿನ ನೆಲೆಯಾಗಬಾರದೆಂದು ದೈತ್ಯರಾಜನು ಬ್ರಹ್ಮದೇವನಿಗೆ ಮನವಿ ಮಾಡುತ್ತಾನೆ. ತನಗೆ ಮರಣವು ಪ್ರಾಪ್ತವಾಗುವುದೇ ಆದರೆ ತನ್ನನ್ನೂ ತನ್ನ ಪರಿವಾರದವರನ್ನೂ ಬರಿಗೈಲಿಂದಲೇ ಹೊಡೆದು ಬಡಿದು ಕೊಲ್ಲಬಲ್ಲ ವೀರಪುರುಷನಿಂದ ಮಾತ್ರವೇ ಅದು ಸಾಧ್ಯವಾಗಬೇಕೆಂದೂ, ಅವನು ಸೃಷ್ಟಿ ಪುರುಷನಲ್ಲಿ ಪ್ರಾರ್ಥನೆ ಸಲ್ಲಿಸುತ್ತಾನೆ. ತಾನು ದಿಕ್ಪಾಲಕರಂತೆ ಸಮರ್ಥಶಾಲಿಯಾಗಬೇಕೆಂದೂ, ಅರ್ಥಾತ್ ತಾನೇ ದಿಕ್ಕುಗಳೆಲ್ಲದರ ಅಧಿಪತಿಯಾಗಬೇಕೆಂದು ವರವನ್ನು ಕೇಳುತ್ತಾನೆ. ಇದೆಲ್ಲಕ್ಕೂ ಬ್ರಹ್ಮದೇವನು ತಥಾಸ್ತು ಎನ್ನಲೇಬೇಕಾಗುತ್ತದೆ.

ಹಿರಣ್ಯಕಶಿಪುವು ಬ್ರಹ್ಮದೇವನಿಂದ ಪಡೆದ ವರದ ಸ್ವಭಾವ-ಪ್ರಭಾವಗಳನ್ನು ಪರೀಕ್ಷಿಸುವ ಕಾರ್ಯದಲ್ಲಿ ತೊಡಗುತ್ತಾನೆ. ಅವನು ಬ್ರಾಹ್ಮಣರನ್ನು ಹಿಂಸಿಸುತ್ತಾನೆ. ದೇವತೆಗಳನ್ನು ಕಾಡಿ ಪೀಡಿಸುತ್ತಾನೆ. ಯಾರಿಂದಲೂ ಅವನಿಗೆ ಪ್ರತಿರೋಧವುಂಟಾಗಲಿಲ್ಲ. ಎಲ್ಲರೂ ಎಲ್ಲವೂ ಅವನಿಗೆ ವಶವಾಗುತ್ತವೆ. ಧನ-ಕನಕಗಳಿಗೆಲ್ಲ ಅವನು ಅಧಿಪತಿಯಾಗುತ್ತಾನೆ. ಸ್ವರ್ಗಲೋಕವು ದೈತ್ಯರಾಜನ ವಾಸಸ್ಥಾನವಾಗುತ್ತದೆ. ದೈತ್ಯರಿಗೂ ಯಜ್ಞದಲ್ಲಿ ಪಾಲು ದೊರೆಯುತ್ತದೆ. ಇವನ ಉಪಟಳವು ಅಧಿಕವಾದಾಗ ದೇವ-ರುದ್ರ-ಮರುತ್ ಗಣಗಳೆಲ್ಲ ಶ್ರೀಹರಿಯಲ್ಲಿ ಮೊರೆ ಹೋಗಲು, ಆತನು ಅಸುರನ ಅಂತ್ಯದ ಕಾಲವು ಸನ್ನಿಹಿತವಾಗಿರುವುದೆಂದು ಹೇಳಿ ಅವನನ್ನು ಕೊಲ್ಲಲು ತಾನೇ ಆಗಮಿಸುವುದಾಗಿ ತಿಳಿಸುತ್ತಾನೆ.

ಶ್ರೀಹರಿಯು ಆಶ್ವಾಸನೆ ನೀಡಿದಂತೆ ವಿಚಿತ್ರವಾದ ವೇಷವನ್ನು ಧರಿಸಿ ಹಿರಣ್ಯ ಕಶಿಪುವಿನ ಆಸ್ಥಾನಕ್ಕೆ ಬರುತ್ತಾನೆ. ಆಗ ಕೋಟಿಮಿಂಚುಗಳು ಒಮ್ಮೆಲೇ ಹೊಳೆದಂತೆ ಆಗುತ್ತದೆ. ಮೋಡದಿಂದ ಅಗಾಧವಾದ ಮೊಳಗು ಕೇಳಿಬರುತ್ತದೆ. ಆತನು ಸಿಂಹದ ಗಾಂಭೀರ್ಯದಿಂದಲೂ, ಹುಲಿಯ ಚಾತುರ್ಯದಿಂದಲೂ ದೈತ್ಯನಿರುವಲ್ಲಿಗೆ ಬರುತ್ತಾನೆ. ಆ ಸಂದರ್ಭದಲ್ಲಿ ದೈತ್ಯರಾಜನು ಸಂಗೀತ-ನೃತ್ಯಗಳಿಂದ ಕೂಡಿ ಆನಂದದಲ್ಲಿ ತಲ್ಲೀನನಾಗಿರು ತ್ತಾನೆ. ಅವನ ಆಸ್ಥಾನದಲ್ಲಿದ್ದವರಿಗೆಲ್ಲಾ ನರಸಿಂಹರೂಪವು ಭಯ-ವಿಸ್ಮಯಗಳನ್ನುಂಟು ಮಾಡುತ್ತಿರುವುದಾದರೆ, ಪ್ರಹ್ಲಾದನಿಗೆ ಮಾತ್ರ ಅಲ್ಲಿಗೆ ಬಂದವನು ಸಾಕ್ಷಾತ್ ಶ್ರೀಹರಿ ಅಲ್ಲದೆ ಬೇರಾರೂ ಅಲ್ಲವೆಂದು ಅರಿವಾಗುತ್ತದೆ. ಅವನ ಅಂತರಂಗದ ಅರಿವಿನ ಹಿಂದೆ ದೈವ ಸಾಕ್ಷಾತ್ಕಾರವಿರುವುದನ್ನು ಈ ಸಂದರ್ಭದಲ್ಲಿ ಅರಿತುಕೊಳ್ಳಬಹುದು.

ಪ್ರಹ್ಲಾದನಿಗೆ ನರಸಿಂಹಾಕೃತಿಯನ್ನು ಕಂಡಾಗ ಅದರಲ್ಲಿ ಸಮಸ್ತವೂ ಅಡಗಿರುವಂತೆ ಭಾಸವಾಗುತ್ತದೆ. ದೈತ್ಯಕುಲ ನಿರ್ನಾಮಕ್ಕಾಗಿಯೇ ಈತನ ಆಗಮನವಾಗಿರುವುದೆಂದು ಅವನು ತನ್ನ ತಂದೆಗೆ ಅರುಹುತ್ತಾನೆ. ಕೈಮುಗಿದು ಬೇಡಿಕೊಳ್ಳುತ್ತಾನೆ. ಹರಿವಂಶದಲ್ಲಿ ಕಂಡು ಬರುವ ಇಂಥದ್ದೊಂದು ಪ್ರಸಂಗವು ಕುತೂಹಲವಾದದ್ದೆಂದು ಹೇಳಬೇಕು. ನರಸಿಂಹ ಅವತಾರದ ಕಾರ್ಯಕಾರಣ ಸಂಬಂಧಗಳಲ್ಲಿ ಇದೊಂದು ವಿನೂತನವಾದ ವಿಚಾರವನ್ನಾಗಿ ನಾವಿಲ್ಲಿ ಪರಿಭಾವಿಸಬೇಕಾಗಿದೆ. ಭಗವಂತನ ಭಕ್ತನಾದ ಪ್ರಹ್ಲಾದನಿಗಲ್ಲದೆ ಅನ್ಯರಿಗೆ ಈ ಸಂದರ್ಭವು ಅರಿವಾಗುವುದಿಲ್ಲ.

ಹಠಾತ್ತನೆ ತಾನು ಕುಳಿತ ಎತ್ತರವಾದ ಸಿಂಹಾಸನದ ಮುಂದೆ ಕಾಣಿಸಿಕೊಂಡ ಆ ವಿಚಿತ್ರ ಮನುಷ್ಯಪ್ರಾಣಿಯನ್ನು ಕೊಂದುಬಿಡಲು ಹಿರಣ್ಯಕಶಿಪು ಅಪ್ಪಣೆ ಮಾಡಿ ಗರ್ಜಿಸುತ್ತಾನೆ. ಅವನೂ ಅವನ ವೀರಸೈನಿಕರೆಲ್ಲರೂ ಹೋರಾಡುತ್ತಾರೆ. ಅನೇಕ ವಿಧವಾದ ಆಯುಧಗಳ ಬಳಕೆಯಾಗುತ್ತದೆ. ಎಲ್ಲವೂ ವಿಫಲಗೊಳ್ಳುತ್ತವೆ. ಭೀಕರವಾದ ಅಪಶಕುನಗಳು ಉಂಟಾಗುತ್ತವೆ. ಬೆಟ್ಟಗಳು ನಡುಗಿ ಭೂಮಿಯು ಥರಥರನೆ ಕಂಪಿಸುತ್ತದೆ. ಆಕಾಶದಲ್ಲಿ ಉಲ್ಕೆಗಳು ಉರುಳಿ, ಧೂಮಕೇತುಗಳು ಮೂಡುತ್ತವೆ. ಗುರುಗಳಾದ ಶುಕ್ರಾಚಾರ್ಯರು ಹಿರಣ್ಯಕಶ್ಯಪನ ಅಂತ್ಯಸಮಯವನ್ನು ಗ್ರಹಿಸಿ ಅದನ್ನು ತಿಳಿಸಿ ತಮ್ಮ ನಿವಾಸಕ್ಕೆ ತೆರಳುತ್ತಾರೆ.

ನರಸಿಂಹನು ಗದಾಪಾಣಿಯಾದ ಹಿರಣ್ಯಕಶಿಪುವನ್ನು ಹಾರಿ ಹಿಡಿದು ಬಲವಾದ ಪೆಟ್ಟುಕೊಟ್ಟು ಬೀಳಿಸುತ್ತಾನೆ. ತನ್ನ ಉಗುರುಗಳಿಂದ ಸೀಳಿ ಹಾಕುತ್ತಾನೆ. ಆ ಸಂದರ್ಭದಲ್ಲಿ ಬ್ರಹ್ಮಾದಿದೇವತೆಗಳು ಅವನನ್ನು ಸ್ತುತಿಸುತ್ತಾರೆ. ವರಾಹಾವತಾರದಿಂದ ಈ ಮೊದಲೇ ಸೋದರರಲ್ಲೊಬ್ಬನಾದ ಹಿರಣ್ಯಾಕ್ಷನ ವಧೆಯಾಗಿದ್ದು ಈಗ ಹಿರಣ್ಯಕಶ್ಯಪನನ್ನು ಸೀಳಿ ಸಂಹರಿಸಿದ್ದು ಹಿರಣ್ಯಾಕ್ಷ ಹಿರಣ್ಯಕಶ್ಯಪರ ವೃತ್ತಾಂತಕ್ಕೆ ಮಂಗಳವನ್ನು ಹಾಡಿದಂತಾಗುತ್ತದೆ.

ಹರಿವಂಶದಲ್ಲಿ ಬರುವ ನರಹರಿಯ ಚರಿತೆಯಲ್ಲಿ ದೀರ್ಘವಾದ ವೃತ್ತಾಂತಗಳಾಗಲಿ, ಶಿಕ್ಷೆಯ ನಾನಾಬಗೆಗಳಾಗಲೀ, ಹಿರಣ್ಯಕಶಿಪುವಿನ ಮಗನ ಮೇಲಿನ ಅಸಾಧ್ಯ ಕೋಪಾಟೋಪ ಗಳಾಗಲೀ ಇಲ್ಲದೆ, ಇದು ಕಥೆಯನ್ನು ಅಲ್ಲಿನ ಸನ್ನಿವೇಶವನ್ನು ಸರಳವಾದ ರೀತಿಯಲ್ಲಿ ಹೇಳಿರುವ ಪ್ರಯತ್ನವಾಗಿದೆಯೆಂದು ತಿಳಿಯಲಡ್ಡಿಯಿಲ್ಲ.



## ಅಧ್ಯಾಯ - 6

# ದಾಸರು ಕಂಡ ನರಸಿಂಹ

ಭಾರತೀಯ ಸಂಸ್ಕೃತಿಯ ಅಧ್ಯಯನದಲ್ಲಿ ಧರ್ಮ, ದರ್ಶನ, ಕಲೆ ಸಾಹಿತ್ಯಗಳು ವಿಶಿಷ್ಟ ಸ್ಥಾನವನ್ನು ಅಲಂಕರಿಸಿವೆ. ಇವುಗಳ ವ್ಯಾಸಂಗಕ್ಕೆ ಎಲ್ಲ ಪ್ರಾದೇಶಿಕ ಭಾಷೆಗಳೂ ತಮ್ಮ ಕೊಡುಗೆಯನ್ನು ನೀಡುವಲ್ಲಿ ಯಶಸ್ವಿಯಾಗಿರುತ್ತವೆ. ಕರ್ನಾಟಕವು ಸಹ ಇದರ ಬೆಳವಣಿಗೆ ಮತ್ತು ಪೋಷಣೆಗೆ ತನ್ನ ಮಹತ್ವವಾದ ಕಾಣಿಕೆಯನ್ನು ನೀಡಿದೆ.

ಕನ್ನಡದ ಪ್ರದೇಶವನ್ನು ಆಳಿದ ಕದಂಬ, ಚಾಲುಕ್ಯ, ಹೊಯ್ಸಳ ಮತ್ತು ವಿಜಯ ನಗರದ ಅರಸರು ಕಲೆ-ಸಾಹಿತ್ಯಗಳ, ಧರ್ಮ-ದರ್ಶನಗಳ ಅಭಿವೃದ್ಧಿಗೆ ಟೊಂಕಕಟ್ಟಿ ನಿಂತಿದ್ದನ್ನು ಇಲ್ಲಿ ಸ್ಮರಿಸಬಹುದಾಗಿದೆ. ದರ್ಶನ ಕ್ಷೇತ್ರಕ್ಕೆ ಸಂಬಂಧಿಸಿದಂತೆ ಹೇಳುವುದಾದರೆ, ಮಧ್ವಾಚಾರ್ಯರು, ವ್ಯಾಸರಾಯರು, ವಿದ್ಯಾರಣ್ಯರೇ ಮೊದಲಾದ ಮಹಾನುಭಾವರು ಅನುಪಮವಾದ ಸೇವೆ ಸಲ್ಲಿಸಿ ಚಿರಂತನ ಸ್ಥಾನವನ್ನು ಗಳಿಸಿದ್ದಾರೆ. ಭಾರತೀಯ ಚಿಂತನೆಯ ಹರಿಕಾರರಾಗಿದ್ದಾರೆ.

## ಆರಂಭ ಕಾಲ

ಕರ್ನಾಟಕದಲ್ಲಿ ಮಧ್ವಾಚಾರ್ಯರಿಂದ ಪ್ರಸಾರವಾದ ವೇದಾಂತ, ಧರ್ಮ-ದರ್ಶನ ಗಳು ದಕ್ಷಿಣ ಭಾರತದ ಎಲ್ಲೆಡೆ ಪಸರಿಸಿಕೊಂಡವು. ಹದಿಮೂರನೆಯ ಶತಮಾನದಲ್ಲಿ ವೈಷ್ಣವ ಪಂಥಕ್ಕೆ ವಿನೂತನವಾದ ಚಾಲನೆ ದೊರಕಿತು. ಇದರಿಂದ ಆ ಪಂಥಕ್ಕೆ ದೃಢತೆ ಯುಂಟಾಯಿತು. ಆರಂಭದಲ್ಲಿ ಸಂಸ್ಕೃತಭಾಷಾ ಸಾಹಿತ್ಯಗಳು ಸ್ಥಾಯಿಯಾಗಿರುವಂತೆ ಇಲ್ಲಿ ಕಂಡುಬರುತ್ತದೆಯಾದರೂ ತದನಂತರದಲ್ಲಿ ದಾಸಕೂಟ ಅಥವಾ ವೈಷ್ಣವ ಕೀರ್ತನ ಕಾರರ ಕಾರಣದಿಂದಾಗಿ ವೈಷ್ಣವ ಸಿದ್ಧಾಂತಗಳು ಮನೆ ಮನೆಯನ್ನು ತಲುಪಿತು. ಕರ್ನಾಟಕದಲ್ಲಿ ಮಾತ್ರವಲ್ಲದೆ ಇದರ ಗಡಿಯಿಂದಾಚೆಗೂ ಭಕ್ತಿಯ ತರಂಗಗಳು ಹರಡಿಕೊಂಡು ಸಾಮಾನ್ಯ

ಜನ ವರ್ಗದಲ್ಲಿ ಮಹತ್ತರ ಬದಲಾವಣೆಯುಂಟು ಮಾಡಿದವು. ಇದೊಂದು ಭಕ್ತಿಪಂಥದ ಚಳವಳಿಯಾಗಿ ಬೆಳೆಯಿತು. ಇದರಿಂದಾಗಿ ಮುಂದಿನ ಎರಡುನೂರು ವರ್ಷಗಳ ಕಾಲವನ್ನು ವಿಷ್ಣುಪರವಾದ ಸಾಹಿತ್ಯಸುಗ್ಗಿಯ ಸಂಭ್ರಮವೆಂದು ಹೇಳಬಹುದು.

ಹರಿಸರ್ವೋತ್ತಮ ತತ್ತ್ವವನ್ನು ಹೊತ್ತ ದಾಸರು ಹರಿಸಂಕೀರ್ತನೆ ಮಾಡುತ್ತ ಊರಿಂದ ಊರಿಗೆ, ಒಂದು ನಾಡಿನಿಂದ ಮತ್ತೊಂದು ನಾಡಿಗೆ, ರಾಜ್ಯದಿಂದ ರಾಜ್ಯಕ್ಕೆ ಸುತ್ತಾಡಿದರು. ಕರ್ನಾಟಕ ಸಂಸ್ಕೃತಿಯ ಹರಿಕಾರರಾದ ಹರಿದಾಸರಿಗೆ ಪಂಢರಾಪುರವು ಕೇಂದ್ರವಾಯಿತು. ಈ ಸ್ಥಳವು ಮಹಾರಾಷ್ಟ್ರದ ಪ್ರಸಿದ್ಧ ನಗರವಾಗಿ ಬೆಳೆದಿದೆ. ಕರ್ನಾಟಕದ ಹರಿದಾಸರೆಲ್ಲರಿಗೆ ಪಂಢರಾಪುರವು ಕೇಂದ್ರಸ್ಥಾನವಾಗಿತ್ತೆಂದ ಮೇಲೆ ಇದರ ಭೌಗೋಳಿಕ ನೆಲೆ-ಹಿನ್ನೆಲೆಗಳು ತಾನಾಗಿ ಅರಿವಾಗುವುದರಲ್ಲಿ ಸಂದೇಹವಿಲ್ಲ. ಪ್ರಾಚೀನ ಕಾಲಕ್ಕೆ ವಿಠಲನ ಪೂಜೆ ಮತ್ತು ಭಕ್ತಿಗಳಿಗೆ ನಿರ್ದಿಷ್ಟವಾದ ಗೊತ್ತು, ಗುರಿಗಳನ್ನು ಹಾಕಿಕೊಟ್ಟವರು ಕರ್ನಾಟಕದ ಹರಿದಾಸರೆಂದೇ ಹೇಳಬಹುದು.

## ಕೀರ್ತನ ಚಳವಳಿ

ಕರ್ನಾಟಕದ ಸಂತರು ತಮ್ಮ ಪ್ರಾಂತಭಾಷೆಯ ಮೂಲಕವಾಗಿ ದೈವಭಕ್ತಿ ಶ್ರದ್ಧೆಗಳನ್ನು ಪ್ರಕಟಿಸಿರುತ್ತಾರೆ. ಹೃದಯಸ್ಪರ್ಶಿಯಾದ ರೀತಿಯಲ್ಲಿ ಸಂಗೀತಸವಿಯಿಂದ ತುಂಬಿದ ಕೀರ್ತನೆಗಳನ್ನು ಹಾಡಿದ್ದಾರೆ. ಇವರಿಂದಾಗಿ ಭಜನೆಯಂತಹ ಸಾಮೂಹಿಕ ಮಾಧ್ಯಮವೊಂದು ದೊರೆತಂತಾಗಿದೆ. ಜನರ ಆತ್ಮೋದ್ಧಾರಕ್ಕೆ ಪ್ರಬಲವಾದ ಅಸ್ತ್ರವನ್ನಾಗಿ ಸಂಕೀರ್ತನ ಪರಂಪರೆಯನ್ನು ಬೆಳೆಸಿದ್ದಾರೆ. ಹಾಡುವ ಉಪಕರಣವನ್ನು ಜನತೆಯ ಉದ್ಧಾರಕ್ಕೆ ಮೊದಲಿಗರಾಗಿ ಬಳಸಿದ ಶ್ರೇಯಸ್ಸು ಕರ್ನಾಟಕದ ಹರಿದಾಸರಿಗೆ ಸಲ್ಲುವುದೆಂಬ ಮಾತು ಅತಿಶಯೋಕ್ತಿಯಾಗಲಾರದು.

ಆಚಾರ್ಯ ಪುರುಷರಿಂದಾದ ಸಂಸ್ಕೃತನಿಷ್ಠ ಅಧ್ಯಾತ್ಮಿಕದರ್ಶನದ ಪ್ರಸಾರವನ್ನು ಹರಿದಾಸರು ಸರಳವಾದ ಕನ್ನಡದಲ್ಲಿ ಕೀರ್ತನೆಗಳ ಮೂಲಕ ಮಾಡಿದ್ದಾರೆ ಎನ್ನಬಹುದು. ಇದೆಲ್ಲಾ ಅಂಶಗಳು ದಾಸಕೂಟಕ್ಕೆ ದಖನ್ನಿನ ಧಾರ್ಮಿಕ ಭಕ್ತಿಪಂಥದ ಪ್ರಾಚೀನತಮ ಚಳವಳಿಯೆಂಬ ಪ್ರಶಸ್ತಿಯನ್ನು ದೊರಕಿಸಿಕೊಟ್ಟಿದೆ.

ಕರ್ನಾಟಕದ ಸಂತರನ್ನು ಜನತಾ ಜನಾರ್ದನರೆಂದು ಕೂಡ ಪರಿಭಾವಿಸಬಹುದಾಗಿದೆ. ಸಂಸ್ಕೃತ ತಿಳಿಯದ ಸಾಮಾನ್ಯ ವರ್ಗದವರಿಗೆ, ಹುಲುಮನುಜರಿಗೆ, ಸ್ತ್ರೀಯರಿಗೆ ಸಹ ಇವರ ದಿವ್ಯವಾಣಿಯಿಂದ ಅಧ್ಯಾತ್ಮಿಕ ಶ್ರೇಯಸ್ಸುಂಟಾಗಿದೆ. ಮೇಲುವರ್ಗದ ಜನಕ್ಕೆ ಆರ್ಯಭಾಷೆಯಾದ ಸಂಸ್ಕೃತ ಸಾಹಿತ್ಯದಿಂದಾದ ಶ್ರೇಯಸ್ಸು ಕೆಳವರ್ಗದ ಜನರಿಗೆ ಸಂತ ಬೋಧೆಯಿಂದ ಆಗಿದೆ. ದಾಸರು ಸಂಸ್ಕೃತ ದಾರ್ಶನಿಕ ಸಾಹಿತ್ಯದಲ್ಲೂ ಪ್ರೌಢಿಮೆಯನ್ನು ಗಳಿಸಿದವರಾಗಿರುತ್ತಾರೆ.

## ದಾಸಸಾಹಿತ್ಯದ ಉತ್ಕರ್ಷ

ದಾಸರು ಪಡೆದಿದ್ದ ಜ್ಞಾನವು ವಿದ್ವತ್ತು, ಪಾಂಡಿತ್ಯ, ಪ್ರೌಢಿಮೆಗಳಿಂದಲೂ ಕೂಡಿದ್ದಾಗಿತ್ತು. ಇವರು ತಮಗಿಂತಲೂ ಅಸಾಮಾನ್ಯರಾದ ಪ್ರತಿಭಾವಂತರನ್ನು, ಮಹಿಮಾ ಶಾಲಿಗಳನ್ನು ಗುರುಗಳಾಗಿ ಪಡೆದಿದ್ದರು. ತಾವು ಪಡೆದುಕೊಂಡ ಶಿಕ್ಷಣವನ್ನು ಸುಧಾರಣೆಯ ಮಾರ್ಗಕ್ಕೆ ಅನುಕೂಲವಾಗುವಂತೆ ಸರಳೀಕರಿಸಿಕೊಂಡರು. ಆತ್ಮಸಂಯಮ ನೀತಿಗಳನ್ನು ಅನುಸರಿಸಿ ಸಾಮಾನ್ಯ ಜನತೆಗೆ ಅಗತ್ಯವಾದ ಜೀವನಧರ್ಮವನ್ನು ಸಂಕೀರ್ತನೆಗಳ ಮೂಲಕ ಇವರು ಬೋಧಿಸಿದರು.

ಶ್ರೀಪಾದರಾಜರಿಂದ ನಿರ್ದಿಷ್ಟವಾದ ರೀತಿಯಲ್ಲಿ ಆರಂಭಗೊಂಡ ದಾಸಸಾಹಿತ್ಯದಲ್ಲಿ ಮೂರು ಮಜಲುಗಳಿರುವುದು ಸಾಮಾನ್ಯ ನೋಟಕ್ಕೆ ಕಂಡುಬರುತ್ತದೆ.

ಮೊದಲನೆಯ ವರ್ಗದಲ್ಲಿ ಶ್ರೀಪಾದರಾಜರು, ಪುರಂದರದಾಸರು, ಕನಕದಾಸರಿದ್ದಾರೆ. ಮತ್ತೊಂದು ಗುಂಪು ವ್ಯಾಸರಾಯ, ಗೋಪಾಲದಾಸರದ್ದೆಂದು ಗುರುತಿಸಬಹುದು. ಮೂರನೆಯ ವಿಭಾಗದಲ್ಲಿ ಶಾಸ್ತ್ರೀಯವಾದ ರೀತಿಯ ಪ್ರತಿಪಾದಕರಾಗಿ ವಿಜಯದಾಸ, ಜಗನ್ನಾಥದಾಸ, ಮಹಿಪತಿದಾಸರೇ ಮೊದಲಾದವರು ಸೇರ್ಪಡೆಯಾಗಿದ್ದಾರೆ. ಹದಿನೈದನೆ ಶತಮಾನದಿಂದ ಹತ್ತೊಂಬತ್ತನೆ ಶತಮಾನದವರೆಗೆ ಈ ಉತ್ಕೃಷ್ಟ ಸಾಹಿತ್ಯವು ಸುಲಲಿತವಾಗಿ ಹರಿದುಕೊಂಡು ಬಂದಿದೆ.

## ದಾಸಸಾಹಿತ್ಯ ಲಕ್ಷಣ

ದಾಸಸಾಹಿತ್ಯವು ಕೀರ್ತನೆ, ಸುಳಾದಿ, ಉಗಾಭೋಗ-ಎಂಬ ಮುಖ್ಯವಾದ ಮೂರು ರೂಪಗಳಲ್ಲಿ ಹರಿದು ಬಂದಿದೆ. ಕೀರ್ತನೆಗಳಲ್ಲಿ ರಾಗ-ತಾಳ ಬದ್ಧವಾದ ಪಲ್ಲವಿ-ಅನುಪಲ್ಲವಿ, ನುಡಿಗಳ ಸಂಯೋಜನೆಯನ್ನು ಕಾಣಬಹುದಾಗಿದೆ. ಸಾಮಾನ್ಯವಾಗಿ ಕೊನೆಯ ನುಡಿಯು ಅದನ್ನು ರಚಿಸಿದ ಕೃತಿಕಾರರ ಅಂಕಿತವನ್ನು ಹೊಂದಿರುತ್ತದೆ.

ಕೀರ್ತನೆ ಇಲ್ಲವೇ ಪದವೆಂಬುದು ಕನ್ನಡ ಸಾಹಿತ್ಯಕ್ಕೆ ಹೊಸತೇನೂ ಆದುದಲ್ಲ. ಪಾಡು, ಮೆಲ್ಪಾಡು, ಬಾಜನೆಗಬ್ಬಗಳಂತಹ ಛಂದೋರೂಪಗಳು ನಮ್ಮಲ್ಲಿ ಬಳಕೆಯಲ್ಲಿದ್ದದ್ದೇ ಆಗಿವೆ. ಶಿವಶರಣರಲ್ಲಿ ಕೆಲವರು ಪದಗಳನ್ನು ಸಹ ಹಾಡಿದವರೇ ಆಗಿದ್ದಾರೆ. ಆದೇ ಮುಂದೆ ಹರಿದಾಸರ ಬಾಯಲ್ಲಿ 'ಕೀರ್ತನೆ'ಯೆಂದಾಯಿತು. ಹರಿಯ ಪರವಾದ ಹಾಡಾಗಿ ಇದು ಪ್ರಸಿದ್ಧವಾಯಿತು.

ಮಠಗಳಲ್ಲಿ ಪೂಜಾದಿಗಳ ಸಂದರ್ಭದಲ್ಲಿ ಇಂತಹ ನೂರಾರು ಕೀರ್ತನೆಗಳನ್ನು ಹಾಡಿಕೊಂಡು ಬಂದಿರುವ ಪರಿಪಾಠ ಬೆಳೆದಿದೆ. 'ದಾಸಸಾಹಿತ್ಯ'ವು ಸಂಪದ್ಭರಿತವಾಗಿ ಉಳಿದಿದೆ.

# ದಾಸಸಾಹಿತ್ಯದ ಮಜಲುಗಳು

ಶ್ರೀಪಾದರಾಜರಿಂದ ಒಂದು ನಿರ್ದಿಷ್ಟವಾದ ಮಾರ್ಗವನ್ನು ಕಂಡುಕೊಂಡ ದಾಸ ಸಾಹಿತ್ಯಕ್ಕೆ ಪ್ರಧಾನವಾಗಿ ಎಂದರೆ ಚಾರಿತ್ರಿಕವಾಗಿ ಸಹ ನಾಲ್ಕು ಮೆಟ್ಟಿಲುಗಳಿರುವುದು ಕಂಡುಬರುತ್ತದೆ. ಇವರಿಂದ ಸರ್ವಾಂಗ ಸುಂದರವಾಗಿ ಬೆಳೆದ ಕನ್ನಡ ಹರಿದಾಸ ಸಾಹಿತ್ಯದ ಬೆಳೆಯು ಪುರಂದರದಾಸರ ಕಾಲದಲ್ಲಿ ಸುಗ್ಗಿಯಂತೆ ಪರಿಣಮಿಸಿದೆ. ಅನಂತರ ಇಳಿಮುಖವಾಗಿ ಮತ್ತೆ ವಿಜಯದಾಸರ ಕಾಲದಲ್ಲಿ ಕುಡಿಯೊಡೆದಿದೆ. ಜಗನ್ನಾಥದಾಸರ ಕಾಲದಲ್ಲಿ ಮತ್ತೊಮ್ಮೆ ಇದರ ಔನ್ನತ್ಯವನ್ನು ಗುರುತಿಸಲು ಸಾಧ್ಯವಾಗಿದೆ.

ದಾಸಸಾಹಿತ್ಯದ ನಾಲ್ಕು ಘಟ್ಟಗಳಲ್ಲಿ ಪುರಂದರದಾಸರ ಕಾಲದ ಮಹತ್ವವು ಅಧಿಕಗೊಂಡಿರುವುದನ್ನು ಕಾಣುತ್ತೇವೆ. ಇವರು ಸಂಗೀತಕ್ಷೇತ್ರದಲ್ಲಿಯೂ ಹೆಸರು ಪಡೆದವರಾಗಿದ್ದಾರೆ. ಇವರ ರಚನೆಗಳು ಕಾವ್ಯಾತ್ಮಕ ಧೋರಣೆಯಿಂದ ಕೂಡಿವೆ. ಹಾಡುವ ಮನೋಭಿಲಾಷೆಯ ಆಂತರ್ಯದಿಂದ ಇರುವ ಇವುಗಳಲ್ಲಿ ಸಮೃದ್ಧತೆಯಿದೆ. ಜಗನ್ನಾಥದಾಸರು ಶಾಸ್ತ್ರಾತ್ಮಕ ಅಭಿವ್ಯಕ್ತಿಗೆ ಮಹತ್ವ ನೀಡಿದವರಾಗಿದ್ದಾರೆ. ಪುರಂದರ ದಾಸರು, ವಿಜಯ ದಾಸರು, ಜಗನ್ನಾಥ ದಾಸರು, ಗೋಪಾಲದಾಸರನ್ನು ಒಟ್ಟಿಗೆ ಸೇರಿಸಿ ದಾಸಚತುಷ್ಟಯವೆಂದು ಕರೆಯಲಾಗುತ್ತಿದೆ.

ದಾಸಸಾಹಿತ್ಯವನ್ನು ಕನ್ನಡದ ತವನಿಧಿಗಳಲ್ಲೊಂದು ಎಂದು ಕರೆಯಬಹುದು. ಹಿಮಾಲಯದ ಎತ್ತರದಿಂದ ಇಳಿದುಬಂದ ದೇವಗಂಗೆಯು ಬಯಲಿನ ನೆಲವನ್ನೆಲ್ಲ ಫಲಪ್ರದಗೊಳಿಸುವಂತೆ ಕನ್ನಡ ಸಾಹಿತ್ಯವನ್ನು ದಾಸಸಾಹಿತ್ಯ ಮತ್ತು ಶರಣಸಾಹಿತ್ಯಗಳು ಸಮೃದ್ಧಗೊಳಿಸಿದವು. ಇದು ಎಲ್ಲ ಕೆಳವರ್ಗದ ಜನಸಮೂಹದಲ್ಲಿ ಹರಡಿಕೊಂಡಿತು. ಜನತೆಯಲ್ಲಿ ಸಂಸ್ಕೃತಿಯನ್ನು ಬೆಳಸುವ ಪ್ರಭಾವಿ ಸಾಧನವಾಯಿತು. ಓದು ಬಾರದ ಕನ್ನಡ ಜನಕ್ಕೆ ಪಂಪಾದಿಗಳು ಗೊತ್ತಿಲ್ಲದಿರಬಹುದು. ಆದರೆ ಶರಣರ ಸೊಲ್ಲುಡಿಗಳು, ದಾಸರ ಕೀರ್ತನೆ, ಸುಳಾದಿಗಳು ಗೊತ್ತಿಲ್ಲದವರು ಅಪರೂಪ. ದಾಸಸಾಹಿತ್ಯವು ಜನರ ಮೇಲೆ ಬೀರಿದ ಪ್ರಭಾವವು ಶಾಶ್ವತವಾದದ್ದು ಎನ್ನುವುದನ್ನು ಯಾರೂ ಅಲ್ಲಗಳೆಯಲು ಸಾಧ್ಯವಿಲ್ಲ.

ಶ್ರೀಪಾದರಾಜರಿಂದ ಆರಂಭವಾದ ಹರಿದಾಸ ಪರಂಪರೆಯ ಉಜ್ವಲ ತಾರೆಗಳಾಗಿ ವ್ಯಾಸರಾಜರು, ವಾದಿರಾಜರು, ಪುರಂದರ-ಕನಕ, ವೈಕುಂಠ ದಾಸರು, ಮಹಿಪತಿದಾಸರು, ವಿಜಯದಾಸರು, ಗೋಪಾಲದಾಸರು, ಜಗನ್ನಾಥ ದಾಸ, ಹೆಳವನಕಟ್ಟೆ ಗಿರಿಯಮ್ಮ ಮೊದಲಾದವರು ಬೆಳಗಿದ್ದಾರೆ. ಇವರೆಲ್ಲರ ಉದ್ದೇಶವೂ ಸಹ ಭಗವಂತನ ನಾಮ ಸಂಕೀರ್ತನೆಯೇ ಆಗಿದೆ. ಶ್ರೀಹರಿಯ ಭಕ್ತರಾದ ಹರಿದಾಸರಿಂದ ಭಕ್ತಿಪಂಥದ ಹೆಮ್ಮರವು ಬೆಳೆದಿದೆ. ಇವರ ಕೃತಿಗಳು ಬಹುಸಂಖ್ಯೆಯಲ್ಲಿ ನಮಗೆ ದೊರೆತಿದ್ದು ಅಧ್ಯಯನಯೋಗ್ಯವಾಗಿರುವುದು ನಮ್ಮ ಸುಕೃತ ಪುಣ್ಯವೆಂದೇ ಹೇಳಬಹುದು.

# ಶ್ರೀಪಾದರಾಜರು

*ನಮಃ ಶ್ರೀಪಾದರಾಜಾಯ ನಮಸ್ತೇ ವ್ಯಾಸಯೋಗಿನೇ /*
*ನಮಃ ಶ್ರೀಪುರಂದರಾರ್ಯಾಯ ವಿಜಯರಾಜಾಯ ತೇ ನಮಃ //*

ಶ್ರೀಪಾದರಾಜರು ದಾಸಸಾಹಿತ್ಯದ ಪ್ರಾತಃಸ್ಮರಣೀಯರ ಅಗ್ರಪಂಕ್ತಿಯಲ್ಲಿದ್ದಾರೆ. ಇವರು ಜೀವಿಸಿದ್ದ ಕಾಲ ಕ್ರಿ.ಶ. ೧೪೦೪ ರಿಂದ ೧೫೦೨ರವರೆಗೆ ಎಂದರೆ ತೊಂಬತ್ತೆಂಟು ವರ್ಷಗಳೆಂದು ಹೇಳಬಹುದು.

'ದಾಸವಾಙ್ಮಯ ಮಂದಿರ'ಕ್ಕೆ ಭದ್ರವಾದ ಬುನಾದಿಯನ್ನು ಹಾಕಿದ ಇವರು ತಮ್ಮ ಜೀವನದ ಬಹುಮುಖ್ಯ ಭಾಗವನ್ನು ಕೋಲಾರ ಜಿಲ್ಲೆಯ ಮುಳಬಾಗಲಿನಲ್ಲಿ ಸಾರ್ಥಕವಾಗಿ ಸವೆಸಿದ್ದಾರೆ. ಹದಿನಾರನೆಯ ಶತಮಾನದ ಪೂರ್ವಾರ್ಧದಲ್ಲಿ ತನ್ನ ಸಾಧನೆಯ ಶಿಖರವನ್ನು ತಲುಪಿದ 'ದಾಸವಾಙ್ಮಯ'ವನ್ನು ಶ್ರೀಪಾದರಾಯರ ಶಿಷ್ಯರಾದ ವ್ಯಾಸರಾಯರೂ, ಇವರ ಶಿಷ್ಯರಾದ ಪುರಂದರ, ಕನಕದಾಸರೂ ಉಜ್ವಲವಾಗಿ ಬೆಳಗಿಸಿದ್ದಾರೆ. ನಂತರದಲ್ಲಿ ಈ ಶ್ರೇಷ್ಠವಾದ ಸಾಹಿತ್ಯಕ್ಕೆ ಮೆರಗು ನೀಡಿದವರು ವೈಕುಂಠ ವಿಜಯದಾಸರು, ಜಗನ್ನಾಥ - ಗೋಪಾಲದಾಸರಾಗಿದ್ದಾರೆ.

## ಜೀವನ ಚಿತ್ರ

ಶ್ರೀಪಾದರಾಯರು ಯತಿವರೇಣ್ಯರೂ ಆಗಿದ್ದರು. ಮುಳಬಾಗಲಿನಲ್ಲಿ ಇಂದಿಗೂ ಇವರ ಆರಾಧನೆ ಪ್ರತಿವರ್ಷ ಜ್ಯೇಷ್ಠ ಶುದ್ಧ ತ್ರಯೋದಶಿಯಂದು ತುಂಬ ವಿಶಿಷ್ಟಪೂರ್ಣವಾಗಿ ನಡೆದುಕೊಂಡು ಬರುತ್ತಿದೆ. ಇವರ ಬೃಂದಾವನವಿರುವ ಸ್ಥಳವನ್ನು 'ನರಸಿಂಹತೀರ್ಥ'ವೆಂದು ಕರೆಯುತ್ತಾರೆ. ಮಾಧ್ವಪರಂಪರೆಯಲ್ಲಿ ಬಂದ ಪದ್ಮನಾಭತೀರ್ಥರ ಪೀಳಿಗೆಯವರಾದ ಇವರು ಮುಳಬಾಗಲಿನ ಮಠಕ್ಕೆ ಒಂಬತ್ತನೆ ತಲೆಮಾರಿನವರಾಗಿ ಪೀಠವನ್ನಲಂಕರಿಸಿ ಪ್ರಸಿದ್ಧರಾಗಿದ್ದರು. ಲಕ್ಷ್ಮೀ ನಾರಾಯಣ ಎಂಬ ಬಾಲಕನಿಗೆ ಸನ್ಯಾಸವನ್ನು ನೀಡಿದ ನಂತರ ಶ್ರೀಪಾದರಾಜರೆಂಬ ಅಭಿದಾನವನ್ನು ಇತ್ತವರು ರಘುನಾಥ ತೀರ್ಥರೆಂಬುವರು. ವೈದಿಕಧರ್ಮದ ಜಟಿಲತೆಯನ್ನು ಸರಳತೆಗೆ ಪರಿವರ್ತಿಸಿದ ಪ್ರಖ್ಯಾತಿಗೆ ಶ್ರೀಪಾದರಾಜರು ಪಾತ್ರರಾಗಿದ್ದಾರೆ. ಇದಕ್ಕಾಗಿ ಇವರು ಭಾಗವತರ ತಂಡವೊಂದನ್ನು ಏರ್ಪಡಿಸಿ ಪೂಜಾ ಕಾಲದಲ್ಲಿ ವೇದ ಪಾರಾಯಣದಂತೆ ಅವರಿಂದ ದೇವರನಾಮಗಳನ್ನು ಹಾಡಿಸಿದವರಾಗಿದ್ದಾರೆ.

ಭಾಗವತದ ಚಿಕ್ಕಚಿಕ್ಕ ಕತೆಗಳನ್ನು ಸರಳವಾಗಿ, ರಸವತ್ತಾಗಿ, ಪುಟ್ಟಹಾಡುಗಳ ಮೂಲಕ ಹಾಡಿದ ಕೀರ್ತಿಗೆ ಶ್ರೀಪಾದರಾಜರು ಪಾತ್ರರಾಗಿರುತ್ತಾರೆ. ವಿಜಯನಗರ ಸಾಮ್ರಾಜ್ಯದ ಒಂದು ಭಾಗವಾಗಿದ್ದ 'ಮುಳವಾಯಿ ರಾಜ್ಯ'ದ ಪತಾಕೆಯನ್ನು ಧರ್ಮಸಾಮ್ರಾಜ್ಯ

ದಲ್ಲಿ ಹರಡಿಸಿದ ಶ್ರೇಯಸ್ಸು ಇವರದ್ದಾಗಿದೆ. 'ಗೋಪಿಗೀತ', 'ವೇಣುಗೀತ', 'ಭ್ರಮರಗೀತ' ಗಳನ್ನು ಇವರು ರಚಿಸಿರುತ್ತಾರೆ. ದಾಸಸಾಹಿತ್ಯವನ್ನು ಇವರ ಕಾಲಕ್ಕೂ ಹಿಂದೆ ಗುರುತಿಸಬಹುದಾದರೂ ಇವರಿಂದ ಇದಕ್ಕೊಂದು ವ್ಯವಸ್ಥಿತವಾದ ಹೆದ್ದಾರಿಯು ನಿರ್ಮಾಣವಾಗಿದೆಯೆಂದು ಹೇಳಬಹುದು. ಈ ಕಾರಣಕ್ಕಾಗಿಯೇ ನಾವಿಂದು ಇವರನ್ನು ದಾಸವಾಙ್ಮಯದ ಮುಂಚೂಣಿಯಲ್ಲಿ ಇರಿಸಿದ್ದೇವೆ.

## ಅಪೂರ್ವ ಕೃತಿ

'ಶ್ರೀ ಲಕ್ಷ್ಮೀನೃಸಿಂಹ ಪ್ರಾದುರ್ಭಾವ ದಂಡಕ'ವು ಶ್ರೀಪಾದರಾಜರ ಕೃತಿಗಳಲ್ಲಿ ವಿಶಿಷ್ಟವಾದದ್ದಾಗಿದೆ. ಇದೊಂದು ಅಪೂರ್ವವಾದ ಕೃತಿಯಾಗಿದೆ. ದಂಡಕವನ್ನು ಸಂಸ್ಕೃತದ ಛಂದೋರೂಪಕ್ಕೆ ಹೋಲಿಸಬಹುದು. ಇದರಲ್ಲಿ ಇಪ್ಪತ್ತಾರು ಅಕ್ಷರಗಳನ್ನು ಮೀರಿದ, ನಿಯಮಿತವಾದ, ಗಣನಿಯಮಕ್ಕೆ ಒಳಪಟ್ಟ, ಸಂಖ್ಯಾನಿಯಮಕ್ಕೆ ಹೊರತಾದ, ಸುಂದರವಾದ ಸಾಲುಗಳ ರಚನೆಯಿರುತ್ತದೆ. ಇದು ವರ್ಣವೃತ್ತವಾಗಿರುತ್ತದೆ. ಗದ್ಯದ ಪ್ರಭೇದವೆಂದು ಸಹ ದಂಡಕವನ್ನು ಛಂದಃಶಾಸ್ತ್ರ ವಿದ್ವಾಂಸರು ಗುರುತಿಸಿದ್ದಾರೆ. ಈ ದಂಡಕದಲ್ಲಿ ಸಾಮಾನ್ಯವಾಗಿ ಐದೈದು ಮಾತ್ರೆಯ ಗಣಗಳು ಬಂದಿರುತ್ತವೆ. ಶ್ರೀಪಾದರಾಜರ ರಚನೆಯಲ್ಲಿ ದಂಡಕದ ಎಲ್ಲ ಗುಣಲಕ್ಷಣಗಳನ್ನು ಕಾಣಬಹುದಾಗಿದೆ.

ದಂಡಕದಲ್ಲಿ ಪ್ರಾಸ ನಿರ್ಬಂಧವಿರುವುದಿಲ್ಲ. ನಿರರ್ಗಳವಾಗಿ ಸಾಗುವ ಧಾಟಿ ಇದರದ್ದಾಗಿದೆ. ಮೊದಲೇ ಪ್ರಚಲಿತವಾದ ಲಲಿತ ರಗಳೆಯಲ್ಲಿರುವ ಪ್ರಾಸನಿಯಮವನ್ನು ಬಿಟ್ಟು ಆಧುನಿಕ ಕನ್ನಡ ಕವಿಗಳು ಬಳಕೆಗೆ ತಂದಿರುವ ಸರಳ ರಗಳೆಯನ್ನೇ ಇವರ ದಂಡಕವೂ ಬಹುಮಟ್ಟಿಗೆ ಹೋಲುತ್ತಿದೆ. ದಂಡಕದಲ್ಲಿನ ಈ ರೀತಿಯ ಛಂದೋನಿಯಮಗಳು ಅದರ ಪ್ರಸಿದ್ಧಿಗೆ ಕಾರಣವಾಗಿವೆ. ಅದು ಸ್ಥಿರವಾಗಿ ನೆಲೆಗೊಳ್ಳಲು ಸಹಾಯಕವಾಗಿದೆ ಎನ್ನಬಹುದು.

ಮಹಾವಿಷ್ಣುವು ನರಸಿಂಹಾವತಾರವನ್ನೆತ್ತಿ ಹಿರಣ್ಯಕಶಿಪುವನ್ನು ಸಂಹರಿಸಿ ಭಕ್ತನಾದ ಪ್ರಹ್ಲಾದನನ್ನು ಅನುಗ್ರಹಿಸಿದ ಕತೆಯನ್ನು ಭಾಗವತದಲ್ಲಿ ವಿವರವಾಗಿ ಕಂಡಿರುತ್ತೇವೆ. ಸಪ್ತಮ ಸ್ಕಂಧದ ಎಂಟನೆಯ ಅಧ್ಯಾಯವನ್ನು ಸುಂದರವಾಗಿ ಕನ್ನಡಕ್ಕೆ ದಂಡಕವೆಂಬ ಧಾಟಿಯಲ್ಲಿ ಶ್ರೀಪಾದರಾಜರು ರೂಪಾಂತರ ಮಾಡಿ ನೀಡಿರುತ್ತಾರೆ. ಇದನ್ನು ಕನ್ನಡಕ್ಕೆ ಪರಿವರ್ತಿಸುವ ಸಂದರ್ಭದಲ್ಲಿ ಕೃತಿಕಾರರು ವಹಿಸಿರುವ ಸ್ವಾತಂತ್ರ್ಯವೂ ಎದ್ದುಕಾಣುತ್ತದೆ.

## ದಂಡಕದ ವಿಶಿಷ್ಟತೆ

ಶ್ರೀಪಾದರಾಜರ ಈ ರಚನೆಯಲ್ಲಿ ಸಮಸ್ತ ಪಾಪಗಳನ್ನೂ ಪರಿಹಾರ ಮಾಡತಕ್ಕ ದೇವರ ದೇವನಾದ ನರಸಿಂಹನು ತಮ್ಮನ್ನು ರಕ್ಷಿಸಬೇಕೆಂದು ಕೇಳಿಕೊಳ್ಳುವ ಹಂಬಲದ ಮೊರೆಯಿದೆ. ಉತ್ತಮವಾದ ನಿವೇದನಾರೂಪದಲ್ಲಿರುವ ಕೃತಿಯಲ್ಲಿ ಸೊಗಸಾದ ಉಪಮಾನ

ಗಳಿವೆ. ಪರಮಾತ್ಮನ ಹೃದಯವೈಶಾಲ್ಯವನ್ನು ಇಲ್ಲಿ ಕಾಣಬಹುದಾಗಿದೆ. ಆತನ ಕರುಣಾ ಸಮುದ್ರಕ್ಕೆ ಬಂದು ಸೇರುವ ಹೊಳೆಗಳು ಅನಂತವಾದದ್ದು. ಇಂತಹ ಸಾವಿರಾರು ಹೊಳೆಗಳ ರೂಪದಲ್ಲಿರುವ ಭಕ್ತರ ಪ್ರಾರ್ಥನೆಯಿಂದ ಸಂತುಷ್ಟನಾಗುವ ಸ್ವಾಮಿಯು ಬೇಡಿದವರ ಇಷ್ಟಾರ್ಥಗಳನ್ನು ನೆರವೇರಿಸಿ ಕಾಪಾಡುವನೆಂಬ ಸದಾಶಯವನ್ನು ಇದರ ಹಿನ್ನೆಲೆಯಲ್ಲಿ ಕಾಣಬಹುದು.

'ನರಸಿಂಹ ದಂಡಕ'ದಲ್ಲಿ ಐದುನೂರಕ್ಕೂ ಹೆಚ್ಚು ಪಾದಗಳಿವೆ. ದೀರ್ಘವಾದ ಕೃತಿಯನ್ನು ಅಭ್ಯಾಸ ಮತ್ತು ಸೌಕರ್ಯಕ್ಕಾಗಿ ಹತ್ತು ಸಾಲಿನ ಪದ್ಯಗಳಲ್ಲಿ ವಿಭಾಗಿಸಲಾಗಿದೆ. ಇಲ್ಲಿನ ಭಾಷೆ ಮತ್ತು ಪದರಚನಾ ಸಾಮರ್ಥ್ಯವು ವಿಶೇಷ ರೀತಿಯದ್ದಾಗಿರುವಂತೆ ಕಂಡು ಬರುತ್ತದೆ. ಭಗವಂತನ ಮೇಲಿನ ಭಕ್ತಿಯನ್ನು ತುಂಬುಹೊನಲಿನ ರೂಪದಲ್ಲಿ ಹರಿಸಲು ಈ ರೀತಿಯ ಧಾಟಿಯನ್ನು ಕೃತಿಕಾರರು ಕಂಡುಕೊಂಡಿರಬೇಕೆಂದು ಅರಿವಾಗುತ್ತದೆ. ಮೂಲದ ಉನ್ನತ ಭಾವನೆಗಳನ್ನು ತಮ್ಮ ರಚನೆಯಲ್ಲಿ ತರಬೇಕೆಂಬ ಅಪೇಕ್ಷೆಯನ್ನು ಶ್ರೀಪಾದರಾಜರು 'ನರಸಿಂಹ ದಂಡಕ'ದ ಮೂಲಕ ವ್ಯಕ್ತಪಡಿಸಿರುವುದು ಇಲ್ಲಿ ಸಾರ್ಥಕವಾಗಿರು ವಂತಿದೆ.

ಶ್ರೀಪಾದರಾಜರ ಕೃತಿಯು ಭಾಗವತದಲ್ಲಿ ಬರುವ ಪ್ರಹ್ಲಾದ ಬೋಧನೆಯ ಭಾಗದಿಂದ ಆರಂಭವಾಗುತ್ತದೆ. ಇದನ್ನು ಇಲ್ಲಿ ಸೂಕ್ಷ್ಮವಾಗಿ ಪ್ರಸ್ತಾಪಿಸಲಾಗಿದೆ.

## ದಂಡಕದ ಆರಂಭ

ಶ್ರೀಕಾಂತನ ಜ್ಞಾನ, ಭಕ್ತಿಕ್ರಿಯೆಗಳನ್ನು ಪ್ರಹ್ಲಾದ ಬಾಲಕನು ಕತೆಯ ರೂಪದಲ್ಲಿ, ಬೋಧನಾರೂಪದಲ್ಲಿ ತನ್ನ ಸ್ನೇಹಿತರಿಗೆ ಹೇಳುತ್ತಾನೆ. ಇದನ್ನು ಕೇಳಿದ ದೈತ್ಯ ಬಾಲಕರಿಗೆ ತಾವೂ ಸಹ ವಿಷ್ಣುವಿನ ಶರಣಾಗತಿಯ ಮಾರ್ಗದಲ್ಲಿಯೇ ನಡೆಯಬೇಕೆಂದು ಮನವರಿಕೆ ಆಗುವುದಲ್ಲದೆ, ಪರಮಾತ್ಮನ ಸೇವೆಗೆ ಅಡ್ಡಿಯಾಗಿರುವ ಅರಿಷಡ್ವರ್ಗಗಳನ್ನು ಜಯಿಸಬೇಕೆಂಬ ಭಾವನೆ ಅವರ ಮನಸ್ಸಿನಲ್ಲಿ ಬಲವಾಗುತ್ತದೆ. ತಾವು ಇಲ್ಲಿಯವರೆಗೆ ತಮ್ಮ ಗುರುಗಳ ಮಾರ್ಗದರ್ಶನದಲ್ಲಿ ಅಧ್ಯಯನ ಮಾಡಿದ ಧರ್ಮಾರ್ಥಕಾಮ ವಿಷಯದ ಗ್ರಂಥಗಳು, ಸಂಸಾರ ಸಂಬಂಧಿಯಾದ ಬೋಧನೆಗಳು ವ್ಯರ್ಥವಾದದ್ದೆನ್ನಿಸುತ್ತವೆ. ಅದರಲ್ಲಿ ಯಾವುದೇ ತಿರುಳಿಲ್ಲವೆಂದೂ ಅವರಿಗೆ ಮನವರಿಕೆಯಾಗುತ್ತದೆ.

ದೈತ್ಯರ ಗುರುಗಳಾದ ಶುಕ್ರಾಚಾರ್ಯರ ಮಕ್ಕಳು ಇವರಿಗೂ ಸಹ ಪಾಠಪ್ರವಚನವನ್ನು ನಡೆಸುತ್ತಿರುತ್ತಾರೆ. ಗುರುಗಳಿಗೆ ತಮ್ಮ ಶಿಷ್ಯರವರ್ತನೆಯು ಕಕ್ಕಾಬಿಕ್ಕಿಯಾಗುವಂತೆ ಮಾಡುತ್ತದೆ. ಇದರಿಂದ ಅವರಿಗೆ ಬೇರೆ ದಾರಿಯೇ ಕಾಣದಂತಾಗುತ್ತದೆ. ಪ್ರಹ್ಲಾದನ ದುರ್ಬೋಧನೆಗೆ ಇವರು ಒಳಗಾದ ಕಾರಣ ತಾವೇನೂ ಮಾಡಲಾಗದವರೆಂದು ನಿಶ್ಚಯಿಸಿದ ಅವರು ರಾಜನಾದ ಹಿರಣ್ಯಕಶಿಪುವಿಗೆ ವಿಚಾರವನ್ನು ನಿವೇದಿಸುವುದೇ ಉಳಿದಿರುವ ಮಾರ್ಗವೆಂದು ಮನಗಂಡು ಕೂಡಲೇ ರಾಜನಿಗೆ ಎಲ್ಲ ಸಂಗತಿಗಳನ್ನೂ ಅರುಹುತ್ತಾರೆ.

# ರಾಜನಿಗೆ ದೂರು - ಅವನ ಕೋಪ

ದಾನವಾಗ್ರಣಿಯೂ, ಕೋಪಸಂಶೀಘ್ರನೂ ಆದ ಹಿರಣ್ಯಕಶ್ಯಪನು ಆತನ ಮಗ ಪ್ರಹ್ಲಾದನ ದುರ್ಮಾರ್ಗ ಬೋಧನೆಯ ವಿಚಾರವನ್ನೂ, ಇತರ ಚೇಷ್ಟೆಗಳನ್ನೂ ಗುರುಗಳ ಮಾತುಗಳ ಮೂಲಕ ಕೇಳಿದ. ದಾನವಶ್ರೇಷ್ಠನಿಗೆ ತನ್ನ ಕರ್ಣಗಳನ್ನು ಕಠೋರವಾದ ಬಾಣಗಳು ಇರಿಯುವಂತಾಯಿತು. ಅಪ್ರೀತಿ, ದುರ್ನೀತಿಗಳಿಂದ ಕೂಡಿದ ಮಗನ ವರ್ತನೆಗೆ ಅಸಾಧ್ಯವಾದ ಕೋಪವುಂಟಾಗಿ ತನ್ನ ಪುತ್ರನ ಸಂಹಾರಕ್ಕೆ ಅವನು ಚಿತ್ತವಿಟ್ಟವನಾಗುತ್ತಾನೆ.

ಸಾಧು ಸ್ವಭಾವದವನಾದ, ಸದ್ಭಕ್ತಿಯಿಂದ ಕೂಡಿದವನಾದ, ಮಹಾಭಕ್ತ ಪ್ರಹ್ಲಾದನು ತನ್ನ ಮುಂದೆ ಅಂಜಲೀಬದ್ಧನಾಗಿ ಕೈಜೋಡಿಸಿಕೊಂಡು ನಿಂತಿದ್ದರೂ ತಂದೆಯಾದ ಹಿರಣ್ಯಕಶಿಪು ಅವನ ಮೇಲೆ ಪಾದಾಹತವ್ಯಾಳಿಯಂತೆ ಎರಗಿ ಆಕ್ರಮಣ ಮಾಡುವುದಕ್ಕೆ ಸಿದ್ಧನಿರುತ್ತಾನೆ. ಪ್ರಹ್ಲಾದ ಧೀಮಂತನೊಂದಿಗೆ ಎತ್ತರವಾದ ಧ್ವನಿಯಲ್ಲಿ ಕೂಗಿ ಮಾತನಾಡುವ ಇವನ ದುಷ್ಟಸ್ವಭಾವವನ್ನು ದಂಡಕದಲ್ಲಿ ಯಥೋಚಿತವಾದ ಪದಗಳಿಂದ ಸ್ವಾರಸ್ಯ ಕೆಡದಂತೆ ವರ್ಣಿಸಲಾಗಿದೆ.

*ಹೋಯೆಲೋ*
*ದುರ್ವಿನೀತಾಯೆಲೋ ಮಂದಬುದ್ಧಿಯೆಲೋ*
*ಇಂತು ನೀ ಸ್ತಬ್ಧನಾದೇತಕೋ ವಂಶಘಾ*
*ತೀಯೆಲೋ ಪಾಪಜಾತೀಯೇ ನೀ ಹೀಗೆ ಮ*
*ಚ್ಛಾಸನಾತೀತನಾಗಿಪ್ಪೊಡೆ ನಿನ್ನನಿ*
*ನ್ನಾ ಯಮದ್ವಾರಕೇ ಕಳುಹುವೆ ನೋಡೆಲಾ* - ಎಂಬ ಈ ಮೂಲಪಾಠವನ್ನು ಗಮನಿಸಿದಾಗ ಸಂದರ್ಭದ ತೀಕ್ಷ್ಣತೆ ಮನದಟ್ಟಾಗುತ್ತದೆ.

ಹೀಗೆಯೇ ಮುಂದುವರೆದ ಹಿರಣ್ಯಕಶಿಪು-

*ನಾನು ಕೋಪಿಷ್ಠನಾಗಿಪ್ಪೊಡೆ ಅಂಜಿ ಮೂ*
*ರ್ಲೋಕಗಳ್ ಲೋಕಪಾನೀಕಗಳ್ ಕಂಪ*
*ಕಾಣುತ್ತವಿಂಥಾ ಬಲಿಷ್ಠನ್ನ ನೀನೆನ್ನ ಸಂ*
*ಪದ್ಬಲ ಶ್ರೀಯನಾಶ್ರೈಸದೆ ಬಟ್ಟರಿ*
*ನ್ನಾವನಲ್ ನೀಂ ಬಲಶ್ರೀಯನಾಶ್ರೈಸುವೆ*

- ಎಂಬುದಾಗಿ ಕೇಳುವ ಮಾತುಗಳಲ್ಲಿ ದಾನವನ ಶಾಸನ ವಿಧಿಸಿದ ಎಚ್ಚರಿಕೆಯನ್ನು ಕಾಣಬಹುದಾಗಿದೆ. ತನ್ನ ಮಗ ತನ್ನ ಆಜ್ಞೆಯನ್ನು ಮೀರಿದ್ದಾನೆಂಬ ಸಂಶಯಾತ್ಮಕ ಭಾವನೆ ಆ ದೈತ್ಯಾಗ್ರಣಿಯಲ್ಲಿದ್ದಿರಬೇಕೆಂಬುದು ಅವನ ಮಾತುಗಳ ಮೂಲಕ ಮನವರಿಕೆ ಆಗುತ್ತದೆ.

## ಅಧ್ಯಾತ್ಮಭಾವ

ಹಿರಣ್ಯಕಶಿಪುವಿನ ನುಡಿಗಳಲ್ಲಿ ಆಜ್ಞಾಬದ್ಧವಾದ ಧಾರ್ಷ್ಟ್ಯವಿದ್ದರೆ ಪ್ರಹ್ಲಾದನ ನಯವಾದ ಮಾತುಗಳಲ್ಲಿ ಅಧ್ಯಾತ್ಮಭಾವನೆ ಅಡಕವಾಗಿದೆ.

*ತಂದೆ ಕೇಳಯ್ಯ ಬ್ರ*
*ಹ್ಮಾದಿ ಆಸ್ತಂಭ ಪರ್ಯಂತವುಂ ಜಂಗಮ*
*ಸ್ಥಾವರಾತ್ಮ ಪ್ರಪಂಚೋಚ್ಚನೀಚ ಪ್ರಜಾ*
*ನೀಕ ಯಾವತ್ತದಾವಾತನಾಧೀನದ*
*ಲ್ಲಿಪ್ಪುದೋ ಆತನೆ ಎನ್ನಗೆ ನಿನ್ನಗೆ*
*ಇನ್ನು ಮಿಕ್ಕಾದ ಚೈತನ್ಯಕ್ಕೆಲ್ಲಾ ಬಲ*
*ಶ್ರೀಯು ತಾನಾದನೆ ಕಾದನೆ ಕಾದನೆ ಕಾಲರೂ*
*ಪೀಶ್ವರೋರುಕ್ರಮಾಕಾರನೆಂಬಾತನೆ*
*ಆತನೆ ಆತನೆ ತೇಜ ಓಜಸ್ಸಾಹಾ*
*ಸತ್ವ ಸಂಪದ್ಬಲ ಶ್ರೀಂದ್ರಿಯಾತ್ಮನ್*

- ಎಂಬುದಾಗಿ ಪ್ರಹ್ಲಾದನು ನುಡಿದ ವಾಕ್ಯಗಳು ಎಂತಹ ಹೀನರಾದವರಲ್ಲೂ ಭಗವಂತನನ್ನು ಕಾಣುವ ಹಂಬಲವನ್ನು ಕೆರಳಿಸುತ್ತದೆ.

ಪ್ರಹ್ಲಾದನು ತನ್ನ ತಂದೆಗೆ ಹೇಳಿದ ಮಾತುಗಳಲ್ಲಿ ಭಗವಂತನ ಸರ್ವಾಂತರ್ಯಾಮಿ ತತ್ತ್ವವು ಅಡಕವಾಗಿದೆ. ಜಗತ್‌ಸೃಷ್ಟಿ-ಪುಷ್ಟಿಗಳನ್ನು ನಿರ್ವಹಿಸುತ್ತಿರುವ ಆತನ ಮಹಿಮೆಯು ಇಲ್ಲಿ ವ್ಯಕ್ತವಾಗಿ ಕಾಣುತ್ತದೆ. ಸ್ಥಾವರ-ಜಂಗಮ, ಉಚ್ಚ-ನೀಚಗುಣಗಳ ವ್ಯಾಖ್ಯಾನವು ಅಡಕವಾಗಿದೆ. ನಮ್ಮ ಅವಿವೇಕವನ್ನು ಬಿಟ್ಟು ಆತನನ್ನು ಕಾಣುವುದರಿಂದ ಆತನಲ್ಲಿಯೇ ನಮ್ಮ ಚಿತ್ತವನ್ನು ನೆಡುವುದರಿಂದ ಎಲ್ಲ ವೈರಿಗಳನ್ನು ಸಾಧಿಸಿದಂತಾಗುತ್ತದೆಂಬ ಸಾರವನ್ನೊಳಗೊಂಡಿದೆ. ದೇಹವೆಂಬ ರಾಜಧಾನಿಯನ್ನು ಹಾಳುಮಾಡುವ ಅರಿಷಡ್ವರ್ಗಗಳನ್ನು ಗೆಲ್ಲದೆ ಸರ್ವದಿಕ್ಕುಗಳನ್ನು ಗೆದ್ದೆವೆಂಬ ಅಹಂಕಾರಕ್ಕೆ ಒಳಗಾಗುವುದು ಸರ್ವಥಾಯೋಗ್ಯವಲ್ಲವೆಂಬ ಎಚ್ಚರಿಕೆಯನ್ನು ನೀಡುವಂತಿದೆ. ಇದು ಯಾರಿಗೂ ಶ್ರೇಯಸ್ಕರವಾದದ್ದಲ್ಲವೆಂಬ ಅರಿವನ್ನು ಉಂಟುಮಾಡುತ್ತದೆ.

## ಕೋಪದ ದಳ್ಳುರಿ

ಶತ್ರುವಿನ ಹಾಗೆ ಕಾಣುವ ತನ್ನ ಪುತ್ರನ ಮಾತುಗಳನ್ನು ಕೇಳಿದ ಹಿರಣ್ಯಕಶಿಪು ಕನಲಿ ಕೆಂಡಾಮಂಡಲವಾಗುತ್ತಾನೆ. ಸಿಂಹಾಸನವನ್ನು ಬಿಟ್ಟು ಧಿಗ್ಗನೆ ಮೇಲೇಳುತ್ತಾನೆ. ಕೋಪದ ದಳ್ಳುರಿ ಧಗ್ಗನೆ ಹೊತ್ತಿಕೊಳ್ಳುತ್ತದೆ.

ಆ ಸಂದರ್ಭದಲ್ಲಿ ಆತನಾಡಿದ ಮಾತುಗಳು-

*ಹೋಯೆಲಾ ಪುತ್ರನೆ ಇಂದು ನಾವೊಂದು ವೇ*
*ಳುತ್ತಿಪ್ಪದರೊಂದಕ್ಕೆ ಹತ್ತಾಗಿ ನೀ*
*ನೇವನೋ ವಿಷ್ಣುವೆಂಬಾತ ಬೇರೊಬ್ಬ ತಾ*
*ನಿಪ್ಪನೆಂದೂಹಿಸುವೆಯು ಹೋ ಹೋಯೆಲಾ*
*ಸಾವಿಗೀ ಬುದ್ಧಿ ನೀ ಸಿದ್ಧಮಾಡೀದಿ*

- ಹೀಗೆ ಹೇಳುವ ಮಾತುಗಳಿಂದ ಅವನ ನಿರ್ಧಾರವು ಪ್ರಕಟವಾದಂತಾಗಿದೆ.

ಮುಂದುವರೆದ ಹಿರಣ್ಯಕಶಿಪು ಪ್ರಹ್ಲಾದನಿಗೆ ಹೇಳಿದ ಮಾತುಗಳಿವು-

*ಎಲೋ ಮಂದನೆ ಮಂದಭಾ*
*ಗ್ಯೋಕ್ತಿಗಳ್ ಏಕೆ ನೀನಾಡುವೆ ಅಕ್ಕಟಾ*
*ಎನ್ನಗಿನ್ನಾ ಜಗನ್ನಾಥ ನಿನ್ನಾವನೋ*
*ಆತನೆಲ್ಲಿಪ್ಪ ಸರ್ವತ್ರದಲ್ಲಿಪ್ಪ ನೀ*
*ನೆಂದಡೆ ಡಿಂಭಕಾಡಂಭಕಾಡೋಣಗಳ್*
*ಸಾಕು ಮಾಡಿನ್ನು ಮೇಲೀ ಸಭಾಸ್ತಂಭದಲ್*
*ಶೀಘ್ರ ಸಂರಂಭದಲ್ ತೋರು*

- ಎಂದು ಸವಾಲು ಹಾಕುತ್ತಾನೆ. ಪ್ರಹ್ಲಾದನಿಗೆ ತನ್ನ ಸ್ವಾಮಿಯನ್ನು ಕುರಿತು ಪ್ರಾರ್ಥಿಸಲೂ ಅವಕಾಶವಿಲ್ಲದ ಪರಿಸ್ಥಿತಿ.

## ಕಂಭದ ಘಾಟನೆ

ಪ್ರಹ್ಲಾದನು ತನ್ನ ಸ್ವಾಮಿಯನ್ನು ಅರ್ಥಾತ್ ನರಹರಿಯನ್ನು ಹಿರಣ್ಯಕಶಿಪು ಸೂಚಿಸಿದ ಸ್ತಂಭದಲ್ಲಿ ತೋರದೇ ಹೋದಲ್ಲಿ ತಾನು ಅವನ ಶಿರಚ್ಛೇದ ಮಾಡುವೆನೆಂದೂ, ಆ ಸಮಯದಲ್ಲಿ ಅವನು ಹೇಳಿದ ವಿಷ್ಣುವೆಂಬಾತನು ಇದಕ್ಕೆ ಅಡ್ಡಬರುವನೇನೊ ನೋಡೋಣವೆಂದು, ಮತ್ತೊಂದು ರೀತಿಯಲ್ಲಿ ಪರಮಾತ್ಮನಿಗೇ ಸಡ್ಡು ಹೊಡೆದು ನಿಂತಿರುತ್ತಾನೆ. ಇಲ್ಲೆಲ್ಲ ಅವನ ಕ್ರೋಧಾಗ್ನಿಯನ್ನು ದುರ್ಭಾಷೆಯನ್ನು ಕಾಣುತ್ತೇವೆ.

ತನ್ನ ಪುತ್ರನನ್ನು ಅನೇಕ ವಿಧವಾಗಿ ದೂರುತ್ತ ಸಾಗಿದ ಹಿರಣ್ಯಕಶಿಪು ತನ್ನ ಕೈಲಿ ಖಡ್ಗವನ್ನು ಹಿಡಿದುಕೊಂಡು ಮುಷ್ಟಿಯಿಂದ ಬಲವಾಗಿ ಸಭಾಭವನದ ಕಂಭವನ್ನು ಗುದ್ದುತ್ತಾನೆ. ಕಂಭದ ವಿವರಣೆ ಈ ಸಂದರ್ಭದಲ್ಲಿ ತುಂಬಾ ಸೊಗಸಾಗಿ ಮೂಡಿಬಂದಿದೆ. ಅದು ದುಷ್ಟಾಸುರೀ ಗರ್ಭಸಂರಂಭದಂತೆ, ಪ್ರಕಾಶಿಸುವ ಮೇಘಮಾರ್ಗದ ಸಮಾರಂಭದಂತೆ, ವೈಷ್ಣವೋತ್ಕೃಷ್ಟ ವಿಶ್ರಂಭದಂತೆ, ಶಾತಕುಂಭದಂತೆ- ಎಂದರೆ ಚಿನ್ನದ ಮಡಿಕೆಯಂತೆ,

ರತ್ನಗಳ ಹಾಗೆ ಹೊಳೆಯುವ ಚಿತ್ರಪ್ರಭಾಗುಂಭದಂತೆ ಕಂಡುಬರುತ್ತಿತ್ತು. ಈ ರೀತಿಯ ವಿಶಿಷ್ಟವಾದ ಕಂಭಕ್ಕೆ ಮುಷ್ಟಿಯಿಂದ ಪ್ರಹಾರವಾದ ಕೂಡಲೇ ಅದು ಫಳ್-ಫಳಾರನೆ ಬ್ರಹ್ಮಾಂಡವನ್ನೇ ಒಡೆದುಹಾಕುತ್ತಿದೆಯೇನೋ ಎಂಬಂತೆ ಸೀಳುಬಿಟ್ಟಿತು. ಇದಾವ ಭೀಕರತೆಯ ಮುನ್ಸೂಚನೆಯೋ ಎಂಬ ಭಯಭ್ರಾಂತಿಯಿಂದ ಕೂಡಿದವರಾಗಿ ಬ್ರಹ್ಮಾದಿಗಳು ವ್ಯಾಕುಲ ರಾದರು.

ಪ್ರಹ್ಲಾದನನ್ನು ಚಿತ್ರಹಿಂಸೆಗೊಳಪಡಿಸಿ ಕೊಲ್ಲುವೆನೆಂದು ಕತ್ತಿಹಿಡಿದು ಕೋಪಗ್ರಸ್ತ ನಾಗಿ ಓಡಾಡುತ್ತಿದ್ದ ಹಿರಣ್ಯಕಶಿಪುವಿಗೆ ಕಂಭವು ಹಾಗೆ ಹೋಳಾದ ಕೂಡಲೆ ಕಾಲೇ ಆಡದ ಹಾಗಾಯಿತು. ಆ ಮಹಾಕಂಭದಿಂದ ಹೊರಟ ಭಯಂಕರ ಶಬ್ದವು ಅವನನ್ನು ಅಡ್ಡಗಟ್ಟಿ ಹಾಕಿತ್ತು. ಅವನು ಎಲ್ಲಿಗೂ ಓಡಾಡದ ಹಾಗೆ ಅಲ್ಲಾಡದೇ ನಿಂತುಬಿಟ್ಟನು. ಆಸುರೀ ಹಿಂಡುಗಳು, ಭೂತಭೇತಾಳಿಕಾ ತಂಡಗಳು, ಶಾಕಿನೀ-ಡಾಕಿನೀ ದಂಡುಗಳು, ಆ ಮಹಾರವಕ್ಕೆ ತತ್ತರಿಸಿದವು. ಅಲ್ಲಿಂದ ಹೊರಹೊಮ್ಮಿದ ಬೆಂಕಿಯ ಜ್ವಾಲೆಗಳು ಸಮಸ್ತವನ್ನೂ ನುಂಗಿಹಾಕುವಂತೆ ಕಾಣುತ್ತಿದ್ದವು. ಅಲ್ಲಿಂದ ಹೊರಹೊಮ್ಮಿದ ಕಾಳ್ಗಿಚ್ಚು ಮೃಗಸಂಕುಲಕ್ಕೆ ಮಾರಕವಾಗಿ ಛಿಟಛಿಟನೆ ಬಿರುಗಾಳಿಯಿಂದ ಕೂಡಿ ಹರಡಿತು. ಇದು ಯಾವುದೋ ಭೂತಕಾರ್ಯವಾಗಿರಬೇಕೆಂದು ಎಲ್ಲ ಲೋಕಗಳು ಭಾವಿಸಿದ್ದ ಹಾಗೆಯೇ ಅದೇ ವೇಳೆಯಲ್ಲಿ ಅಲ್ಲಿ ಭೃತ್ಯವಾಕನ್ನು ಸತ್ಯವಾಕನ್ನಾಗಿ ಮಾಡಬೇಕು, ಸರ್ವತ್ರ ತನ್ನ ವ್ಯಾಪಕತತ್ತ್ವವನ್ನು ಪ್ರಕಟಿಸಬೇಕು ಎಂಬ ಕಾರಣದಿಂದ ಜಗದ ತಂದೆಯಾದವನು ಅದ್ಭುತಾಕಾರವನ್ನು ಧರಿಸಿ ಇಡೀ ಸಿಂಹದ ಆಕಾರದ ಹಾಗಲ್ಲದೆ ಇಡೀ ಮಾನವಾಕಾರದ ಹಾಗಲ್ಲದೆ 'ನರಸಿಂಹ' ರೂಪದಿಂದ ಕಂಭದಲ್ಲಿ ಸಂಭೂತನಾದನು.

## ವಿಚಿತ್ರರೂಪ ವೈಭವ

ದಿತಿಯ ಮಗನಾದ ದೈತ್ಯನಿಗೆ ಇದರ ಹಿನ್ನೆಲೆಯು ಅರಿವಾಗದೆ, ಇದ್ಯಾವುದೋ ವಿಚಿತ್ರರೂಪವಿರಬೇಕೆಂದು ಭಾವಿಸಿ ಯಾವುದೀ ಭೂತವೆಂದು ಮೀಮಾಂಸಬುದ್ಧಿಯಿಂದ ಆಲೋಚಿಸುವಂತೆ ಆಯಿತು. ತನಗೆ ನಿಲುಕದ್ದು ಯಾವುದೂ ಇಲ್ಲವೆಂಬ ಅಹಂಕಾರದಿಂದ ಬೀಗುತ್ತಿದ್ದವನಿಗೆ ಇಂತಹ ಅಪರೂಪದ ಆಕಾರವೊಂದು ತನ್ನ ಮುಂದೆ ನಿಂತಿರುವಾಗ ತಾನೇನು ಮಾಡಬೇಕೆಂಬ ನಿರ್ಣಯವು ಸಾಧ್ಯವಾಗದ ಸ್ಥಿತಿಗೆ ಅವನು ತಲುಪಿರಬೇಕು. ಆದರೂ ತಾನು ಪಡೆದುಕೊಂಡಿರುವ ವರದ ಪ್ರಭಾವವು ಇದ್ದೇ ಇದೆಯೆಂಬ ಅರಿವು ಸಹ ಅವನಲ್ಲಿ ಜಾಗೃತವಾಗಿದ್ದಿರಬೇಕು.

ನರಸಿಂಹರೂಪ ವಿಶ್ಲೇಷಣೆಯನ್ನು ಶ್ರೀಪಾದರಾಜರು ತುಂಬಾ ಸೊಗಸಾಗಿ ಮಾಡಿರುತ್ತಾರೆ. ಅದು ಈ ಸಂದರ್ಭದಲ್ಲಿ ಕೃತಿಯ ಮೂಲಕ ವ್ಯಕ್ತವಾಗಿದೆ. ಜಗತ್ ಸ್ವಾಮಿಯಾದ ಆತನ ಕಣ್ಣುಗಳು ಕಾದಬಂಗಾರದಂತೆ ಹೊಳೆಯುತ್ತಿದ್ದವು. ಸಿಂಹದ ಮುಖದ ಸುತ್ತಲೂ ಮೇಲೆದ್ದ ಕೇಸರಗಳು ರಾಶಿರಾಶಿಯಾಗಿ ಕಾಣುತ್ತಿತ್ತು. ಉಗ್ರವಾದ

ನಾಸಿಕದ ಹೊಳ್ಳೆಗಳಿಂದ ದೀರ್ಘ ಉಚ್ಛ್ವಾಸ, ನಿಶ್ವಾಸಗಳು ಉಂಟಾಗುತ್ತಿದ್ದವು. ಹೊರಗೆ ಇಳಿಚಾಚಿದ ನಾಲಗೆಯು ಮಹಾವ್ಯಾಳದ ಜಿಹ್ವೆಯಂತಿತ್ತು. ಘೋರವಾದ ನಾಸಾಪುಟಗಳು ಪರ್ವತದ ಮಹಾಕಂದರಗಳನ್ನು ಹೋಲುವಂತಿರುವುದಾದರೆ, ದೀರ್ಘವಾದ ಕತ್ತು ಮತ್ತು ದಂತಗಳು ದೇಹಕ್ಕೆ ಹೊಂದಿಕೊಂಡಂತೆ ಕಾಣುತ್ತಿತ್ತು.

ನರಸಿಂಹನ ದೇಹದಮೇಲೆ ಅಲಂಕಾರಮಯವಾದ ಆಭರಣಗಳು ಶೋಭಿಸುತ್ತಿದ್ದವು. ಶ್ರೀವತ್ಸ, ಕೌಸ್ತುಭ, ತುಳಸಿಯಮಾಲೆ, ಬಂಗಾರದ ಸರ, ಕಸ್ತೂರಿಯ ಲೇಪನ, ವಜ್ರ-ಕುಂಡಲ-ತೋಳಬಂದಿಗಳು ಶೋಭಾಯಮಾನವಾಗಿದ್ದವು. ವಿಶೇಷವಾಗಿ ಪ್ರಕಾಶಿಸುವ ಕೇಶಸಮೂಹ, ಮದಿಸಿದ ಆನೆಯ ಸೊಂಡಿಲಿನ ಶಾಖೆಗಳನ್ನು ಹೋಲುವ ಕೈಗಳಲ್ಲಿ ನಖ ಮತ್ತು ಇತರ ಆಯುಧಗಳು ತಮ್ಮ ಕಾಂತಿಯನ್ನು ಬೀರುತ್ತಿದ್ದವು.

ಇದನ್ನು ಶ್ರೀಪಾದರಾಜರು ವರ್ಣಿಸುವ ಬಗೆಯು ಹೀಗಿದೆ-

*ಮತ್ತ ಶುಂಡಾಲ ಶುಂಡಪ್ರಕಾಂ*
*ಡ ಪ್ರಚಂಡೋಲಸದ್ದೋಃಹ ಸಾಹಸ್ರದೀ*
*ಪ್ತಾಯುಧಾಭೋ ನಖಾನೀಕವುಂ ಚಕ್ರ ಶಂ*
*ಖಾದಿ ನಾನಾಯುಧ*

- ಈ ರೀತಿಯಾಗಿ ಕೋಟಿಮಾರ್ತಾಂಡ ತೇಜಸ್ಸಿನ ಹೊಳಪಿನಿಂದ ಕೂಡಿದ ಜ್ವಾಲಾನರಸಿಂಹಾಕೃತಿಯ ದರ್ಶನವಾಗುತ್ತದೆ.

## ದೇಶೀಯ ಭಾಷೆಯ ಸೊಗಡು

ಭಾಗವತ ತತ್ತ್ವಪ್ರತಿಪಾದನೆಗೆ ವಿಶೇಷಗಮನವನ್ನು ಕೊಡುವಂತಿರುವ ಶ್ರೀಪಾದ ರಾಜರ ಕೃತಿಗಳು ಮತ್ತು ಅವರ ಇತರ ಕಾರ್ಯಗಳು ಹದಿನೈದನೆ ಶತಮಾನವನ್ನು 'ಭಾಗವತ ಯುಗ'ವನ್ನಾಗಿಯೇ ಮಾಡಿದೆ. ಈ ಕಾಲದಲ್ಲಿ ಇತರ ವೈದಿಕ ಸಾಹಿತ್ಯವೂ ಹುಲುಸಾಗಿ ಬೆಳೆದಿದೆ. ಕುಮಾರವ್ಯಾಸನಂತಹ ವೈದಿಕಯುಗ ಪ್ರವರ್ತಕ ಕವಿಯನ್ನು ಈ ಕಾಲವು ಕಂಡಿದೆ. ಅಂದಿನ ಯತಿಪರಂಪರೆಗೆ ಸೇರಿದ ಕೆಲವರಿಗಾದರೂ ಸಂಸ್ಕೃತ ಮೂಲದ ಕೃತಿಗಳನ್ನು ದೇಶೀಯ ಭಾಷಾ ಸಾಹಿತ್ಯದಲ್ಲಿ ಹೊರತರಬೇಕೆಂಬ ಹಂಬಲವಿತ್ತು. ಇದಕ್ಕೆ ಶ್ರೀಪಾದರಾಜರ ಕೃತಿಯೇ ನಿದರ್ಶನವಾಗಿದೆಯೆಂದು ಹೇಳಬಹುದು. ಇಂತಹ ಪ್ರಬಲವಾದ ಹಿನ್ನೆಲೆಯಲ್ಲಿಯೇ ಶ್ರೀಪಾದರಾಜರು ಸಂಸ್ಕೃತಭಾಗವತದಲ್ಲಿನ ಸ್ವಾರಸ್ಯವಾದ 'ನರಸಿಂಹ ಪ್ರಾದುರ್ಭಾವ'ವನ್ನು ಕನ್ನಡಕ್ಕೆ ರೂಪಾಂತರಗೊಳಿಸಿ ಭಾಗವತನಿಷ್ಠೆಯೊಂದಿಗೆ ದೇಶೀಭಾಷೆಯ ಅಭಿಮಾನವನ್ನು ಹೊರಚೆಲ್ಲಿದ್ದಾರೆ. ಮೂಲದ ಧಾಟಿಯನ್ನು ಮತ್ತು ಅದರ ಪ್ರೌಢಿಮೆಯನ್ನು ಸಾರ್ಥಕವಾಗುವಂತೆ ತಮ್ಮ ಕೃತಿಯ ಮೂಲಕ ಹೊರತರಬೇಕೆಂಬ ಆಕಾಂಕ್ಷೆಗೆ ಇಲ್ಲಿ ಒದಗಿಬಂದಿರುವ ಫಲಶ್ರುತಿಯೇ ಪ್ರಮಾಣವೆಂದು ಹೇಳಬಹುದು.

ನರಸಿಂಹನ ನಖ-ಶಿಖಾಂತವಾದ ರೂಪವರ್ಣನೆಯಲ್ಲಿ ಭಾಗವತದ ದಟ್ಟವಾದ ಛಳಕನ್ನು ಕಾಣಬಹುದು. ಶ್ರೀಪಾದರಾಯರ ಶೈಲಿಯಲ್ಲಿ ಕ್ರಿಯಾತ್ಮಕತೆಗೆ ಕನ್ನಡಿ ಹಿಡಿದಂತಿರುವ ಘಟಾಘಟ್, ಘಳ್ಘಳನೆ, ಫಟಾಫಟ್, ಛಿಟಾಛಿಟ್ ಮೊದಲಾದ ಅನುಕರಣ ಶಬ್ದಗಳ ಒಡನಾಟವಿದೆ. ಕವಿಯ ಆಂತರಂಗಿಕ ಪ್ರತಿಭಾ ಸಂಪನ್ನತೆಯೂ ಕೃತಿಯಲ್ಲಿ ವ್ಯಕ್ತವಾಗಿದೆ.

ಜ್ವಾಲಾನರಸಿಂಹನ ರೂಪವನ್ನು ಕಂಡ ದೈತ್ಯನಿಗೆ ತಾನು ಪುತ್ರಸಂಹಾರಕ್ಕಾಗಿ ಬಯಸಿದರೆ, ಈ ಮಹಾರೂಪವು ತನ್ನ ಸಂಹಾರಕ್ಕಾಗಿಯೇ ಬಂದಂತೆ ಭಾಸವಾಗುತ್ತದೆ. ಅವನಲ್ಲಿ ಮಹಾರೋಷವು ಮನೆಮಾಡಿ ಯುದ್ಧದಂತಹ ಪ್ರತಿಭಟನೆಯನ್ನೊಡ್ಡುತ್ತದೆ. ಗದಾದಂಡವನ್ನು ಹಿಡಿದು ಸಮರೋದ್ಯುಕ್ತನಾದ ದಾನವನನ್ನು ರೋಷೋಜ್ವಲವಾದ ಜ್ವಾಲೆಗಳು ಹೊರಸೂಸುವಂತೆಯೂ, ದೀರ್ಘವಾದ ನಾಲಗೆಯನ್ನು ಹೊರಗೆ ಚಾಚಿದಂತೆಯೂ ಅಟ್ಟಹಾಸದಿಂದ ಕೂಡಿ ಕೋಟಿಸೂರ್ಯರ ಪ್ರಕಾಶವನ್ನು ಬೀರುತ್ತಿದ್ದ ನರಸಿಂಹನು ಹಿಡಿದುಕೊಳ್ಳುತ್ತಾನೆ. ಅವನನ್ನು ಹಿಡಿದನೆಂಬಷ್ಟರಲ್ಲಿಯೇ ದೈತ್ಯನು ಚಾಣಾಕ್ಷತನದಿಂದ ನುಸುಳಿಕೊಂಡು ಬಿಡುತ್ತಾನೆ. ದೈತ್ಯರಾಜೇಂದ್ರನು ಸಿಕ್ಕದೇ ಸುಕ್ಕದೇ ಪಕ್ಕನೇ ಬಿಡಿಸಿ ಕೊಳ್ಳುತ್ತಾನೆ.

ದಾನವನ ವಧೆಯ ಸಮಯವನ್ನು ನಿರೀಕ್ಷಿಸುತ್ತ ಅವನ ಸಂಹಾರಕಾರ್ಯವನ್ನು ವೀಕ್ಷಿಸುತ್ತಿದ್ದ ದೇವತೆಗಳಿಗೆ ನರಸಿಂಹನು ರಾಕ್ಷಸನನ್ನು ಬಿಟ್ಟುಬಿಟ್ಟಿದ್ದು ಚಿಂತೆಗೆ ಎಡೆ ಮಾಡುತ್ತದೆ. ದಾನವನ ಅಂತ್ಯವಾಗುವುದೊ ಇಲ್ಲವೊ ಎಂಬ ಅನುಮಾನವುಂಟಾಗುತ್ತದೆ. ದುಷ್ಟದೈತ್ಯನನ್ನು ಈತನು ಗೆಲ್ಲನೊ ಗೆಲ್ಲಲಾರನೊ ಎಂದು ತಿಳಿಯದೆ ಅವರು ಚಿಂತಾಕ್ರಾಂತ ರಾಗುತ್ತಾರೆ.

## ಕಾದಾಟದ ವೈಖರಿ

ದೈತ್ಯನಾದ ಹಿರಣ್ಯಕಶಿಪು ತನ್ನ ಢಾಲ್, ಕತ್ತಿಯನ್ನೆತ್ತಿಕೊಂಡು ನರಸಿಂಹನ ಮೇಲೆ ಹೋರಾಟ ನಡೆಸುತ್ತಾನೆ. ಈ ರೀತಿಯ ಹೋರಾಟವನ್ನು ಅನೇಕ ಕೃತಿಗಳು ವರ್ಣಿಸುತ್ತಿವೆ. ಇದೂ ಅಲ್ಲದೆ ಹಿರಣ್ಯಕಶಿಪು-ನರಸಿಂಹರ ಹೋರಾಟಚಿತ್ರಗಳನ್ನು ಹಲವಾರು ಶಿಲ್ಪಗಳ ಮೂಲಕ ನಾವಿಂದು ಕಾಣುತ್ತಿದ್ದೇವೆ. ಇವುಗಳಲ್ಲಿ ನಾಮಕ್ಕಲ್, ತಿರುಪತಿ, ಎಲ್ಲೋರಾ, ಪಟ್ಟದಕಲ್‌ಗಳಲ್ಲಿನ ಕೆಲವು ದೇವಾಲಯದ ಶಿಲ್ಪಗಳು ಗಮನಾರ್ಹವಾಗಿವೆ. ಇಷ್ಟಲ್ಲದೆ ಅನೇಕ ದೇವಾಲಯಗಳಲ್ಲಿನ ಕಂಬಶಿಲ್ಪಗಳು ಈ ದೃಶ್ಯಗಳನ್ನು ರೂವಾರಿಗಳ ಮೂಲಕ ಸೆರೆಹಿಡಿದು ಕೊಟ್ಟಿವೆ.

ನರಸಿಂಹ ಮತ್ತು ಹಿರಣ್ಯಕಶಿಪು ಇವರೀರ್ವರ ಕಾದಾಟದ ಕಾವು ಏರಿದಂತೆ ಪರಾಕ್ರಮಾಟ್ಟಹಾಸಗಳು ತೀವ್ರಗೊಳ್ಳುತ್ತವೆ. 'ಜಂಘಾಲ ಲೀಲಾ ಸಮುಲ್ಲಂಘನಾಗೋಪದಿಂ' ಹಾರಿ ನಾರಹರ್ಯಾಕ್ಷನು ದೈತ್ಯದಕ್ಷನನ್ನು ಮತ್ತೊಮ್ಮೆ ಹಿಡಿದಿದ್ದಾನೆ. ತನ್ನ ಅಂಗೈಯಿಂದ ಘಟಾಘಟನೆ ಬಡಿಯುತ್ತಾನೆ. ಪದಾಘಾತದಿಂದ ಅವನನ್ನು ಕೆಳಕ್ಕೆ ಬೀಳಿಸಿದ್ದಾನೆ. ತನ

ಕಾಲಿನಿಂದ ಹಿರಣ್ಯಕಶಿಪುವನ್ನು ಪಟ್ಟುಹಾಕಿ ಹಿಡಿದಂತಿರುವ ದೃಶ್ಯವನ್ನು ಕಾಣುವಂತಾಗುತ್ತದೆ. ಸಭಾಭವನದ ದ್ವಾರದವರೆಗೆ ಎಳೆದುಕೊಂಡು ಹೋಗಿ ಹೊಸ್ತಿಲಮೇಲೆ ಹಾಕಿ ತನ್ನ ಹರಿತವಾದ ನಖಶ್ರೇಣಿಯಿಂದ ಸೀಳಿಹಾಕಿದ್ದಾನೆ.

## ದುಷ್ಟ ಸಂಹಾರದ ಪರಿ

*ಕಾಲಾಹಿನಂ ಸೀಳುವ್ಪೋ ರೀತಿ ಐಂ*
*ಭಾರಿ ದಂಭೋಳಿಯಂತಾಗಲುಂ ಸೀಳುತಿ*
*ದ್ವಾ ಮಹಾದೇವನ್ನಾ ಹಗಲ್ ರಾತ್ರಿಯೊಂ*
*ದಿಲ್ಲದ್ವಾಗೆ ದಿವಾಸಂಧಿಯಲ್ ಸೀಳಿದಂ*

ರಾಕ್ಷಸ ಶ್ರೇಷ್ಠನನ್ನು ಹಿಡಿದ ಮಹಾಸ್ವಾಮಿಯು ಅವನ ವಕ್ಷಸ್ಥಳವನ್ನು ಬಗೆದು ಅದನ್ನು ಕಾಸಾರ ಮಾಡಿದನಂತೆ. ರಕ್ತದೊಂತೊಪ್ಪುವ ತಪಸ್ಸಾರವನ್ನು ವಿಶೇಷವಾಗಿ ಹೀರಿದನಂತೆ. ರಕ್ತವನ್ನು ತನ್ನ ಬೊಗಸೆಗಳಲ್ಲಿ ತುಂಬಿ ಬೇತಾಳ ಭೂತಾಳಗಳಿಗೆ ಚೆಲ್ಲಿದನಂತೆ. ಮದಿಸಿದ ಆನೆಯ ಸಂಹಾರದಿಂದ ಸಿಂಹವು ಹೇಗೆ ಕ್ರೀಡಿಸಬಹುದೋ ಹಾಗೆ ಕ್ರೀಡಿಸಿದನಂತೆ. ರಕ್ಕಸನ ಕರುಳ ಮಾಲೆಗಳನ್ನು ಕಿತ್ತು ತನ್ನ ಕೊರಳಿನಲ್ಲಿ ಧರಿಸಿದ ಸಮಯದಲ್ಲಿ ಆತನ ರಕ್ತಸಿಕ್ತವಾದ ಕೇಸರಗಳು ಪ್ರಜ್ವಲಿಸುತ್ತಿದ್ದವಂತೆ. ದೈತ್ಯರಾಜೇಂದ್ರನ ಪ್ರಾಣಹರಣ ಮಾಡಿದ ನರಹರಿಯು ಅವನ ಬಂಧುಗಳನ್ನು ಅಲ್ಲೋಲಕಲ್ಲೋಲಗೊಳಿಸುತ್ತಾನೆ.

ನರಸಿಂಹನು ದುಷ್ಟರಾಕ್ಷಸನನ್ನು ಮತ್ತು ಅವನ ಪರಿವಾರದವರನ್ನು ಸಂಹಾರ ಮಾಡಿದ ಸಂದರ್ಭದಲ್ಲಿ ಮಹಾಪ್ರಳಯದ ಘಟನೆಗಳು ಸಂಭವಿಸುತ್ತವೆ. ಸೂರ್ಯಚಂದ್ರರು ನಿಸ್ತೇಜರಾಗುತ್ತಾರೆ. ಸಮುದ್ರಗಳು ಸಂಕ್ಷೋಭೆಗೊಳ್ಳುತ್ತವೆ. ಆತನ ಪಾದಸಂಘಟ್ಟದಿಂದ ಧರಾಚಕ್ರವು ಅಲುಗಾಡುತ್ತದೆ. ಶಾಕಿನೀ ಢಾಕಿನೀ ಮುಂತಾದ ದುಷ್ಟಗ್ರಹ ಸಮೂಹವೆಲ್ಲವೂ ಭೀತಿಯಿಂದ ಓಡುತ್ತವೆ. ಇದೆಲ್ಲ ತೀರಿದ ಬಳಿಕ ಆ ನರಸಿಂಹಸ್ವಾಮಿಯು ಸಿಂಹಾಸನದ ಮೇಲೆ ಕುಳಿತುಬಿಡುತ್ತಾನೆ.

ಶ್ರೀಪಾದರಾಜರ ದಂಡಕದ ಅರ್ಧಕ್ಕಿಂತ ಹೆಚ್ಚಾದ ಭಾಗವು ನರಸಿಂಹಾವತಾರಕ್ಕೆ ಮತ್ತು ದೈತ್ಯನ ಸಂಹಾರಕ್ರಿಯೆಗೆ ಸಂಬಂಧಪಟ್ಟಿರುತ್ತದೆ. ಇದರ ಉಳಿದ ಭಾಗದಲ್ಲಿ ಅವತಾರದ ಉಪಸಂಹಾರವನ್ನು ಹೇಳಲಾಗಿದೆ. ಇದರಲ್ಲಿ ಸ್ತೋತ್ರಭಾಗವೂ ಇದೆ. ಹಿರಣ್ಯಕಶಿಪುವಿನ ವಧೆಯಾದ ನಂತರ ಅಲ್ಲಿಗೆ ಬ್ರಹ್ಮ-ರುದ್ರಾದಿಗಳು, ದೇವ-ಪಿತೃಗಣದವರು, ಯಕ್ಷ-ಗಂಧರ್ವರು ಭಗವಂತನ ಪಾರ್ಷದವರೆಲ್ಲ ಬರುತ್ತಾರೆ. ಅವರೆಲ್ಲರೂ ತಮ್ಮ ತಲೆಯ ಮೇಲೆ ಕರಗಳನ್ನು ಜೋಡಿಸಿಕೊಂಡು ಸಿಂಹಾಸನದ ಮೇಲೆ ಬೆಳಗುತ್ತಿದ್ದ ಮಹಾ ತೇಜೋಮೂರ್ತಿಯಾದ ನರಸಿಂಹ ದೇವನಿಗೆ ದೂರದಲ್ಲಿ ನಿಲ್ಲುತ್ತಾರೆ. ಅವರಾರಿಗೂ ಭಗವಂತನ ಸನಿಹಕ್ಕೆ ಹೋಗಲು ಧೈರ್ಯ ಸಾಲದಾಗಿದೆ. ಹೀಗಾಗಿ ಅವರು ದೂರದಲ್ಲಿ ನಿಂತು ಆತನನ್ನು ಸ್ತುತಿಸುತ್ತಿದ್ದಾರೆ.

# ಸ್ತೋತ್ರ ವಿವರ

ಬ್ರಹ್ಮಾದಿಗಳು ಒಬ್ಬೊಬ್ಬರೂ ಸಹ ಆತನನ್ನು ಕುರಿತು ಮಾಡಿದ ಸ್ತುತಿಯು ಮೂಲಭಾಗದಲ್ಲಿ ಕಠಿಣವಾಗಿದೆ. ಇದನ್ನು ಕನ್ನಡ ಭಾಷೆಯಲ್ಲಿ ತಂದುಕೊಡುವುದು ದುಸ್ತರವಾದ ಕಾರ್ಯವೇ ಆಗಿದೆ. ಶ್ರೀಪಾದರಾಜರು ಇದನ್ನು ಕನ್ನಡಭಾಷೆಗೆ ಹೊಂದಿಸಿ ವ್ಯವಹಾರಿಕವಾದ ರೀತಿಯಲ್ಲಿ ನಮಗೆ ನೀಡಿದ್ದಾರೆ. ಇಲ್ಲಿ ಕೃತಿಕಾರರ ನಿರರ್ಗಳವಾದ ಶೈಲಿಯನ್ನೂ ಅದರ ಆಹ್ಲಾದಗುಣವನ್ನೂ ಕಾಣಬಹುದಾಗಿದೆ.

ಬ್ರಹ್ಮದೇವನು ಮಾಡಿದ ಸ್ತೋತ್ರದ ಅನುವಾದ ಭಾಗದಲ್ಲಿ ದೇಸಿಯ ಲಕ್ಷಣವಿದೆ. ಆತನು ನರಸಿಂಹನ ಕೋಪವನ್ನು ಉಪಶಮನಗೊಳಿಸುವಂತೆ ಲಕ್ಷ್ಮೀದೇವಿಯನ್ನು ಕೇಳಿದ ಮಾತುಗಳಲ್ಲಿ ಕನ್ನಡ ಭಾಷೆಯ ಸೊಗಡನ್ನು ನೋಡಬಹುದು. ಲಕ್ಷ್ಮೀದೇವಿಯು ನರಸಿಂಹನನ್ನು ಪ್ರಾರ್ಥಿಸಿಕೊಂಡ ವಿಧಾನದಲ್ಲಿ ನವೀನತೆಯಿದೆ. ಇದು ದಂಡಕದ ಸುಂದರವಾದ ಭಾಗವೂ ಹೌದು.

ಇದನ್ನು ರಚಿಸುವಲ್ಲಿ ಶ್ರೀಪಾದರಾಜರು ತಮಗೆ ಕನ್ನಡಭಾಷೆಯ ಬಗೆಗಿದ್ದ ಅಭಿಮಾನ ಅಂತಃಕರಣಗಳನ್ನು ತೋರ್ಪಡಿಸಿದ್ದಾರೆ.

ಲಕ್ಷ್ಮೀದೇವಿಯು ನರಸಿಂಹನ ಉಗ್ರಸ್ವಭಾವವನ್ನು ಉಪಸಂಹರಿಸುವ ಮುನ್ನ ಆಕೆಯು ಕಂಡ ಆತನ ಸ್ವರೂಪದ ಚಿತ್ರಣ ಹೀಗಿದೆ-

*ಉಗ್ರನಂತಿಪ್ಪ ನೃಸಿಂಹ ಮೂರ್ತ್ಯುಗ್ರಮಂ*
*ಕಂಡತಿವ್ಯಗ್ರಳಂತಾಗಿ ಆ ತಾಯಿ ಹಿಂ*
*ದಕ್ಕೆ ಬಂದಳಮ್ಮಮ್ಮ ಏಂ ಗುಮ್ಮನಂ*
*ತಿಪ್ಪನೀ ಸ್ವಾಮಿ ಮುನ್ನಿಂತು ಆಶ್ಚರ್ಯವಂ*
*ಈಸು ವಿಕ್ರಮ್ಯವಂ ಎಂದಿಗಾನೆಲ್ಲಿ ಕಂ*
*ಡಿಲ್ಲವಲ್ಲಾ*

- ಎಂದು ಆಶ್ಚರ್ಯಚಕಿತಳಾಗಿದ್ದಾಳೆ.

*ಈ ರೀತಿಯಿಂ ಸಪ್ತಮಸ್ಕಂಧದೊಳಷ್ಟಮಾ*
*ಧ್ಯಾಯ ಸಂಶ್ಲೋಕಿಗಳ್ ನಾಕಿಗಳ್ ಬ್ರಹ್ಮರು*
*ದ್ರಾದಿಕಾನೇಕಳ್ ನಾರಸಿಂಹನ್ನ ಸು*
*ಸ್ತೋತ್ರಮಂ ಮಾಡಿ*

- ಎಂಬ ಈ ಸಾಲುಗಳಲ್ಲಿ ತಿಳಿಸಿರುವ ಹಾಗೆ ಈ ದಂಡಕದ ಉತ್ತರ ಭಾಗವಲ್ಲಿ ಅವರ ಪ್ರಾರ್ಥನೆ ಮತ್ತು ಭಗವಂತನಿಗೆ ಸಲ್ಲಿಸಿದ ನಮನಗಳು ಅಡಕವಾಗಿದೆ.

ಪ್ರಹ್ಲಾದನದು ಕಡೆಯ ಸರದಿಯಾಗಿದೆ. ಬ್ರಹ್ಮನು ತಿಳಿಸಿದ ಹಾಗೆ ಆ ಪಿಳ್ಳೆ ಪ್ರಹ್ಲಾದನು ನರಸಿಂಹನ ಸನಿಹಕ್ಕೆ ಹೋಗಿ ಭಕ್ತಿಯಿಂದ ಸಾಷ್ಟಾಂಗ ಬಿದ್ದು ತನ್ನ ಪ್ರಣಾಮಗಳನ್ನು ಸಲ್ಲಿಸುತ್ತಾನೆ. ಚಕ್ರಶಂಖಾಂಕಿತನಾದ ಸ್ವಾಮಿಯು ತನ್ನ ಮಂಗಳಕರವಾದ ಬಾಹುಗಳಿಂದ ತನ್ನ ಪ್ರಿಯಭಕ್ತನನ್ನು ಎತ್ತಿಕೊಳ್ಳುತ್ತಾನೆ. ಅವನ ಮಸ್ತಕದ ಮೇಲೆ ತನ್ನ ಹಸ್ತವನ್ನಿಡುತ್ತಾನೆ. ಅಶ್ರುನೇತ್ರಾಬ್ಜನಾಗಿದ್ದ ಅವನು ನರಸಿಂಹನನ್ನು ಸ್ತೋತ್ರಮಾಡುತ್ತಾನೆ. ಶ್ರೀರಮಾದೇವಿಯೂ ಸಹ ತನ್ನ ಸಂಮೋಹಿನೀ ಸಂಪುಗಳಿಂದ ಕೂಡಿ ಬಂದು ಆತನ ಅಂಕವನ್ನು ಅಲಂಕರಿಸುತ್ತಾಳೆ.

ಶ್ರೀ ಲಕ್ಷ್ಮೀನರಸಿಂಹ ಪ್ರಾದುರ್ಭಾವ ದಂಡಕದ ಕೊನೆಯ ಭಾಗ ಪೂಜಾದಿಗಳ ಚಿತ್ರಣದಿಂದ ಕೂಡಿದ್ದು, ಆತನಿಗೆ ತೊಡಿಸಿದ ಅನರ್ಘ್ಯ ರತ್ನಾಭರಣ, ಚೀನಿ ಚೀನಾಂಬರಗಳು, ಹಾರಗಳು, ಗಂಧ-ಕಸ್ತೂರಿಗಳ ಸುವಾಸನೆ, ಶಾಮಂತಿಕಾ ತುಂಗ ಮಂದಾರವಿಂದಾದಿಗಳ ಪರಿಮಳವಿದೆ. ಈ ಭಾಗವು ಯಾರಿಂದ ಯಾರಿಗೆ ಹೇಳಿದ್ದೆಂಬ ವಿವರವಿದೆ.

ಈ ಕಥಾ ಕೋದ್ವಂಡವನ್ನು ನಿತ್ಯ ಪಾರಾಯಣ ಮಾಡುತ್ತ ಕೊಂಡಾಡುತ್ತ ಭಜಿಸುವ ಸಾಧು ಸಂತಾನಕೆ ಪಾಪಗಳು ಲೋಪವಾಗುವುದೆಂಬ ಫಲಶ್ರುತಿಯನ್ನು ಕೂಡಾ ಹೇಳಲಾಗಿದೆ. ಶ್ರೀಪಾದರಾಜರ 'ರಂಗವಿಠ್ಠಲ' ಎಂಬ ಅಂಕಿತವನ್ನು ದಂಡಕದ ಕಡೆಯಲ್ಲಿ ನಮೂದಿಸಲಾಗಿದೆ.

ಶ್ರೀಪಾದರಾಜರು ತಮ್ಮ ಕೃತಿಗಳಲ್ಲಿ ದ್ವೈತ ಸಿದ್ಧಾಂತದಂತಹ ಪ್ರಮುಖ ತತ್ತ್ವಗಳನ್ನು ಪರಿಚಯ ಮಾಡಿಕೊಟ್ಟಿದ್ದಾರೆ. ಇದರಲ್ಲಿ ರಸಾನುಭಾವದ ಸವಿಯನ್ನು ಕಾಣುವ ಹಾಗೆ ಹರಿ ಸರ್ವೋತ್ತಮ ತತ್ತ್ವವನ್ನು ಕೂಡಾ ಕಾಣಬಹುದು. ಇವರ ಕೃತಿಗಳಲ್ಲಿ ಸಂಭಾಷಣಾ ಸಂವಿಧಾನತೆಯು ಸರಳವೂ, ಸಹಜವೂ ಆಗಿ ಕಂಡುಬಂದಿರುವುದಕ್ಕೆ ಶ್ರೀಲಕ್ಷ್ಮೀನರಸಿಂಹ ದಂಡಕವು ಉತ್ತಮ ನಿದರ್ಶನವಾಗಿದೆ. ಶ್ರೀಪಾದರಾಜರ ರಚನೆಗಳಲ್ಲಿ ಉತ್ತಮ ವಾದ ಭಾವಗೀತೆಗಳ ಸವಿಯೂ ಅಡಕವಾಗಿದೆ. ಶ್ರೀಪಾದರಾಜರು ಭಕ್ತರ ಆಸೆ ಆಕಾಂಕ್ಷೆಗಳನ್ನು ಅವನ ಆತುರ-ಆತಂಕಗಳನ್ನು ತುಂಬಾ ಸೊಗಸಾಗಿ ಬಣ್ಣಿಸ ಬಲ್ಲರು ಎಂಬುದಕ್ಕೆ ಅವರ ಈ ಕೃತಿಯು ಸಾಕ್ಷಿಯಾಗಿ ನಿಂತಿದೆ.

ಶ್ರೀಪಾದರಾಜರು ವಿಜಯನಗರ ಸಾಮ್ರಾಜ್ಯದ ಅರಸರು, ಅದರಲ್ಲಿಯೂ ಸಾಳುವ ನರಸಿಂಹನೊಂದಿಗೆ ಅವರ ಮೇಲೆ ಪ್ರಭಾವ ಬೀರಬಲ್ಲಷ್ಟು ನಿಕಟವಾದ ಒಡನಾಟವನ್ನು ಹೊಂದಿದ್ದುದು ಕರ್ನಾಟಕದ ಇತಿಹಾಸದಲ್ಲಿ ಸ್ಮರಣೀಯವಾಗುಳಿದಿದೆ. ಧಾರ್ಮಿಕ ಪ್ರಭಾವಲಯದಲ್ಲಿನ ರೀತಿಯಂತೆ ಕನ್ನಡ ಸಾರಸ್ವತ ಲೋಕವಲ್ಲಿಯೂ ಭಾಗವತ ಸಾಹಿತ್ಯದ ಹೊಳಹುಗಳನ್ನು ಪರಿಪೂರ್ಣವಾದ ರೀತಿಯಲ್ಲಿ ಪರಿಚಯಿಸುವುದರ ಮೂಲಕ ಶ್ರೀಪಾದರಾಜರು ಧ್ರುವತಾರೆಯಾಗಿ ಬೆಳಗುತ್ತಿದ್ದಾರೆ ಎಂದು ಹೇಳಿದರೆ ಅದು ಅತಿಶಯೋಕ್ತಿಯಾಗಲಾರದು.

# ವಾದಿರಾಜರು

ಆಚಾರ್ಯ ಮಧ್ವರು ಸುಮಾರು ಎಂಟುನೂರು ವರ್ಷಗಳ ಹಿಂದೆ ಉಡುಪಿಯಲ್ಲಿ ಶ್ರೀಕೃಷ್ಣನನ್ನು ಪ್ರತಿಷ್ಠೆ ಮಾಡಿ ದೇವರ ಪೂಜಾ ಕೈಂಕರ್ಯಗಳಿಗೆ ನೆರವಾಗುವ ಸಲುವಾಗಿ ಎಂಟು ಮಠಗಳನ್ನು ಸ್ಥಾಪನೆ ಮಾಡಿದರು. ಅವುಗಳಿಗೆ ಮಠಾಧಿಪತಿಗಳನ್ನು ನೇಮಿಸಿದರು. ಈ ಅಷ್ಟಮಠಗಳಿಗೆ ಸೇರಿರುವ ಸೋದೆಯ ಮೊದಲ ಸ್ವಾಮಿಯಾದವರು ಮಧ್ವಾಚಾರ್ಯರ ಪೂರ್ವಾಶ್ರಮದ ಸೋದರರಾದ ಶ್ರೀ ವಿಷ್ಣುತೀರ್ಥರು. ಇವರ ಪರಂಪರೆಯಲ್ಲಿ ಹತ್ತೊಂಬತ್ತನೆಯ ಯತಿಗಳಾಗಿ ಪೀಠಾರೋಹಣ ಮಾಡಿದ ಶ್ರೀ ವಾಗೀಶತೀರ್ಥರ ಶಿಷ್ಯರಾಗಿದ್ದವರು ಶ್ರೀ ವಾದಿರಾಜರ ಸ್ವಾಮಿಗಳು. ಇವರು ಸಶರೀರವಾಗಿ ಬೃಂದಾವನವನ್ನು ಪ್ರವೇಶ ಮಾಡಿದವರಲ್ಲಿ ಮೊದಲಿಗರು. ನಂತರದವರು ಮಂತ್ರಾಲಯದ ಶ್ರೀ ರಾಘವೇಂದ್ರ ಸ್ವಾಮಿಗಳು.

ವಾದಿರಾಜರು ಸುಮಾರು ನೂರಿಪ್ಪತ್ತು ವರ್ಷಗಳ ಸುದೀರ್ಘಕಾಲ ಬದುಕಿ ನ್ಯಾಯ, ವೇದಾಂತ, ಕಾವ್ಯ, ಕೀರ್ತನೆಗಳನ್ನು ರಚಿಸಿ ವೇದಾಂತ ಧರ್ಮವನ್ನು ಪ್ರಜ್ವಲಗೊಳಿಸಿದರು. ಮುನಿತ್ರಯರೆಂದು ಪ್ರಸಿದ್ಧರಾದ ಆಚಾರ್ಯ ಮಧ್ವರು, ಜಯತೀರ್ಥರು ಮತ್ತು ವ್ಯಾಸರಾಜರ ನಂತರದಲ್ಲಿ ಅಗ್ರಮಾನ್ಯ ಗ್ರಂಥಕಾರರೆಂದು ಪ್ರಸಿದ್ಧರಾದ ವಾದಿರಾಜರಿಗೆ ಮಾಧ್ವ ಸಂಪ್ರದಾಯದಲ್ಲಿ ಅಪಾರವಾದ ಗೌರವವಿದೆ. ಮಿಗಿಲಾದ ಸ್ಥಾನವಿದೆ.

## ಜೀವನ-ಕೃತಿ

ಕರ್ನಾಟಕದ ಸುಪ್ರಸಿದ್ಧ ಪುಣ್ಯಕ್ಷೇತ್ರವಾದ ಉಡುಪಿ ಜಿಲ್ಲೆ, ಕುಂದಾಪುರ ತಾಲೂಕಿನ ಹೂವಿನಕೆರೆ ಗ್ರಾಮದಲ್ಲಿ ಸುಮಾರು ಕ್ರಿ.ಶ. ೧೪೮೦ರಲ್ಲಿ ವಾದಿರಾಜರು ಜನಿಸಿದರು. ಇವರ ತಂದೆ-ತಾಯಿಗಳು ರಾಮಾಚಾರ್ಯ ಮತ್ತು ಸರಸ್ವತೀದೇವಿ. ಪೂರ್ವಾಶ್ರಮದ ಹೆಸರು ಭೂವರಾಹ. ಬ್ರಹ್ಮಚರ್ಯದಿಂದ ನೇರವಾಗಿ ಸನ್ಯಾಸದೀಕ್ಷೆ ಪಡೆದ ವಾದಿರಾಜರು ಸುಮಾರು ನೂರಾಹನ್ನೆರಡು ವರ್ಷಗಳ ಕಾಲ ಆಶ್ರಮವಾಸಿಗಳಾಗಿ ಬಾಳಿದರು. ವ್ಯಾಸಕೂಟ ಮತ್ತು ದಾಸಕೂಟಗಳೆರಡರಲ್ಲೂ ಹೆಸರು ಗಳಿಸಿ ಸೋದೆಮಠದ ಸ್ವಾಮಿಯಾದರು. ಸುಮಾರು ಕ್ರಿಶ. ೧೬೦೦ರಲ್ಲಿ ಸಶರೀರರಾಗಿ ಬೃಂದಾವನಸ್ಥರಾದರು.

ವಾದಿರಾಜರು ಕನ್ನಡ-ಸಂಸ್ಕೃತಗಳೆರಡರಲ್ಲೂ ಪಂಡಿತರಾಗಿದ್ದರು. ಪ್ರತಿಭಾ ಸಂಪನ್ನರಾದ ಇವರು ಈ ಎರಡು ಭಾಷೆಗಳಲ್ಲೂ ಪ್ರಸಿದ್ಧ ಕೃತಿಗಳನ್ನು ರಚಿಸಿದರು. ತಮ್ಮ ದೀರ್ಘಾಯುಷ್ಯದ ಬಹುಭಾಗವನ್ನು ಸಾಮಾನ್ಯ ವರ್ಗದ ಜನರ ಲೌಕಿಕ ಜೀವನವನ್ನು ಪಾರಮಾರ್ಥಿಕದ ಕಡೆ ಹೊರಳಿಸಲು ಸಾಹಿತ್ಯ-ವೇದಾಂತ ಕೃತಿಗಳನ್ನು ರಚಿಸಿ ಅಪ್ರತಿಮ ಪಂಡಿತರಾಗಿದ್ದರು. ಸ್ಪಷ್ಟ ಚಿಂತನಶೀಲರಾದ ವಾದಿರಾಜ ಸಾರ್ವಭೌಮರು ವ್ಯಾಸರಾಜರು ಮತ್ತು ಪುರಂದರದಾಸರು-ಕನಕದಾಸರ ಸಮಕಾಲೀನರಾಗಿದ್ದರು.

## 'ತೀರ್ಥ ಪ್ರಬಂಧ'

ಸುಮಾರು ಎಪ್ಪತ್ತೈದಕ್ಕೂ ಮಿಗಿಲಾದ ಇವರ ಗ್ರಂಥರಾಶಿಯಲ್ಲಿ ಕಾವ್ಯ-ಶಾಸ್ತ್ರ ವಿಮರ್ಶೆ-ಟೀಕೆ, ಸ್ತೋತ್ರ ಗ್ರಂಥಗಳಿವೆ. ಲಕ್ಷ್ಮೀ ಶೋಬಾನೆ, ಭ್ರಮರಗೀತೆ, ವೈಕುಂಠ ವರ್ಣನೆಗಳೆಂಬ ವಿಶೇಷ ಕೃತಿಗಳನ್ನು ಇವರು ರಚಿಸಿದ್ದಾರೆ. ಇವರ ಕನ್ನಡ ಭಾಷೆಯ ಕೀರ್ತನೆಗಳೂ ಪ್ರಸಿದ್ಧಿ ಗಳಿಸಿವೆ. ಸಂಸ್ಕೃತ ಪ್ರವಾಸ ಸಾಹಿತ್ಯದಲ್ಲಿ ಮೇರುಕೃತಿಯಾಗಿ ವಾದಿರಾಜರ 'ತೀರ್ಥ ಪ್ರಬಂಧ'ವು ಪ್ರಖ್ಯಾತಿ ಪಡೆದಿದೆ.

ವಾದಿರಾಜರ ಕೃತಿಗಳಲ್ಲಿ ಶಾಸ್ತ್ರೀಯವಾದ ಉಕ್ತಿಗಳನ್ನು ಸಾಹಿತ್ಯಮುದ್ರೆಯಿಂದ ಮನಸ್ಸಿಗೆ ನೆಡುವಂತೆ ಸರಳವಾಗಿ, ಆದರೆ ಪ್ರೌಢ ಕನ್ನಡ ನುಡಿಯಲ್ಲಿ ಹೇಳಿರುವ ಧಾಟಿ ಯಿದೆ. ಭಕ್ತಿಯಿಂದ ಶ್ರೀಹರಿಯನ್ನು ಒಲಿಸಿಕೊಂಡು ಮುಕ್ತಿಯನ್ನು ಪಡೆಯಬೇಕೆಂಬುದನ್ನು ಸಿದ್ಧಾಂತ ಪಡಿಸಿರುವ ವಾದಿರಾಜರ ಕೃತಿಗಳನ್ನು ಶಾಸ್ತ್ರನಿಷ್ಠ ಗ್ರಂಥಗಳ ಸಾಲಿಗೆ ಸೇರಿಸ ಬಹುದು. ಕೇವಲ ತರ್ಕಶಾಸ್ತ್ರಬದ್ಧವಾದ ಆಲೋಚನೆಗಳನ್ನು ಮಾತ್ರವಲ್ಲದೆ ಚಾರಿತ್ರಿಕ ದೃಷ್ಟಿಯನ್ನು ಸಹ ಇವರು ಹೊಂದಿದ್ದರೆಂಬುದನ್ನು ತೀರ್ಥಪ್ರಬಂಧವೆಂಬ ಕೃತಿಯು ಸ್ಪಷ್ಟಪಡಿಸುತ್ತದೆ.

ಭಾರತ ದೇಶದಲ್ಲೆಲ್ಲ ಬರಿಗಾಲಿನಲ್ಲಿ ಸುತ್ತಾಡಿ ತಮ್ಮ ಪ್ರವಾಸಕಾಲದಲ್ಲಿ ತಾವು ಕಂಡ ಪ್ರಸಿದ್ಧವಾದ ಪುಣ್ಯಕ್ಷೇತ್ರಗಳ ವಿವರಣೆಯನ್ನು ಪದ್ಯರೂಪದಲ್ಲಿ ಈ ಕೃತಿಯಲ್ಲಿ ವಾದಿರಾಜರು ನೀಡಿದ್ದಾರೆ. ಇದರಲ್ಲಿರುವ ನಾಲ್ಕು ಭಾಗಗಳಿಗೆ ಪಶ್ಚಿಮ-ಉತ್ತರ-ದಕ್ಷಿಣ-ಪೂರ್ವವೆಂದು ಹೆಸರು. ಭಾರತದಲ್ಲಿನ ನೂರೆಂಟು ಪುಣ್ಯಕ್ಷೇತ್ರಗಳ ಮಹಿಮೆ, ಅಲ್ಲಿನ ನದೀತೀರ್ಥಗಳು, ಆರಾಧನೆಗೊಳ್ಳುತ್ತಿರುವ ದೇವಮೂರ್ತಿಗಳ ವಿವರಗಳು ಇನ್ನೂರಾ ಮೂವತ್ತೈದು ಪದ್ಯಗಳಲ್ಲಿ ಇದರಲ್ಲಿ ಅಡಕವಾಗಿವೆ.

ತೀರ್ಥಪ್ರಬಂಧದಲ್ಲಿ ವಿಷ್ಣುಕ್ಷೇತ್ರಗಳ ವಿವರಣೆಯಿರುವಂತೆ ಶೈವಕ್ಷೇತ್ರಗಳ ಟಿಪ್ಪಣಿ ಗಳೂ ಬಂದಿರುತ್ತದೆ. ದೇವೀಕ್ಷೇತ್ರಗಳ ಹಿರಿಮೆಯನ್ನೂ ತಿಳಿಸಿದ್ದಾರೆ. ವೇದ, ಪುರಾಣ, ರಾಮಾಯಣ, ಭಾಗವತ ಗ್ರಂಥಗಳ ಪರಾಮರ್ಶನೆಯಿದೆ. ಇತಿಹಾಸ, ಸಾಹಿತ್ಯ, ತತ್ತ್ವ ದರ್ಶನ, ಭೂಗೋಳಗಳ ಅವಲೋಕನವನ್ನು ಇದರಲ್ಲಿ ಕಾಣಬಹುದು. ಹೊರಗಣ್ಣಿಗೆ ಮಾತ್ರವಲ್ಲದೆ ಒಳಗಣ್ಣಿಗೆ ಗೋಚರವಾಗಬಲ್ಲ ವಸ್ತುಸಾಮಗ್ರಿಯಿದೆ. ತಮ್ಮ ದೀರ್ಘವಾದ ಜಪ-ತಪಸ್ಸು, ಪಾಠ-ಪ್ರವಚನಗಳ ನಡುವೆಯೂ ಶ್ರೀ ವಾದಿರಾಜರು ಸಮಯಾವಕಾಶ ಮಾಡಿಕೊಂಡು ಭಾರತದ ಪರ್ಯಟನೆ ನಡೆಸಿ ತಾವು ಗಳಿಸಿದ ಪ್ರವಾಸದ ಪುಣ್ಯಫಲವನ್ನು ತೀರ್ಥ ಪ್ರಬಂಧವೆಂಬ ಸತ್ಕೃತಿಯ ಮೂಲಕ ನಮಗೆ ಉಣಬಡಿಸಿದ್ದಾರೆ.

ನರಸಿಂಹಸ್ವಾಮಿಯ ಮಹಿಮೆ ಸ್ವಭಾವಗಳು ಕೆಲವೊಂದು ತೀರ್ಥಕ್ಷೇತ್ರಗಳ ಮೂಲಕ ವ್ಯಕ್ತವಾಗಿರುವುದನ್ನು ಈ ಕೃತಿಯಲ್ಲಿ ಕಾಣಬಹುದು. ಸ್ಥಳಪುರಾಣ, ಐತಿಹ್ಯಗಳನ್ನು ಒಳಗೊಂಡ ವಿಸ್ತೃತ ಸಂಗತಿಗಳನ್ನು ಆಯಾ ಕ್ಷೇತ್ರಗಳಿಗೆ ಸಂಬಂಧಪಡುವ ಭಾಗದಲ್ಲಿ

ನಿರೂಪಿಸಲಾಗಿರುವ ಕಾರಣ ಪ್ರಸ್ತುತದಲ್ಲಿ ತೀರ್ಥಪ್ರಬಂಧದ ಅಭ್ಯಾಸದ ಹಿನ್ನೆಲೆಯಲ್ಲಿ ನರಸಿಂಹದೇವರ ಗುಣಸ್ವಭಾವಗಳ ಸ್ಥೂಲನೋಟವೊಂದರ ಚಿತ್ರಣ ಇಲ್ಲಿ ಸೂಕ್ತವಾದೀತು.

## ನರಸಿಂಹಕ್ಷೇತ್ರಗಳು

ಪಶ್ಚಿಮ ಪ್ರಬಂಧದಲ್ಲಿ ಚಿಂತಾಮಣಿ ನರಸಿಂಹನನ್ನು ಕುರಿತ ವಿವೇಚನೆ ಕೃತಿಕಾರರ ಎರಡು ಪದ್ಯಗಳಲ್ಲಿ ಹೊರಹೊಮ್ಮಿದೆ. ಮಂಗಳೂರು-ಬೆಂಗಳೂರು ಮಾರ್ಗ ಮಧ್ಯದಲ್ಲಿನ ಉಪ್ಪಿನಂಗಡಿಗೆ ಸಮೀಪ ನರಸಿಂಹ ಕ್ಷೇತ್ರವಿರುವುದಾಗಿ ತಿಳಿದುಬರುತ್ತದೆ. ಇಲ್ಲಿನ ನರಸಿಂಹನ ರೂಪಾದಿ ವಿಶ್ಲೇಷಣೆಯನ್ನು ಒಂದು ಪದ್ಯದಲ್ಲಿ ಕಾಣಬಹುದಾದರೆ ಮತ್ತೊಂದು ಪದ್ಯದಲ್ಲಿ ಅವತಾರದ ಕಾರಣವನ್ನು ವಿಶಿಷ್ಟವಾದ ರೀತಿಯಲ್ಲಿ ತಿಳಿಸಲಾಗಿದೆ. ನರಸಿಂಹನು ಕುಳಿತಿರುವ ಭಂಗಿಯೂ ವಿಶೇಷವೆನ್ನಬೇಕು. ತನ್ನ ಎಡತೊಡೆಯನ್ನು ಭೂಮಿಯ ಮೇಲೆ ಊರಿಕೊಂಡು ಅದರ ಮೇಲೆ ತನ್ನ ಎಡಗೈಯನ್ನಿಟ್ಟುಕೊಂಡಿರುವ, ಸುದರ್ಶನ ಚಕ್ರವನ್ನು ಧರಿಸಿರುವ, ಬಲಗೈ ಮೇಲೆದ್ದ ಬಲತೊಡೆಯ ಮೇಲಿದ್ದು ನೇತ್ರಾವತೀ ನದೀತಟ ವಾಸಿಯಾಗಿ ಈ ನರಸಿಂಹನು ಶೋಭಿಸುತ್ತಿದ್ದಾನೆ.

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಹರಿಯುವ ನದಿಗಳ ಪೈಕಿ ನೇತ್ರಾವತಿಯು ಅತ್ಯಂತ ಉದ್ದವಾದ ನದಿಯಾಗಿದೆ. ಇದು ವರಾಹ ಪರ್ವತದಲ್ಲಿ ಹುಟ್ಟಿ ಮಂಗಳೂರಿನಲ್ಲಿ ಅರಬ್ಬೀ ಸಮುದ್ರವನ್ನು ಸೇರುತ್ತದೆ. ಈ ಪವಿತ್ರವಾದ ನದಿಯನ್ನು ಸಹ ವಾದಿರಾಜರು ತಮ್ಮ ಎರಡು ಶ್ಲೋಕಗಳಲ್ಲಿ ವರ್ಣಿಸಿದ್ದಾರೆ.

ನರಸಿಂಹಸ್ವಾಮಿಯು ಪಾತಾಳದಿಂದ ಮೇಲೆದ್ದು ಬಂದು ಶಿವನ ತಪಸ್ಸಿಗೆ ವಿಘ್ನಕಾರಿಗಳಾದ ಯೋಗಿನೀ ದುಷ್ಟಶಕ್ತಿಗಳನ್ನು ನಿಗ್ರಹಿಸಿದ್ದು ಇಲ್ಲಿನ ಸ್ಥಳಪುರಾಣ. ಈ ಸಂಗತಿಯು ವಾದಿರಾಜರ ಪದ್ಯದಲ್ಲಿ ಅಭಿವ್ಯಕ್ತಗೊಂಡಿದೆ. ನಿಮಿರಿದ ಕಿವಿಗಳು, ಕೈಲಿ ಧರಿಸಿದ ಚಕ್ರಾಯುಧ ಆತನ ಕ್ರಿಯಾಶೀಲತೆಯನ್ನು ಸ್ಪಷ್ಟವಾಗಿ ಸೂಚಿಸುತ್ತವೆ. ಗೌರೀಪತಿಯಾದ ಶಿವನಿಗೆ ಅಭೀಷ್ಟಪ್ರದನಾಗಿರುವ ನರಸಿಂಹನ ವಿವರಣೆಯಲ್ಲಿ ಹರಿಹರರ ಸಂಬಂಧ, ಶಂಕರನಾರಾಯಣ ಕಲ್ಪನೆಗಳೂ ಇದ್ದಿರಬಹುದಾಗಿದೆ. ರುದ್ರಾಂತರ್ಗತ ನರಸಿಂಹ ತತ್ವವನ್ನು ಪ್ರತಿಪಾದಿಸುವಂತಿದೆ.

## ಅಹೋಬಿಲ

'ನರಸಿಂಹ ಸಪ್ತಗಿರಿ'ಯೆಂದೇ ಶ್ರೀವೈಷ್ಣವರು ಭಾವಿಸಿರುವ ಪ್ರಖ್ಯಾತವಾದ ಪುಣ್ಯಕ್ಷೇತ್ರವಾಗಿರುವ ಅಹೋಬಿಲವನ್ನು ವಾದಿರಾಜರು ಐದು ಪದ್ಯಗಳಲ್ಲಿ ವಿವರಿಸುತ್ತಾರೆ. ಇವರ ವರ್ಣನೆಯ ಮೂಲಕವಾಗಿ ನೋಡಿದಾಗ ಇದು ಮಾಧ್ವಮತದವರಿಗೂ ಪರಮಪವಿತ್ರವಾದ ವೈಷ್ಣವಕ್ಷೇತ್ರವೇನೋ ಎಂಬಂತೆ ಭಾಸವಾಗುತ್ತದೆ. ಅಹೋಬಿಲ ಪರ್ವತದ ಕೆಳಗೆ, ಮಧ್ಯದಲ್ಲಿ ಹಾಗೂ ಮೇಲ್ಭಾಗಗಳಲ್ಲಿರುವ ಮೂರು ದೇವಾಲಯಗಳು ಮತ್ತು ಭವನಾಶಿನಿ

ನದಿ ಈ ಪವಿತ್ರಕ್ಷೇತ್ರದ ಕೇಂದ್ರಸ್ಥಳಗಳಾಗಿವೆ. ಭವನಾಶಿನಿ ನದಿಯ ವರ್ಣನೆಯನ್ನು ಯತಿವರೇಣ್ಯರ ಕೃತಿಯಲ್ಲಿ ಗಮನಿಸಬಹುದು. 'ಭವನಾಶಿನಿ ಮಚ್ಛೀರ್ಣ ಪಾಪಾನಾಂ ಭವನಾಶಿನಿ' ಎಂಬುದಾಗಿ ನದಿಯು ನಮ್ಮ ಪಾಪಗಳನ್ನು ನಾಶಪಡಿಸಲಿ ಎಂದು ಪ್ರಾರ್ಥಿಸಿರುವುದು ಅವರ ವರ್ಣನಾ ಕೌಶಲಕ್ಕೆ ನಿದರ್ಶನವಾಗಿದೆ.

'ಅಹೋಬಲ ನೃಸಿಂಹಸ್ಯ' - ಎಂದು ಆರಂಭವಾಗುವ ಪದ್ಯವು, ನರಸಿಂಹನ ತೇಜೋಬಲದಿಂದ ಮಿಥ್ಯಾಜ್ಞಾನವೆಂಬ ಕತ್ತಲೆಯು ಪರಿಹಾರವಾಗುವ ಬಗೆಯನ್ನು ಮನ ಮುಟ್ಟುವಂತೆ ತಿಳಿಸುತ್ತದೆ. ಮಧ್ವಾಚಾರ್ಯರ ಮಾಯಾವಾದ ಖಂಡನೆಯ ಶ್ಲೋಕದ ಛಾಯೆ ಇಲ್ಲಿ ತುಂಬಿದೆಯೆಂಬುದು ವ್ಯಾಖ್ಯಾನಕಾರರ ಅಭಿಪ್ರಾಯವಾಗಿರುತ್ತದೆ. ಕುತ್ಸಿತರಾದ ಪ್ರತಿವಾದಿಗಳಿಂದ ತುಂಬಿದ ಸಂಸಾರವನ್ನು ದಾಟುವಲ್ಲಿ ನರಸಿಂಹನ ತೇಜೋಬಲವು ಬಲವಾದ ಆಶ್ರಯದಂತಿದೆಯೆಂಬುದು ಇಲ್ಲಿನ ಭಾವವಾಗಿದೆ. ದೀಪ ಮತ್ತು ಕತ್ತಲೆಗಳ ಹೋಲಿಕೆಯನ್ನು ನೀಡಿ ಗಹನವಾದ ಸಂಗತಿಯನ್ನು ಹೇಳುತ್ತಿರುವುದು ಸ್ವಾರಸ್ಯಕರವಾಗಿದೆ.

ವಾದಿರಾಜ ಯತಿಗಳ ಮುಂದಿನ ಶ್ಲೋಕವು ನರಸಿಂಹನು ಕಂಭದಲ್ಲಿ ಪ್ರಕಟಗೊಂಡ ವಿಚಾರವನ್ನು ನೆನಪಿಸುತ್ತದೆ. ಕಂಭದಲ್ಲಿ ಪ್ರಾದುರ್ಭೂತನಾದ ಸ್ವಾಮಿಯು ಕಂಭದಂತೆ ಜ್ಞಾನಶೂನ್ಯವಾಗಿರುವ ತನ್ನಲ್ಲಿ ಪ್ರಕಟಗೊಳ್ಳಲೆಂಬ ಪ್ರಾರ್ಥನೆ ಸರ್ವರಿಗೂ ಅನ್ವಯವಾಗುವಂತಿದೆ. ಭವನಾಶಿನಿ ತಟದಲ್ಲಿರುವ ಭಗವಂತನು ಭವವೆಂಬ ಸಂಸಾರವನ್ನು ಪರಿಹರಿಸಲೆಂದು ಕೇಳಿಕೊಂಡಿರುವುದರಲ್ಲಿ ಯಾಚನೆ ತುಂಬಿದೆ. ಬಾಲಕನಾದ ಪ್ರಹ್ಲಾದನನ್ನು ಪಾಲಿಸಿದವನು ಬಾಲಿಶನಾದ ತನ್ನನ್ನು ಕಾಪಾಡಬೇಕು ಎಂದು ಕೇಳಿರುವುದು ಸಕಲರಿಗೂ ಸಂಬಂಧಪಡುವಂತಿದೆ. ಈ ಪದ್ಯದಲ್ಲಿ ರಾಕ್ಷಸನಾದ ಹಿರಣ್ಯಕಶಿಪುವನ್ನು ಸಂಹರಿಸಿದ ನರಸಿಂಹನು ರಾಕ್ಷಸರಂತಹ ದುಷ್ಟಜನತೆಯನ್ನು ಸಂಹರಿಸಲಿ ಎಂಬ ಭಾವವಿರುವುದನ್ನು ಕಾಣಬಹುದು.

ನರತ್ವ ಮತ್ತು ಸಿಂಹತ್ವಗಳೆರಡೂ ವಿರುದ್ಧ ಧರ್ಮಗಳಾಗಿವೆ. ಇವು ಒಂದೆಡೆ ಇರುವುದನ್ನು ನರಸಿಂಹಾವತಾರದಲ್ಲಲ್ಲದೆ ಬೇರೆಲ್ಲೂ ಕಾಣಲಾರೆವು. ಈ ಮೂಲಕ ನರಸಿಂಹನು ತಾನು ಅಣುತ್ವ ಮಹತ್ವಾದಿ ವಿರುದ್ಧ ಧರ್ಮಗಳನ್ನೂ ಹೊಂದಿರುವ ಅಚಿಂತ್ಯಾದ್ಭುತ ಶಕ್ತಿಸಂಪನ್ನವೆಂಬುದನ್ನು ಸ್ಪಷ್ಟಪಡಿಸುತ್ತಿದ್ದಾನೆ. ತಾನು ಸರ್ವಾಂತರ್ಯಾಮಿ ಎಂಬುದನ್ನು ಕಂಭದ ಮೂಲಕ ಪ್ರಕಟಿಸುತ್ತಿದ್ದಾನೆ. ಬ್ರಹ್ಮಸೂತ್ರೋಕ್ತವಾದ ಪ್ರಮೇಯವನ್ನು ಹೋಲುವಂತಿರುವ ಶ್ಲೋಕದಲ್ಲಿ ಭಾಗವತ ಪ್ರಸಂಗದ ವಿವರಣೆ ಇದೆ.

ಹಿರಣ್ಯಕಶ್ಯಪನ ಉದರವನ್ನು ಸೀಳಿ ಕರುಳಮಾಲೆಯನ್ನು ಹೊರತೆಗೆದು ಕೊರಳಲ್ಲಿ ಧರಿಸಿದ ಸ್ವಾಮಿಯ ಕಾರ್ಯವು ಪ್ರಹ್ಲಾದನಿಗೆ ಸಂತೋಷವನ್ನೂ, ಸಜ್ಜನರಿಗೆ ಅತ್ಯಂತ ಪ್ರೀತಿಯನ್ನೂ ಉಂಟುಮಾಡಿದೆ. ದುಷ್ಟರಾದವರಿಗೆ ಭಯಂಕರ ಲೀಲೆಗಳನ್ನು ಪ್ರದರ್ಶನ ಮಾಡಿದಂತಿದೆ. ಸಿಂಹನಾದವನ್ನು ಮಾಡಿ ಬ್ರಹ್ಮಾಂಡವೆಂಬ ಮಣ್ಣಿನಪಾತ್ರೆಯನ್ನು ತುಂಬಿದ, ಉಗುರುಗಳೆಂಬ ಸ್ತುತ್ಯವಾದ ಅಭಿನವ ವಜ್ರಾಂಕುರಗಳನ್ನು ಹೊಂದಿರುವ ನರಸಿಂಹನನ್ನು ಆಶ್ರಯಿಸುವುದರಿಂದ ಪ್ರಹ್ಲಾದನಿಗೆ ದೊರೆತ ನಿತ್ಯಸುಖವು ಎಲ್ಲರಿಗೂ ಲಭ್ಯವಾಗುವುದು.

## ರಹಸ್ಯದ ಕೀಲಿ

ವಾದಿರಾಜ ಯತಿಗಳು ಮಧ್ವಮತದ ಪ್ರಾಮುಖ್ಯತೆಯನ್ನು ಮತ್ತು ಅದರ ತತ್ತ್ವಗಳನ್ನೂ ಸಹ ಅರ್ಥಗರ್ಭಿತವಾಗಿ ವ್ಯಾಖ್ಯಾನಿಸಬಲ್ಲವರಾಗಿದ್ದಾರೆ. ನರಸಿಂಹಾವತಾರದ ಹಿನ್ನೆಲೆಯಲ್ಲಿ ಈ ಮತ ಸಿದ್ಧಾಂತಗಳ ವಿವರಣೆಯಿರುವುದು ಕಂಡುಬಂದಿದೆ. ಮಧ್ವಾಚಾರ್ಯರ ದಟ್ಟವಾದ ಪ್ರಭಾವವು ಇವರ ಮೇಲಿರುವುದನ್ನು ಅರಿಯಬಹುದು. ಸಿಂಹಾಕೃತಿಯ ಮೂಲಕವಾಗಿ ಭಗವಂತನು ಪ್ರಜ್ವಲಿಸುವ ಆಯುಧಗಳನ್ನು ತಳೆದು ಸಂಸಾರವೆಂಬ ಅರಣ್ಯದಲ್ಲಿ ಮದೋನ್ಮತ್ತರಾದ ಮಾಯಾವಾದಿಗಳೆಂಬ ಆನೆಗಳನ್ನು ಮರ್ದನ ಮಾಡಿದ ಕೃತ್ಯದಲ್ಲಿ ತೊಡಗಿದವರಿಗೆ ತಾನು ಸಹಾಯಕನಾಗಿದ್ದಾನೆ. ಈ ರೀತಿ ಮಾನವರಿಗೆ ಸಹಾಯ ಮಾಡುತ್ತಿರುವುದಕ್ಕೆ ತನ್ನ ಮನುಷ್ಯತ್ವವೆಂಬ ಸಮಾನಜಾತಿಯು ಕಾರಣವೆಂಬುದನ್ನು ನರರೂಪದಿಂದ ತೋರ್ಪಡಿಸುತ್ತಿದ್ದಾನೆ. ಆಚಾರ್ಯರ ಅನುವರ್ತಿಗಳಿಗೆ ದೊರೆಯುವ ಯಶಸ್ಸಿನ ಮೂಲಪ್ರೇರಕ ಶಕ್ತಿಯಾಗಿ ನರಸಿಂಹನು ಕಂಡುಬರುವ ವಿಚಾರವು ಈ ಪದ್ಯದ ಭಾವಾರ್ಥವಾಗಿ ಶ್ರುತಪಡುತ್ತಿದೆ.

ಅವತಾರಗಳಲ್ಲೆಲ್ಲ ನರಸಿಂಹಾವತಾರವು ವಿಚಿತ್ರವಾದ ಸಮ್ಮಿಲನ. ಇದನ್ನು ಅರ್ಥೈಸಿಕೊಂಡಿರುವ ಆಳ್ವಾರರು-ಆಚಾರ್ಯರು, ಯತಿವರೇಣ್ಯರು-ದಾಸಶ್ರೇಷ್ಠರು, ಕವಿಗಳು-ತಾರ್ಕಿಕರೆಲ್ಲರ ಮನೋಭಿಪ್ರಾಯವು ವಿಶಿಷ್ಟವಾದದ್ದು. ಕ್ಷಣಾವತಾರವೆಂಬುದೂ, ದುಷ್ಟ ಸಂಹಾರಕ್ಕಾಗಿಯೇ ಈ ಅವತಾರದ ಪ್ರಯೋಜನವೆಂಬುದೂ ದಿಟವೇ ಆದರೂ ಭಗವಂತನ ಮಹತೋಮಹೀಯವಾದ ಗುಣದಿಂದ ಕೂಡಿದ ಅದ್ಭುತದರ್ಶನವು ಇಲ್ಲಿ ಸಾಧ್ಯವಾಗಿದೆ. ನರಸಿಂಹಾವತಾರವು ಒಂದು ತತ್ವವೇ ಆಗಿದೆಯೆಂಬುದು ಭಾಸವಾಗುತ್ತದೆ. ಈ ಅವತಾರದ ರಹಸ್ಯವನ್ನು ಬಿಡಿಸಿಕೊಳ್ಳುವ ಹಾದಿಯಲ್ಲಿ ವಾದಿರಾಜರ ತೀರ್ಥಪ್ರಬಂಧವು ಸಣ್ಣ ಉಪಕರಣದಂತೆ ಕಂಡುಬರುತ್ತಿರುವುದು ಈ ಕೃತಿಯ ಮಹತ್ವವಾಗಿದೆ.

## ಎರಡು ಸ್ತೋತ್ರಗಳು

ವಾದಿರಾಜರ ನರಸಿಂಹಪರವಾದ ಮತ್ತಷ್ಟು ಕೃತಿಗಳನ್ನು ಅವರ ಸಾಹಿತ್ಯ ಭಂಡಾರ ದಲ್ಲಿ ನೋಡಬಹುದು. ಅವರು ರಚಿಸಿರುವ ಎರಡು ಸುಳಾದಿಗಳು, 'ದಶಾವತಾರ ಸ್ತುತಿ'ಗಳು ಇಲ್ಲಿ ಗಮನಾರ್ಹವಾದ್ದೆಂದು ಹೇಳಬಹುದು.

*ಮುಂದ್ ನೃಸಿಂಹ ನಮ್ಮ ತ (ಟ)ಕ್ಕೀಗ*
*ಬಂದ ವ್ಯಸನಗಳ ಬೇಗ ಖಂಡಿಸಿ*
*ತಂದ್ (ಹಿಂದ್) ನೊಂದಿರ್ದ ಕಂದನ ಕಾಯ್ದಂತ್*
*ಇಂದನ್ನ ಕಾಯಬೇಕು ವೃಂದಾರಕ ಸ್ವಾಮಿ*

- ಇದೊಂದು ಪದ್ಯರಚನೆ. ಪ್ರಾರ್ಥನೆಯ ರೂಪದಲ್ಲಿದೆ.

ವ್ಯಸನಾದಿಗಳಿಂದ ದೂರ ಮಾಡಬೇಕೆಂಬ ಸರಳವಾದ ಬೇಡಿಕೆ ಇಲ್ಲಿದೆ. ಇದರ ಹಿನ್ನೆಲೆಯು ಕೂಡಾ ಅಷ್ಟೇ ಅರ್ಥಗರ್ಭಿತವಾಗಿದೆಯೆಂಬುದನ್ನು ಗಮನಿಸಬೇಕು.

ವಾದಿರಾಜರ ಸುಳಾದಿಯ ಕೆಲವು ಸಾಲುಗಳನ್ನಿಲ್ಲಿ ಗಮನಿಸಬೇಕು -

*ದೈತ್ಯಕುಲದಲ್ಲಿ ಜನಿಸಿದ ಪ್ರಹ್ಲಾದನಿಗೆ*
*ಭಕ್ತಿಯಿದ್ದುದರಿಂದ ಮುಕ್ತಿಯಾಯಿತು ಗಡ*
*ಚಿತ್ರವೀತನ ಬಲದಿ ಪಾತಕಿ ಪಿತನಿಗೆ*
*ಮುಕ್ತಿಸೇರಿತು ಶುಕಮುನಿಪಸೊರದಾಗಡ*
*ಭಕ್ತರಲ್ಲದೆ ಹಯವದನದ್ವೇಷಿ ಕೆಲರು*
*ಮುಕ್ತಿಪಥವೇರಿದರೆ ಸುತನ ಬಲವ್ಯಾತಕೆ*

- ಈ ರಚನೆಯಲ್ಲಿ ಭಕ್ತಿಪಾರಮ್ಯದ ವಿವರಣೆಯಿದೆ. ಭಕ್ತಿಯಿದ್ದಲ್ಲಿ ಏನನ್ನಾದರೂ ಸಾಧಿಸಬಹುದೆಂಬ ವಿಚಾರದ ಹರವಿದೆ. ಮುಕ್ತಿಪಥದ ದಾರಿ ಕಾಣಿಸಲಾಗಿದೆ. 'ಹಯವದನ' ಮುದ್ರಿಕೆಯಿರುವ ಸುಳಾದಿಯಲ್ಲಿ ಹರಿಭಕ್ತಿಯ ಪ್ರಾಶಸ್ತ್ಯವನ್ನು ಮಧ್ವಮತದ ಆಧಿಕ್ಯತೆಯನ್ನು ಎತ್ತಿಹಿಡಿಯಲಾಗಿದೆ. ತಮ್ಮ ಕೃತಿಗಳ ಮೂಲಕ ವಾದಿರಾಜರು ಮಾಧ್ವಮತ ಸಿದ್ಧಾಂತಗಳನ್ನು ಉಳಿಸಬೇಕೆನ್ನುವ ತುಡಿತವನ್ನು ಹೊಂದಿರುವುದನ್ನು ಕಾಣಬಹುದು.

ದಶಾವತಾರಸ್ತುತಿಯು ಮೂವತ್ತನಾಲ್ಕು ಪದ್ಯಗಳ ಸಂಸ್ಕೃತಕೃತಿ. ಇದರಲ್ಲಿನ ಒಂದೊಂದು ಪದ್ಯವೂ ನಾಲ್ಕು ಚರಣಗಳಿಂದ ಕೂಡಿದೆ. ಎಂಟನೆಯ ಪದ್ಯದಲ್ಲಿ ನರಸಿಂಹಾವತಾರದ ವಿವರವಿದೆ. ಪರಮಾತ್ಮನು ಕಂಭದಿಂದೊಡೆದುಬಂದ ಪ್ರಸಂಗವನ್ನು ಮುಖ್ಯವಾಗಿ ಹೊಂದಿರುವ ಈ ಸಾಲುಗಳಲ್ಲಿ ಆತನ ಸ್ವಭಾವವನ್ನು ಗಹನವಾಗಿ ವಿವರಿಸಲಾಗಿದೆ. ಆದಿಪ್ರಾಸದಿಂದ ಕೂಡಿರುವ ಇದರ ಶೈಲಿಯು ವಿಜೃಂಭಣ ಗುಣವುಳ್ಳದ್ದಾಗಿದೆ. ಕೃತಿಕಾರರ ಪಾಂಡಿತ್ಯ ಪ್ರತಿಭೆಗಳ ಉನ್ನತವಾದ ಉದಾಹರಣೆಯಾಗಿ ಕಂಡುಬರುತ್ತದೆ.

## ವಾದಿರಾಜರ ದಶಾವತಾರ ಸ್ತುತಿಃ

ದಂಭೋಲಿತೀಕ್ಷ್ಣ ನಖಸಂಭೇದಿದಿತೇಂದ್ರ
ರಿಪುಕುಂಭೀಂದ್ರಪಾಹಿ ಕೃಪಯಾ
ಸ್ತಂಭಾರ್ಭಕಾಸಹನ ಡಿಂಬಾಯ ದತ್ತವರ
ಗಂಭೀರನಾದ ನೃಹರೇ
ಅಂಬೋಧಿಜಾನುಸರಣಾಂಭೋಜ ಭೂಪವನ
ಕುಂಭೀನಸೇಶಖಗರಾಟ್
ಕುಂಭೀಂದ್ರಕೃತ್ತಿದರ ಜಂಭಾರಿಷಣ್ಮುಖಮುಖಾಂ
ಭೋರಾಹಾಭಿನುತಮಾಮ್

# ಪುರಂದರದಾಸರು

'ದಾಸರೆಂದರೆ ಪುರಂದರದಾಸರಯ್ಯ' - ಎಂಬ ಹೊಗಳಿಕೆಗೆ ಪಾತ್ರರಾಗಿ ಹಿರಿಯ ಭಕ್ತರಾಗಿದ್ದು ವಾಗ್ಗೇಯಕಾರರ ಸಾಲಿನಲ್ಲಿ ಮೊದಲಿಗೆ ಕಂಡು ಬರುವ ಪುರಂದರದಾಸರು ಭಾಗವತ ಧರ್ಮವನ್ನು ಪ್ರಚಾರ ಮಾಡಿದ ಹರಿದಾಸರಲ್ಲಿ ಅಗ್ರಗಣ್ಯರಾಗಿದ್ದಾರೆ. ಸಿರಿತನದ ಮಡಿಲಲ್ಲಿ ಬೆಳೆದ ಇವರನ್ನು ಯಾವುದೋ ಒಂದು ಸಂದರ್ಭವು ತ್ಯಾಗಜೀವಿಗಳನ್ನಾಗಿ ಮಾಡುತ್ತದೆ. ಸಾಂಸಾರಿಕ ಪ್ರಸಂಗವೊಂದರಲ್ಲಿ ತಮ್ಮ ಹೇರಳವಾದ ಸಂಪತ್ತನ್ನೆಲ್ಲ ದಾನಮಾಡಿ ಮಧುಕರ ವೃತ್ತಿಯಿಂದ ನಾಡನ್ನು ಸುತ್ತಾಡಿದ ಇವರ ನಡೆನುಡಿಗಳಿಂದ ಭಾಗವತ ಪರಂಪರೆಗೆ ಮಹದುಪಕಾರವಾಗಿದೆ. ವಿಜಯನಗರಕ್ಕೆ ಆಗಮಿಸಿದ ಇವರಿಗೆ ವ್ಯಾಸರಾಯರು ದಾಸದೀಕ್ಷೆಯನ್ನು ನೀಡಿದರು. ಇದರಿಂದಾಗಿ ಇವರ ಮುಂದಿನ ಜೀವನವೆಲ್ಲವೂ ಹರಿಸಮರ್ಪಿತವಾಯಿತು. ಭಾರತದ ಬಹುಭಾಗವನ್ನು ಸಂಚರಿಸಿದ ಇವರಿಂದ ಭಕ್ತಿಸಂಚಾರವಾಗಿ, ಸಂಗೀತ ಸಾಮ್ರಾಜ್ಯದಲ್ಲಿ ಉಜ್ವಲ ಕಾಂತಿಯು ಬೆಳಗಿದಂತಾಯಿತು.

## ಪೂರ್ವರಂಗ

ಶ್ರೀಪಾದರಾಜರ ಶಿಷ್ಯೋತ್ತಮರಾದ ವ್ಯಾಸರಾಯರು ಕಟ್ಟಿದ ದಾಸಕೂಟಕ್ಕೆ ಪುರಂದರ ದಾಸರು ತಲೆಮಣಿಯಂತಿದ್ದರು. ಇವರು ಕನ್ನಡಸಾಹಿತ್ಯಕ್ಕೆ ಅಮೂಲ್ಯವಾದ ಕೀರ್ತನೆಗಳ ಪುಷ್ಪಮಾಲಿಕೆಯನ್ನು ಸೇರಿಸಿದರು. ಇದರ ಶ್ರೀಮಂತಿಕೆಗೆ ಕಾರಣರಾದರು. ಹರಿಭಕ್ತಿಯನ್ನು ಹರಡಿ ವಿಜಯನಗರ ಸಾಮ್ರಾಜ್ಯ ವೈಭವದ ಅಂಗವಾದ ಸಂಗೀತಕಲೆಯನ್ನು ಹೊಸದಿಕ್ಕಿನತ್ತ ನಡೆಸಿದ ಇವರನ್ನು ದಾಸಶ್ರೇಷ್ಠರೆಂದು ಗೌರವಿಸಲಾಗುತ್ತಿದೆ.

ಪುರಂದರದಾಸರು ಪುರಂದರ ಗಢದ ನಿವಾಸಿಯಾಗಿದ್ದರು. ಈಗ ಇದು ಮಹಾರಾಷ್ಟ್ರದ ಪೂನಾ ಜಿಲ್ಲೆಯಲ್ಲಿದೆ. ಇವರ ಮೊದಲಿನ ಹೆಸರು ಕೃಷ್ಣಪ್ಪನಾಯಕ. ಇವರ ಹೆಂಡತಿ ಸರಸ್ವತಿಬಾಯಿ. ತಮ್ಮ ಬಹುಪಾಲು ಜೀವನವನ್ನು ವಿಜಯನಗರದ ಅರಸರಾದ ಕೃಷ್ಣದೇವ ರಾಯ ಹಾಗೂ ಅಚ್ಯುತರಾಯರ ಕಾಲದಲ್ಲಿ ಕಳೆದ ಕಾರಣ ಇವರ ಜೀವಿತದ ಅವಧಿಯನ್ನು ಇದೇ ಕಾಲಕ್ಕೆ ಸೇರಿಸಬಹುದು.

ದಾಸರು ನಾಲ್ಕು ಲಕ್ಷ ಎಪ್ಪತ್ತೈದು ಸಾವಿರ ಕೀರ್ತನೆಗಳನ್ನು ರಚಿಸಿರುವರೆಂದು ಅಂದಾಜಿದೆ. ಇವರ ಕೀರ್ತನೆ ಹಾಡುಗಳಲ್ಲಿ ಅತ್ಯಂತ ಸರಳವಾದುದರಿಂದ ಹಿಡಿದು ಅತ್ಯಂತ ಭವ್ಯವಾದವರೆಗಿನ ವಿಷಯಗಳಿವೆ. ಇದರಿಂದ ಇವರ ಕೀರ್ತನ ಸಾಮ್ರಾಜ್ಯದ ಅಗಾಧತೆ ಅರಿವಾಗುವುದಾದರೂ, ಇವುಗಳಲ್ಲಿ ಕೇವಲ ಒಂದು ಸಾವಿರದಷ್ಟು ರಚನೆಗಳಷ್ಟೇ ಪ್ರಕಟವಾಗಿವೆ. ಇವರ ಕೀರ್ತನೆಗಳ ಸಂಗ್ರಹ, ಅವುಗಳ ಸ್ವಾರಸ್ಯ ವಿವರಣೆ, ಅವುಗಳಲ್ಲಿರುವ ತಾತ್ವಿಕ ಆಲೋಚನೆಗಳು, ಸಮಾಜಕ್ಕೆ ಅವುಗಳಿಂದಾದ ಉಪಯೋಗಗಳ ಬಗ್ಗೆ ಸಂಶೋಧನಾತ್ಮಕ ರೀತಿಯ ಕಾರ್ಯವು ನಡೆದಿದೆ.

ಕನ್ನಡನಾಡಿನ ಇತರ ಹರಿದಾಸರಂತೆ ಪುರಂದರದಾಸರೂ ಹರಿನಾಮ ಪೀಯೂಷವನ್ನು ತಮ್ಮ ನಲ್ನುಡಿಗಳ ಮೂಲಕ ಜನಸಾಮಾನ್ಯ ವರ್ಗದವರಿಗೆ ಧಾರೆಯೆರೆದಿದ್ದಾರೆ. ಇವುಗಳಲ್ಲಿ ಅಪಾರವಾದ ವಿಚಾರಗಳನ್ನು ಹೂರಣದಂತೆ ತುಂಬಿದ್ದಾರೆ. ಜೀವನದ ರಹಸ್ಯಗಳನ್ನು ಮಾರ್ಮಿಕವಾಗಿ ನುಡಿದಿದ್ದಾರೆ. ಇಹಲೋಕದ ವ್ಯಾಪಾರವನ್ನು ಮಾತ್ರವಲ್ಲದೆ ಪರಲೋಕದ ಸದ್ಗತಿಯ ಮಾರ್ಗವನ್ನೂ ತೆರೆದಿದ್ದಾರೆ. ವಿಷ್ಣುವಿನ ಪಾರಮ್ಯಕ್ಕೆ ಅಗತ್ಯವಾದ ಸುಲಭೋಪಾಯಗಳನ್ನು ತಮ್ಮ ಸವಿಯಾದ ಕೀರ್ತನೆಗಳಲ್ಲಿ ಹಿತವಾಗಿ ಬೋಧಿಸಿದ್ದಾರೆ.

ಪುರಂದರ ದಾಸರ ಅಂಕಿತ 'ಪುರಂದರ ವಿಠಲ' ನೆಂದಿದೆ. ಶ್ರೀಹರಿಯ ಅವತಾರಗಳನ್ನೂ ಅದರ ಹಿರಿಮೆಯನ್ನೂ ಇವರ ಅನೇಕ ರಚನೆಗಳಲ್ಲಿ ಕಾಣಬಹುದು. ದಾಸರು ಕೊಂಡಾಡದ ಹರಿಯ ಅವತಾರಗಳಾವುವೂ ಇಲ್ಲವೆಂದರೆ ಸರಿಯಾಗಬಹುದು. ವಿಷ್ಣುವಿನ ಅವತಾರಗಳಲ್ಲಿ ನಾಲ್ಕನೆಯದಾಗಿ ವಿಶಿಷ್ಟನಾಗಿರುವ ನರಸಿಂಹಾವತಾರದ ಹೊಸತನದ ದೃಷ್ಟಿಯನ್ನು ಪುರಂದರದಾಸರ ಕೀರ್ತನೆಗಳಲ್ಲಿ ಗಮನಿಸಬಹುದು.

## ಹೊಸತನದ ದೃಷ್ಟಿ

ಪ್ರಹ್ಲಾದ ವರದನೆಂದು ಖ್ಯಾತಿವೆತ್ತ ನರಸಿಂಹಸ್ವಾಮಿಯು ಹಿರಣ್ಯಕಶ್ಯಪನ ಸುತನನ್ನು ಕಾಯ್ದ ಘಟನೆಯ ಹಿನ್ನೆಲೆಗೆ ದುಷ್ಟಶಿಕ್ಷಣ-ಶಿಷ್ಟರಕ್ಷಣಗಳ ಉದ್ದೇಶವಿರುವುದು ಸಾಮಾನ್ಯ ಸಂಗತಿ. ಆದರೆ ಈ ವಿಚಾರದಲ್ಲಿ ದಾಸರ ವಿವೇಚನೆ ಬೇರೆ ರೀತಿಯಾದದ್ದು. ತಮ್ಮ ಕೀರ್ತನೆಯ ಆರಂಭದಲ್ಲಿಯೇ 'ದಾನವನ ಕೊಂದದ್ದಲ್ಲ ಕಾಣಿರೋ ಗಾನವಿನೋದಿ ನಮ್ಮ ತೊರವೆಯ ನರಸಿಂಹ' - ಎಂಬುದಾಗಿ ಸ್ಪಷ್ಟಪಡಿಸುತ್ತಾರೆ. 'ಅಚ್ಚಪುರುಷನೆಂಬ ರತ್ನವಿದ್ದೊಡಲಲ್ಲಿ ಬಿಚ್ಚಿ ಬೆದಕಿ ನೋಡಿದರಿನ್ನೆಷ್ಟು ಇದ್ದಾವೊ' ಎಂಬ ಅನ್ವೇಷಕ ದೃಷ್ಟಿಯನ್ನು ಇಲ್ಲಿ ತುಂಬಿದ್ದಾರೆ. ಸಂಹಾರದ ಕ್ರಿಯೆಗೆ ಹೊಸತನದ ಮೆರುಗನ್ನು ಈ ಮೂಲಕವಾಗಿ ತೊಡಿಸಿದ್ದಾರೆ. ತನ್ನ ಕೊರಳಲ್ಲಿ ದಾನವನು ಕರುಳು ಮಾಲೆಯನ್ನು ಹಾಕಿಕೊಂಡ ಭಗವಂತನ ಕಾರ್ಯದಲ್ಲಿಯೂ ವಿನೂತನವಾದ ಭಾವವು ಕಂಡುಬರುತ್ತದೆ. ಈತನು ನೆಂಟತನವು ಬೆಳೆಯಬೇಕೆಂದು ಕರುಳನ್ನು ಕೊರಳೊಳು ಗಂಟು ಹಾಕಿಕೊಂಡಿರುವನಷ್ಟೆ ಎಂಬುದು ಇಲ್ಲಿನ ಅಭಿಪ್ರಾಯವಾಗಿದೆ. ದಾಸವರೇಣ್ಯರ ಗಹನವಾದ ವಿಚಾರಧಾರೆಯನ್ನು ವ್ಯಕ್ತಪಡಿಸುವಲ್ಲಿ ಯಶಸ್ವಿಯಾದ ನುಡಿಗಳಾಗಿ ಇವು ಹೊರಹೊಮ್ಮಿವೆ. ಅವರ ಚಿಂತನ ಮಂಥನಕ್ಕೆ ಇದೊಂದು ಉದಾಹರಣೆಯಾಗಿದೆ.

ಅರ್ಥವತ್ತಾದ ಈ ಕೃತಿಯಲ್ಲಿ ತೊರವೆಯ ನರಸಿಂಹನನ್ನು ಕುರಿತು ಹಾಡಿ ಹೊಗಳಲಾಗಿದೆ. ಹೊಸ ಅರ್ಥಛಾಯೆಗಳನ್ನು ಉಂಟುಮಾಡುವಂತಿರುವ ಇಲ್ಲಿನ ಒಂದು ಸೊಬಗು ಮನನೀಯವಾಗಿದೆ. ಭಗವಂತನ ಎಲ್ಲಾ ಕ್ರಿಯೆಗಳಿಗೆ ಕಾರಣವೊಂದು ಇದ್ದೇ ಇರುತ್ತದೆ. ಅದರಲ್ಲಿನ ತತ್ವವು ಗಹನವಾಗಿರುತ್ತದೆ. ಇದರ ಅರಿವನ್ನು ಮೂಡಿಸುವಂತಿರುವ ಇಲ್ಲಿನ ಕೀರ್ತನೆಯ ಭಾವಪ್ರಕಾಶನವು ಮನನೀಯವಾಗಿದೆ.

## ಕ್ಷೇತ್ರಮೂರ್ತಿಗಳು/ತೊರವೆ

ತೊರವೆಯ ನರಹರಿಯನ್ನು ಕುರಿತ ಮತ್ತೊಂದು ಕೃತಿಯೂ ಹೊಸದಾಗಿ ಕಂಡು ಬರುತ್ತದೆ. 'ಇದು ಏನಂಗ ಮೋಹನಾಂಗಾ ಮದನ ಜನಕ ತೊರವೆಯ ನರಸಿಂಹಾ' - ಎಂದು ಆರಂಭವಾಗುವ ಈ ಕೀರ್ತನೆಯಲ್ಲಿ ಅಲ್ಲಿನ ಮೂರ್ತಿಶಿಲ್ಪದ ಚಿತ್ರಣವು ಬಹು ಮನೋಹರವಾಗಿ ಮೂಡಿಬಂದಿರುತ್ತದೆ. ಈ ಸ್ವಾಮಿಯ ಬಾಯಿ ಸ್ವಲ್ಪ ಅಗಲವಾಗಿ ತೆರೆದಂತಿದೆ. ಇದನ್ನು ಕುರಿತು ಪ್ರಶ್ನಿಸುವ ಪರಿಯನ್ನು ಇಲ್ಲಿ ಗಮನಿಸಬೇಕು. 'ದೇವತೆಗಳು ಸ್ತೋತ್ರ ಮಾಡಿದಾಗಲೂ ಅವರಿಗೆ ಪ್ರತಿಮಾತು ಹೇಳಲು ತುಟಿ ಬಿಚ್ಚದವನು ನೀನು ಈಗ ಅದೆಲ್ಲವನ್ನು ಮರೆತು ಬಾಯನ್ನೇಕೆ ಅಗಲವಾಗಿ ತೆರೆದಿರುವೆ'ಯೆಂದು ಕೇಳುತ್ತಿದ್ದಾರೆ. ನರಸಿಂಹನು ಹಿರಣ್ಯಕಶ್ಯಪನನ್ನು ಸಂಹರಿಸಿದ ಬಳಿಕ ದೇವತೆಗಳೆಲ್ಲ ಒಟ್ಟಿಗೆ ಸೇರಿ ಸ್ವಾಮಿಯನ್ನು ಸ್ತುತಿಸುತ್ತಾರೆ. ಇದರಿಂದ ಎಂಥವನಾದರೂ ಶಾಂತನಾಗಿ, ಪ್ರೀತನಾಗ ಬೇಕಾಗಿರುತ್ತದೆ. ಬಾಯಿಬಿಟ್ಟು ಪ್ರತಿಸ್ಪಂದಿಸಬೇಕಾಗಿರುತ್ತದೆ. ಆದರೆ ಅಂತಹ ದಿವಿನಾದ ಸಂದರ್ಭದಲ್ಲಿಯೂ ಬಾಯಿಬಿಡದವನು ಈಗೇಕೆ ಬಾಯಿಬಿಟ್ಟಿರುವೆ? ಎಂಬ ಸಂಶಯ ವ್ಯಕ್ತಪಡಿಸುತ್ತಿದ್ದಾರೆ.

ನರಸಿಂಹ ಮೊದಲೇ ಸಾಲಂಕೃತನಾದವನಾಗಿದ್ದಾನೆ. ಶ್ರೇಷ್ಠವಾದ ಮುತ್ತು ಮಾಣಿಕ್ಯಗಳ ಹಾರ ಧರಿಸಿಯೇ ಕಂಭದಿಂದ ಹೊರಬಂದಿರುತ್ತಾನೆ. ಅವೆಲ್ಲ ಇದ್ದರೂ ಕರುಳ ಹಸಿಯ ಬಿಸಿರಕ್ತದಿಂದ ಕೂಡಿದ ಹಾರವನ್ನು ಧರಿಸಿರುವುದು ಸರಿಯೆ? ಶ್ರೀದೇವಿ-ಲಕ್ಷ್ಮಿಯು-ಸ್ವಾಮಿಯ ತೊಡೆಯ ಮೇಲೆ ಸದಾಕಾಲ ನೆಲೆಸಿದ್ದಾಳೆ, ಸ್ವಾಮಿಯ ತೊಡೆಯನ್ನು ನಿತ್ಯ ಅಲಂಕರಿಸಿ ಆಸೀನಳಾಗಿರುತ್ತಾಳೆ. ಅಂತಹ ತೊಡೆಯಮೇಲೆ ಶತ್ರುವನ್ನು ಮಲಗಿಸಿ ಕೊಂಡಿರುವುದಾದರೂ ಹೇಗೆ? ಇದು ಯಾವ ಭಂಗಿಯೋ ಮೋಹನಾಂಗ? ಎಂದು ಕೇಳಿರುವಲ್ಲಿ ಪುರಾಣ ಚರಿತೆಯೊಂದಿಗೆ ಪ್ರಾಚೀನ ನಂಬಿಕೆಯು ಸೇರಿಕೊಂಡು ಹೊಸತನದ ಹೊನಲನ್ನುಂಟು ಮಾಡಿದೆ.

## ಗರುಡಾದ್ರಿ

ಗರುಡಾದ್ರಿ ನರಸಿಂಹನ ಉಗ್ರವಾದ ರೂಪ- ಸನ್ನಿವೇಶಗಳನ್ನು ದಾಸರು ತಮ್ಮ ಮತ್ತೊಂದು ಕೃತಿಯಲ್ಲಿ ಹಿಡಿದಿಟ್ಟಿದ್ದಾರೆ. ಈ ರಚನೆಯು 'ಮಹದಾದಿದೇವ ನಮೋ' ಎಂದು ಆರಂಭವಾಗುತ್ತದೆ. ಇದರಲ್ಲಿ ಆತನ ನೈಜರೂಪದ ಆವಿಷ್ಕಾರವಿದೆ. ದಿಗಿಲುಪಡಿಸುವ ಸನ್ನಿವೇಶವೂ ಇದೆ. ಹಗಲಿನೊಡೆಯನಾದ ಮಾರ್ತಾಂಡನೂ, ತಾರೆಗಳ ಪತಿಯಾದ ಚಂದ್ರನೂ ಈತನ ರೂಪದಿಂದ ಕಂಗೆಟ್ಟವರಾಗಿದ್ದಾರೆ. ದೇವತೆಗಳು ತಮ್ಮ ಲೋಕಗಳನ್ನು ಬಿಟ್ಟು ಓಡಿಹೋಗಿದ್ದಾರೆ. ಭೂಮಿಯ ಮೇಲಿನ ಸಮಸ್ತ ತರು-ಗಿರಿಗಳೂ ಅಲ್ಲಾಡುವ ಹಾಗೆ, ಸಮುದ್ರಗಳು ಕುದಿದು ಉಕ್ಕಿ ಹರಿಯುವಂತೆ ಜ್ವಾಲಾನರಸಿಂಹನು ಉರಿಯನ್ನು ಉಗುಳುತ್ತ ಉದ್ಭವಿಸಿದ್ದಾನೆ. ಇಲ್ಲಿ ಕಂಡುಬಂದಿರುವ ವರ್ಣನಾವೈಖರಿಯಲ್ಲಿ ದಾಸರು

ಹೊಂದಿರುವ ಪ್ರಕೃತಿ ಚೇತನದ ಒಲವು ಕಂಡುಬಂದಿದೆ. ಪ್ರಾಕೃತಿಕ ವಿಪ್ಲವಗಳಿಗೆ ಉಂಟಾಗುವ ಪರಿಣಾಮಗಳ ಅದ್ಭುತವಾದ ಚಿತ್ರಣವು ಮೂಡಿ ಬಂದಿರುತ್ತದೆ.

ಈ ಕೀರ್ತನೆಯ ಮುಂದುವರೆದ ಸಾಲುಗಳಲ್ಲಿ ನರಸಿಂಹನು ನಿರ್ವಹಿಸಿದ ಸಂಹಾರಕ್ರಿಯೆಯನ್ನು ದಾಸರು ವಿವರಿಸಿದ್ದಾರೆ. 'ಸಿಡಿಲಂತೆ ಗರ್ಜಿಸುತ್ತ ಕುಡಿಯ ನಾಲಿಗೆ ಚಾಚಿ ಅಡಿಗಡಿಗೆ ಲಂಘಿಸುತ ಕಡುಕೋಪದಿಂದ ಮುಡಿಹಿಡಿದು, ರಕ್ಕಸನ ಕೆಡಹಿ, ನಖ ದಿಂದೊತ್ತಿ ಕಡು ಉದರ ಬಗೆದ ಕಡುಗಲಿ ನಾರಸಿಂಹ' ಎಂದಿರುವ ನುಡಿಗಳು ರಂಧ್ರಸ್ವಭಾವದ ಅವತಾರ ರೂಪಿಯ ದರ್ಶನಕ್ಕೆ ಬರೆದ ಮಾತುಗಳಂತಿವೆ. ಬ್ರಹ್ಮರುದ್ರಾದಿಗಳು, ಪುರಂದರ - ದೇವೇಂದ್ರನಾದಿಯಾಗಿ ಸಮಸ್ತ ದೇವತೆಗಳೆಲ್ಲರೂ ಅಂಬರದಿಂದ ಹೂಮಳೆಯನ್ನು ಕರೆದು ಈ ದಾರುಣ ಸನ್ನಿವೇಶವನ್ನು ಮಂಗಳಮಯಗೊಳಿಸುತ್ತಿದ್ದಾರೆ. ಸಕಲಜನರನ್ನು ಪೊರೆಯುವ ಪಾಲನಕ್ರಿಯೆಯಲ್ಲಿ ಭಗವಂತ ನಿರತನಾಗಲೆಂಬ ಆಶಯವಿಲ್ಲಿದೆ.

ಭಗವಂತನ ಯಾವುದೇ ಕಾರ್ಯವು ಕೇವಲ ವ್ಯಾವಹಾರಿಕವಲ್ಲ. ಅದು ದೈವಿಕ, ಪಾರಮಾರ್ಥಿಕಗಳ ಹಾದಿಯಲ್ಲಿ ಸಾಗಿರುತ್ತದೆಂಬುದು ಸುಸ್ಪಷ್ಟ. ಆತನು ಶರಣಾಗತ ವತ್ಸಲನೂ ಹೌದು. ಆತನ ಕರುಣೆಗಾಗಿ ಕೋಟ್ಯಂತರ ಜೀವಿಗಳ ಆಕ್ರಂದನವು ಮೊಳಗುತ್ತಿ ರುತ್ತದೆ. ತನ್ನಲ್ಲಿರುವ ದುರ್ಗುಣಗಳನ್ನು ಕ್ಷಯಮಾಡಿಕೊಂಡು ಉನ್ನತಿಯ ಹಾದಿಯಲ್ಲಿ ಸಾಗಬೇಕಾದ ಮಾನವನಿಗೆ ಭಗವಂತನ ಆಸರೆಯಲ್ಲದೆ ಬೇರೊಂದು ದಾರಿಯಿಲ್ಲ. ಪರಮಾತ್ಮನಲ್ಲಿನ ಪೊರೆಯುವ ಗುಣಕ್ಕಾಗಿ ಆತನ ವಿವಿಧ ರೂಪಗಳನ್ನು ಸ್ತುತಿಸಿ ಕೊಂಡಾಡುವ ದಾರಿಯಲ್ಲಿ ದಾಸವಾಣಿ ಕೈದೀವಿಗೆಯಂತಿದೆ. ಅದರಲ್ಲಿನ ತೇಜಸ್ಸು, ಶಕ್ತಿ ಗಳನ್ನು ಅರಿತುಕೊಂಡಲ್ಲಿ ಪರಮಪ್ರಯೋಜನವಾಗುತ್ತದೆ.

ಹರಿದಾಸರ ಕೀರ್ತನೆಗಳಿಗೆ ಹರಿಯ ದಶಾವತಾರಗಳು ಅತಿಹೆಚ್ಚಿನ ಕಾವ್ಯವಸ್ತುವನ್ನು ಒದಗಿಸಿವೆ. ಇದರ ಅಧ್ಯಯನವೇ ಪ್ರತ್ಯೇಕ ವಿಷಯವಾಗಬಹುದು. ದಶಾವತಾರಗಳು ನವರಸ ಚಿತ್ರಣಕ್ಕೆ ಬೇಕಾದ ವಸ್ತುವನ್ನು ಒದಗಿಸುತ್ತವೆಂಬ ಕಾರಣದಿಂದ ಇವುಗಳ ಮಿಗಿಲಾದ ವಿವರಗಳನ್ನು ನಾವು ದಾಸಸಾಹಿತ್ಯದಲ್ಲಿ ಕಾಣಲು ಸಾಧ್ಯವಿದೆ. ಪುರಂದರದಾಸರೂ ಈ ದಶಾವತಾರ ಕ್ಷೇತ್ರದಲ್ಲಿ ಸಾಕಷ್ಟು ವ್ಯವಸಾಯ ನಡೆಸಿದ್ದಾರೆ. ಅತ್ಯುತ್ತಮವಾದ ಫಸಲನ್ನು ನೀಡಿದ್ದಾರೆ. ನರಸಿಂಹಾವತಾರವಿಲ್ಲದ ದಶಾವತಾರವನ್ನು ಊಹಿಸಿಕೊಳ್ಳಲೂ ಆಗದಷ್ಟರಮಟ್ಟಿಗೆ ಅವರ ರಚನೆಗಳಲ್ಲಿ ಸ್ವಾಮಿಯ ರೂಪ, ಚಿಂತನೆ, ವಿಶ್ಲೇಷಣೆಗಳು ತುಂಬಿರುವುದು ಮಾತ್ರವಲ್ಲದೆ ವಿಕಾಸಗೊಂಡಿವೆ.

## ದೇವರಾಯನದುರ್ಗ

ದೇವರಾಯನದುರ್ಗವು ತುಮಕೂರು ಜಿಲ್ಲೆಗೆ ಸೇರಿರುವ ಪ್ರಸಿದ್ಧವಾದ ಗಿರಿಧಾಮ ವಾಗಿದೆ. ಇಲ್ಲಿನ ಪ್ರಾಕೃತಿಕ ಸಂಪತ್ತು ಕಣ್ಮನಗಳನ್ನು ಸೂರೆಗೊಳ್ಳುವಂಥದ್ದು. ಪುಣ್ಯಧಾಮ ವಾದ ಈ ಕ್ಷೇತ್ರಕ್ಕೆ ಅಪಾರ ಮನ್ನಣೆಯಿದೆ. ಪುರಂದರದಾಸರೂ ಸಹ ತಮ್ಮ ಕೀರ್ತನೆಯ

ಮೂಲಕವಾಗಿ ಇಲ್ಲಿರುವ ನರಸಿಂಹ ದೇವರನ್ನು ಸ್ತುತಿಸಿದ್ದಾರೆ. ಇಲ್ಲಿನ ಪ್ರಾಮುಖ್ಯತೆಯನ್ನು ಹಾಡಿಹೊಗಳಿದ್ದಾರೆ. ಕರಿಗಿರಿ ದುರ್ಗದ ನರಹರಿಯನ್ನು ಸ್ಮರಿಸುವ ಜನಕ್ಕೆ ಭವದ ಭಯದ ಪರಿತಾಪಗಳು ಯಾವುವೂ ಇರುವುದಿಲ್ಲ, ಇದು ದೂರ್ವಾಸಮುನಿಗಳು ತಪಸ್ಸು ಮಾಡಿದ, ನರಸಿಂಹನನ್ನು ಆರಾಧಿಸಿದ ಸ್ಥಳವಾಗಿತ್ತೆಂಬ ವಿಚಾರವನ್ನು ತಿಳಿಸುವಲ್ಲಿ ಪುರಾಣಚರಿತೆಗಳ ವಿಚಾರದಲ್ಲಿ ಪುರಂದರದಾಸರು ಹೊಂದಿದ್ದ ಅರಿವು ವ್ಯಕ್ತಗೊಂಡಿದೆ.

ದೇವರಾಯನದುರ್ಗದ ದೇವರನ್ನು ದಾಸರು ಕಂಡಿರುವ ರೀತಿಯಲ್ಲಿ ಸಹ ವಿಶಿಷ್ಟತೆಯು ಎದ್ದು ತೋರುವಂತಿದೆ. ಅತ್ತಿಯ ಮರದ ಕಾಯಿಗಳ ಹಾಗೆ ಈತನು ದಾಸವರೇಣ್ಯರ ಕಣ್ಣುಗಳಿಗೆ ಅರ್ಥಪೂರ್ಣವಾಗಿ ಕಂಡಿರುತ್ತಾನೆ. ಈ ಮರದ ಕಾಯಿಗಳು ಯಾವ ರೀತಿಯಲ್ಲಿ ಗೊಂಚಲು ಗೊಂಚಲಾಗಿ ಅಸಂಖ್ಯ ಬ್ರಹ್ಮಾಂಡಗಳು ಒಂದಕ್ಕೊಂದು ಹತ್ತಿರವಾಗಿ ಅವೆಲ್ಲವೂ ಒಂದೇ ಮೊತ್ತವಾಗಿರುವಂತೆ ಗೋಚರಿಸುವುವೋ ಅಂತಹ ದಿವಿನಾದ ಸ್ವರೂಪವು ಇವರ ದಿವ್ಯಚಕ್ಷುಗಳಿಗೆ ಕಾಣುತ್ತಿದೆ. ಜಗತ್ತಿನ ಅಮೇಯ ತತ್ತ್ವವನ್ನು ಈತನ ರೂಪದಲ್ಲಿ ಕಂಡಿರುವ ರೀತಿ ಮೆಚ್ಚತಕ್ಕದ್ದಾಗಿದೆ. ಅದಕ್ಕೆ ದಾಸರು ಕೊಟ್ಟಿರುವ ಉದಾಹರಣೆ ಸಹ ಬಾಹ್ಯಪ್ರಪಂಚದಲ್ಲಿ ನಮ್ಮೊಂದಿಗಿರುವ ಮರವೊಂದರಲ್ಲಿರುವ ಫಲವೇ ಆಗಿದೆ. ನಮ್ಮ ಅರಿವಿನಿಂದಲೇ ಅದರ ಆಚೆಗಿರುವ ಪರಿಧಿಯಲ್ಲಿ ಪರಮಾತ್ಮನ ದರ್ಶನವನ್ನು ಮಾಡಿಸುತ್ತಿರುವ ಕಲ್ಪನೆ ಅದ್ಭುತವಾದ್ದೆಂದು ಹೇಳಬಹುದು.

## ಅಹೋಬಿಲ

ಶ್ರೀವೈಷ್ಣವ ಕ್ಷೇತ್ರಗಳಲ್ಲಿ ಮಿಗಿಲಾದ ವೈಭವವನ್ನೂ, ಅನುಪಮವಾದ ಭಕ್ತಿಯನ್ನೂ ಹುಟ್ಟಿಸುವಂತಿರುವ ಕ್ಷೇತ್ರ ಅಹೋಬಿಲ. ನರಸಿಂಹಸಪ್ತಗಿರಿ ಕ್ಷೇತ್ರವೆಂಬ ಅಭಿದಾನವನ್ನೂ ಗಳಿಸಿರುವ ಇಲ್ಲಿನ ಪ್ರಕೃತಿ ಸಂಪತ್ತು ಅವಿಸ್ಮರಣೀಯ. ನವನಾರಸಿಂಹರ ದರ್ಶನಾಕಾಂಕ್ಷಿಗಳಾದ ಭಕ್ತರಿಗೆ ಒಂದೇ ಕಡೆ, ಸ್ವಲ್ಪ ಅಂತರದಲ್ಲಿ ಒಂದು ನಿರ್ದಿಷ್ಟವಾದ ಎಲ್ಲೆಯಲ್ಲಿ ಆ ಸೌಭಾಗ್ಯವನ್ನು ಕರುಣಿಸುವ ಸ್ಥಳವಿದು. ಅಹೋಬಿಲವನ್ನು ಆಳ್ವಾರರು, ಆಚಾರ್ಯರು, ಸಂತರೆಲ್ಲರೂ ಕೊಂಡಾಡಿದ್ದಾರೆ. ಪುರಂದರದಾಸರಿಗೆ ಅಹೋಬಿಲವು ಉಂಟು ಮಾಡಿದ ಅನುಭವ, ಆನಂದಗಳು ಅವರ ಕೀರ್ತನೆಯಲ್ಲಿ ವರ್ಣಿತವಾಗಿದೆ: ತೀರ್ಥಕ್ಷೇತ್ರದ ಸಂದರ್ಶನದ ಸಂತೃಪ್ತಿ ಮತ್ತು ಸಮಾಧಾನಗಳನ್ನಿಲ್ಲಿ ಕಾಣಬಹುದು.

ಶಂಖ,ಚಕ್ರ,ಗದಾಧರನಾದ ಸ್ವಾಮಿಯು ಅಹೋಬಿಲ ನರಸಿಂಹಮೂರ್ತಿ ರೂಪದಲ್ಲಿ ದಾಸರಿಗೆ ಕಂಡುಬರುತ್ತಿದ್ದಾನೆ. ಈತನಿಗೆ ಶರಣಾರ್ಥಿಗಳು. ಶರಣಾಗತರನ್ನು ಕಾಯುವವನಾದ ಈ ಸ್ವಾಮಿಯು ಪ್ರಹ್ಲಾದ ಶಿಶುವಿಗೆ ಪ್ರತ್ಯಕ್ಷನಾದವನೆಂಬ ವಿವರಣೆಯಿಲ್ಲಿದೆ. ಕಂಭದಿಂದ ಮೂಡಿಬಂದುದರ ಕಾರಣವಿದೆ. ಕಾಲಲ್ಲಿ ಖಳನು ಒದ್ದ ಕ್ರಿಯೆಯ ಚಿತ್ರಣವಿದೆ. ನರಸಿಂಹನ ರೂಪ ವಿವರಣೆಯೂ ಮಾತುಗಳಲ್ಲಿ ಮೂರ್ತಿಗೊಂಡಿದೆ. ಕೆಂಪಗೆ ಕಾಣುವ ಮುಖದಲ್ಲಿನ ಕಣ್ಣು, ಕಿವಿ, ಮೂಗುಗಳಲ್ಲಿ ಉಗ್ರತೆ ಎದ್ದು ಕಾಣುತ್ತದೆ. ಆತನ ಮೂಗಿನ ಶ್ವಾಸದ ಬಿಸಿಯು ತಲ್ಲಣಗೊಳಿಸುವಂತಿದೆ. ಮೇರುಪರ್ವತಕ್ಕೆ ಸಮಾನವಾದ ಆತನು 'ಹೃದಯ

ರಕುತವ ಘೀರುಘೀರನೆ ಹೀರುತ' ಬಂದ ರೀತಿ ಭಯಾನಕವಾದದ್ದು. ಬ್ರಹ್ಮರುದ್ರಾದಿಗಳು, ದೇವತೆಗಳು, ಪ್ರಹ್ಲಾದನ ಸ್ತೋತ್ರಗಳಿಂದ ಸ್ವಾಮಿಯು ಶಾಂತನಾದ ವಿವರ ಕೀರ್ತನೆಯ ಕಡೆಯಲ್ಲಿ ಬಂದಿದೆ. ದಾಸರ ಈ ಕೀರ್ತನೆಯಲ್ಲಿ ಸ್ತೋತ್ರಮಾಲಿಕೆಯ ವಿಧಾನವು ಕಂಡು ಬಂದಿದೆ.

## ಕಥನಕೀರ್ತನೆ

ಪುರಂದರದಾಸರು ರಚಿಸಿದ ಜನಪ್ರಿಯವಾದ ಕೀರ್ತನೆಯನ್ನು ಜನರು ತಮ್ಮ ಮಧುರವಾದ ಕಂಠಗಳಿಂದ ಹಾಡುತ್ತಿದ್ದಾರೆ. ನರಸಿಂಹನನ್ನು ತಮ್ಮ ಆರಾಧ್ಯದೇವರೆಂದು ಈ ಕೀರ್ತನೆಯ ಮೂಲಕ ಆರಾಧಿಸುತ್ತಿದ್ದಾರೆ. 'ನಂಬಿದ ನರರಿಗೆ ವರವನ್ನು ನೀಡುವ' ಆತನ ಜನಮಹಿಮೆಯು ಇದರಲ್ಲಿ ಪ್ರಕಟಗೊಂಡಿದೆ. 'ನಮಃ ಶಿವಾಯ' ಎಂಬ ಪಂಚಾಕ್ಷರಿ ಮಂತ್ರದ ಮಹಿಮೆಯ ಉಕ್ತಿಯಿದೆ. ಪ್ರಹ್ಲಾದನ ಪರೀಕ್ಷೆ ನಡೆದ ಸನ್ನಿವೇಶದ ವಿವರಣೆ ಇಲ್ಲಿದೆ. ತನ್ನ ತೊಡೆಯ ಮೇಲೆ ಕುಳಿತಿದ್ದ ಬಾಲಕನನ್ನು ಕೆಳಗಡೆಗೆ ದೂಡಿದ ದಾನವನ ಕೋಪದ ಕಾವನ್ನು ಇಲ್ಲಿ ಕಾಣುತ್ತೇವೆ.

ಕೀರ್ತನೆಯ ಮುಂದಿನ ನುಡಿಯಲ್ಲಿ ಹಿರಣ್ಯಕಶಿಪು ತನ್ನ ಮಗನಿಗೆ ನೀಡಿದ ಘೋರಶಿಕ್ಷೆಯ ಸ್ವರೂಪದ ವಿವರವಿದೆ. ಭಟರಿಂದ ಕೊಲ್ಲಿಸುವ, ಅಡವಿಯಲ್ಲಿ ದಾರುಣ ವಿಷವನ್ನು ಉಣಿಸುವ, ಸಮುದ್ರಕ್ಕೆ ತಳ್ಳಿ ಹಿರಿದಾದ ಬೆಟ್ಟಗಳನ್ನು ಅವನ ಮೇಲೆ ಪೇರಿಸುವ ಹಿಂಸೆಗಳನ್ನು ಪುರಾಣಗಳ ವಿವರಣೆಗಳಿಗೆ ಅನುಗುಣವಾಗಿ ನೀಡಲಾಗುವ ಸಂಗತಿಗಳನ್ನು ದಾಸರು ನಿರೂಪಿಸಿದ್ದಾರೆ. ಬೆಟ್ಟದ ಮೇಲಿಂದ ಉರುಳಿಸಿ, ಪಟ್ಟದಾನೆಯಿಂದ ತುಳಿಸಿ, ಹರಲ ಮನೆಯ ಮಾಡಿ ಅದರಲ್ಲಿಟ್ಟು ಸುಡಿಸಿ, ಹುಲಿಯ ಬೋನಿಗೆ ನೂಕುವಂತಹ ವಿಚಿತ್ರ ಹಿಂಸೆಗಳಿಂದ ಬಾಲಕನು ಪಾರಾದ ಬಗೆಯನ್ನು ಕೀರ್ತನೆಯ ನುಡಿಗಳಲ್ಲಿ ಕಾಣುತ್ತೇವೆ. ಇದೆಲ್ಲದರ ಪರಿಣಾಮವಾಗಿ ಹಿರಣ್ಯಕಶಿಪು ನಿರ್ಧರಿಸಿದ ಘೋರವಾದ ಕಾರ್ಯವೆಂದರೆ ತನ್ನ ಮಗನನ್ನು ತಾನೇ ಕೈಯಾರೇ ಕೊಲ್ಲುವ ನಿರ್ಧಾರವಾಗಿದೆ. ಮಗನಿಗೆ ನೀಡುವ ಮತ್ತೊಂದು ಅವಕಾಶವೆಂದರೆ, ಅವನು ಹೇಳುವ ದೇವರು ಇರುವ ಎಡೆಯನ್ನು ತೋರಿಸುವಂತೆ ಅವನಿಗೆ ಆಜ್ಞಾಪಿಸುವುದೇ ಆಗಿರುತ್ತದೆ.

ಪ್ರಹ್ಲಾದನು ಸಹಜವಾಗಿಯೇ ತಂದೆಗೆ ಉತ್ತರ ಕೊಡುತ್ತಾನೆ. ಭಗವಂತನಿಲ್ಲದ ಸ್ಥಳವಾವುದೂ ಇಲ್ಲವೆಂದೆನ್ನುತ್ತಾನೆ. ಕಂಭ ಕಂಭಗಳಲ್ಲೂ ಅವನಿದ್ದಾನೆಂದು ನುಡಿಯುತ್ತಾನೆ. ದೈತ್ಯ ರಾಜನಿಗೆ ಕಂಭವನ್ನು ಒಡೆದು ಪರೀಕ್ಷೆ ಮಾಡುವ ಮಾರ್ಗ ಮಾತ್ರವುಳಿದು ಸಭಾ ಭವನದ ಒಂದು ಕಂಭವನ್ನು ಮುಷ್ಟಿಯಿಂದ ಬಲವಾಗಿ ಗುದ್ದುತ್ತಾನೆ. ಅದರಿಂದಲೇ ಹೊರಹೊಮ್ಮಿದ ನರಹರಿಯು ಕಟಕಟಾ ಧ್ವನಿ ಮಾಡುತ್ತ ದುರುಳನನ್ನು ತನ್ನ ನಖಗಳಿಂದ ಸೀಳಿ ಕರುಳಮಾಲೆ ಧರಿಸುತ್ತಾನೆ. ಪ್ರಹ್ಲಾದನನ್ನು ಪ್ರೀತಿಯಿಂದ ಬರಸೆಳೆದು ಅಪ್ಪಿಕೊಳ್ಳುತ್ತಾನೆ. ಮುಂದಿನದು ದೇವತೆಗಳ ಸ್ತುತಿ, ನರಸಿಂಹನ ಕೋಪದ ಉಪಶಮನ.

ಪುರಂದರದಾಸರ ಈ ಕೀರ್ತನೆಯು ಅವರ ಕಥಾಶೈಲಿಗೆ ನಿದರ್ಶನವಾಗಿದೆ. ಕ್ರಮವಾಗಿ ಸಾಗುವ ಕಥೆಯ ಹಂದರ, ನಿರೂಪಣಾಸಾಮರ್ಥ್ಯಗಳು ಕೀರ್ತನೆಯ ಧಾಟಿಯಲ್ಲಿ ಸಾಗಿಬಂದಿದೆ. ಭಾಗವತ ಮತ್ತಿತರ ಸಾಹಿತ್ಯವನ್ನು ತಮ್ಮದನ್ನಾಗಿ ಮಾಡಿಕೊಂಡಿರುವ ಪ್ರಾವೀಣ್ಯತೆ ಇಲ್ಲಿ ಕಂಡುಬರುತ್ತದೆ. ಅವರ ಪ್ರಸಾದಿಕವಾಣಿಯ ಅರ್ಥವಿಶಿಷ್ಟತೆಯ ಸೊಗಸು ಇಲ್ಲಿ ಮೂಡಿಬಂದಿದೆ. ಇದು ದಾಸರ ನುಡಿಸ್ತಂಭದಿಂದ ಮೂಡಿದ ವಿಶಿಷ್ಟ ಕೀರ್ತನೆಯಾಗಿದೆ.

# ನರಸಿಂಹ ಸುಳಾದಿ

ಅಂಜುವೆ ನಾನೀ ಸಿಂಗದ ಮೊಗದವ
ಹುಂಕರಿಸುವಿ ಮರೆದೊಮ್ಮೊಮ್ಮೆ
ಅಂಜುವೆ ನಾನೀ ತೆರೆವಾಯ ತೆರೆಯುತ
ಗಹಗಹಿಸುವಿ ಮೆರೆದೊಮ್ಮೊಮ್ಮೆ
ಅಂಜುವೆ ನಾನೀ ಘುಡಿಘುಡಿಸುತ
ಕಿಡಿಗಳೆರಗಿಸುವಿ ಒಮ್ಮೊಮ್ಮೆ
ಅಂಜುವೆ ನಾನೀ ಕಿವಿಯನುಳುಪಿ ಮೇಲೆ
ಕವಿದೆರಗುವಿ ಮರೆದೊಮ್ಮೊಮ್ಮೆ
ಅಂಜುವೆ ನಾನೀ
ಸಿರಿ ಮುದ್ದುನರಸಿಂಹ
ಪುರಂದರವಿಠಲ ನೀ
ಉರಿಮೋರೆದೈವವೆಂದಂಜುವೆ

ಹಿರಣ್ಯಕಶಿಪುವಿನ ಉದರವ ಬಗೆದಬಳಿಕ
ಕರುಳುಮಾಲೆಯ ತೆಗೆದು
ಕೊರಳೊಳಿಟ್ಟಬಳಿಕ
ಉರಿಯನುಗುಳಲೇತಕೆ ಸಿರಿಯ
ನುಡಿಸಲೇತಕೆ
ಹರಬೊಮ್ಮಾದಿಗಳನು ಸರಕು
ಮಾಡಲೇತಕೆ
ಸಿರಿ ಮುದ್ದುನರಸಿಂಹ ಪುರಂದರವಿಠಲ
ಪ್ರಹ್ಲಾದದೇವ ಬಂದರೆ ಹಿಡಿದು
ಮುದ್ದಾಡಲೇತಕೆ

ಅಟ್ಟಹಾಸಕಬುಜಜಾಂಡ
ಕಟ್ಟಾಹ ಪ್ರತಿಧ್ವನಿಯಗೊಡುತಿರೆ
ಮೆಟ್ಟದಿಳೆ ತಲೆ ಕೆಳಗಾಗುತಲಿರೆ
ಬೆಟ್ಟಗಳುರುಳುರುಳಿ ಬೀಳುತಿರೆ
ಅಷ್ಟ ದಿಕ್ಕುಗಳ ಬೆಳಗುತಿರೆ
ಧಿಟ್ಟ ಮುದ್ದುನರಸಿಂಹ ಪುರಂದರ
ವಿಠಲ ನಿನಗೆದಿರಾರೀ ಜಗದೊಳು

ಉರಿ ಸಾಗರಗಳು ಸುರಿಯೆ ನಾಲಿಗೆಯಿಂದ
ಚರಾಚರಂಗಳು ಚಾರಿವರಿಯುತಲಿರೆ
ಬ್ರಹ್ಮಾಂಡ ಒಂದೆ ಸಿಡಿದು ಹೋಗುತ್ತಿತ್ತು
ಬ್ರಹ್ಮ ಪ್ರಳಯ ಒಂದಾಗಿ ಪೋಗುತಿತ್ತು
ಸಿರಿ ಮುದ್ದುನರಸಿಂಹ ಪುರಂದರವಿಠಲ
ಪ್ರಹ್ಲಾದ ದೇವನು ನಿಲಿಸದಿರೆ

ಹಿರಣ್ಯಕಶಿಪುವಿನುದರ ಬಗೆದುಗುರಲಿ
ಸರಸವಾಡಿದಿರ ನರಹರಿ ಸರವಾಡಿದಿರ
ನಾನಂಜುವೆ
ಸರಸವಾಡಿದಿರ ಗರುಡಾಚಲವಾಸ
ಸಿರಿಮುದ್ದು ನರಸಿಂಹ ಪುರಂದರವಿಠಲ
ಪುರಹರವಂದಿತ ಸರಸವಾಡದಿರಿ
ನಾನಂಜುವೆ
ಸಿರಮುದ್ದು ನರಸಿಂಹ ಪುರಂದರವಿಠಲ
ಶರಣ ಪ್ರಹ್ಲಾದ ಸಂರಕ್ಷಕ ಜಯಜಯ

# ಕನಕದಾಸರು

ಶ್ರೀಪಾದರಾಜರ ಶಿಷ್ಯರಾಗಿದ್ದ ವ್ಯಾಸರಾಯರು ದ್ವೈತವೇದಾಂತ ಸಾಮ್ರಾಜ್ಯದ ತಾರ್ಕಿಕರೂ, ದಾರ್ಶನಿಕರಲ್ಲಿ ಅಗ್ರಗಣ್ಯರೂ ಆಗಿದ್ದವರು. ವಿದ್ವತ್‌ಪೂರ್ಣವಾದ 'ನ್ಯಾಯಾಮೃತ'ವೆಂಬ ಕೃತಿರಚನೆಯ ಮೂಲಕ ವೇದಾಂತವಲಯದಲ್ಲಿ ಮಹಾ ಆಂದೋಲನವನ್ನುಂಟು ಮಾಡಿದವರು. ದೊಡ್ಡ ಅನುಭವಿಯಾಗಿದ್ದ ಇವರು ಶ್ರೇಷ್ಠ ಭಕ್ತರೂ ಆಗಿದ್ದರು. ಶ್ರೀಪಾದರಾಜರ ನಂತರ ದಾಸಪಂಥದ ಮುಂಚೂಣಿಯಲ್ಲಿದ್ದವರು. ಕರ್ನಾಟಕ ಸಂತ ಶ್ರೇಣಿಯ ಇಬ್ಬರು ಉತ್ತುಂಗ ಪ್ರತಿಭಾಶಾಲಿಗಳಾದ ಪುರಂದರ-ಕನಕದಾಸರನ್ನು ಕಂಡು ಹಿಡಿದವರೆಂಬ ಕಾರಣಕ್ಕಾಗಿಯೂ ವ್ಯಾಸರಾಯರ ಹೆಸರು ಜನಮನದಲ್ಲಿ ನೆಲೆಗೊಂಡಿದೆ.

ವಿಜಯನಗರ ಸಾಮ್ರಾಜ್ಯದ ಉಚ್ಛ್ರಾಯಕಾಲದಲ್ಲಿ-ಹದಿನಾರನೆ ಶತಮಾನದಲ್ಲಿ ಜೀವಿಸಿದ್ದ ವ್ಯಾಸರಾಯರ ಶಿಷ್ಯರಾದ ಕನಕದಾಸರು ಪಡೆದಿರುವ ಖ್ಯಾತಿಯು ಅದ್ವಿತೀಯವಾದದ್ದೆಂದು ಹೇಳಬಹುದು. ಕನಕದಾಸರು ಸಾಧಾರಣ ಕುಟುಂಬದಲ್ಲಿ ಕುರುಬ ಜನಾಂಗದಲ್ಲಿ ಜನಿಸಿದರು. ಹಾವೇರಿ ಜಿಲ್ಲೆಯ ಬಾಡ ಎಂಬುದು ಇವರು ಹುಟ್ಟಿದ ಗ್ರಾಮ. ಕಾಗಿನೆಲೆ ಕನಕ ಕ್ಷೇತ್ರ, ಇಲ್ಲಿ ಆದಿಕೇಶವನನ್ನು ಪ್ರತಿಷ್ಠೆಮಾಡಿ ಈ ಕ್ಷೇತ್ರಕ್ಕೆ ಚಾರಿತ್ರಿಕವಾದ ಮಹತ್ವವನ್ನು ದೊರಕಿಸಿಕೊಡುವಲ್ಲಿ ಕನಕದಾಸರು ಮಹತ್ವಪಾತ್ರವನ್ನು ವಹಿಸಿರುತ್ತಾರೆ.

## ಹಿನ್ನೆಲೆ

ಆರಂಭದಲ್ಲಿ ದಂಡನಾಯಕರಾಗಿದ್ದವರು ಯಾವುದೋ ಯುದ್ಧಪ್ರಸಂಗದಲ್ಲಿ ವಿರಕ್ತಿ ತಳೆದರು. ಪುರಂದರದಾಸರು ಸರ್ವವನ್ನೂ ತ್ಯಾಗಮಾಡಿದ ಬಳಿಕ ವಿಜಯನಗರಕ್ಕೆ ಹೋದಂತೆ ಕನಕದಾಸರೂ ಇಲ್ಲಿಗೆ ಆಗಮಿಸಿ ದಾಸರಾದರು. ಪುರಂದರದಾಸರ ಸಮಕಾಲೀನರಾಗಿದ್ದ ಕನಕದಾಸರು ಭಾಗವತ, ಧರ್ಮ ಮತ್ತು ಸಾಹಿತ್ಯಗಳನ್ನು ಅರಿತವರಾಗಿದ್ದರು. ಕೀರ್ತನೆ, ಸಾಹಿತ್ಯಕೃತಿಗಳ ರಚನೆಯ ಮೂಲಕ ತಮ್ಮ ಸೇವೆಯನ್ನು ಸಲ್ಲಿಸಿದರು. ಇವರು ತಾವು ಬೆಳೆದಂತೆಲ್ಲ ಉತ್ತಮವಾದ ಸಂಸ್ಕಾರಗಳಿಗೆ ಒಳಗಾದರು. ಭಾಗವತ ಪಂಥದಿಂದ ಆಕರ್ಷಿತರಾಗಿ ಅದರಲ್ಲಿ ತಮ್ಮ ಅಭಿಲಾಷೆಯನ್ನು ಹೊಂದಿದವರಾದರು. ಆದರೆ ಯಾವ ಒಂದು ಮತದ ಪಡಿಯಚ್ಚಿಗೂ ಸಿಕ್ಕದೆ ಎಲ್ಲ ಮತಗಳ ಸಾರವನ್ನು ಹೀರಿ ಸಮಚಿತ್ತರಾಗಿ ಬೆಳೆದರು. ಪರಮಸಹಿಷ್ಣುತೆಯನ್ನೂ ಮೆರೆದರು. ವಿಶೇಷವಾಗಿ ಕನಕದಾಸರು ರಾಮಾನುಜರ ಗ್ರಂಥಸಾಹಿತ್ಯದಿಂದ ಪ್ರಭಾವಿತರಾದ ಹಾಗೆ ಅವರ ಕೃತಿಗಳ ಆಧಾರದಿಂದ ಅಭಿಪ್ರಾಯ ಪಡಬಹುದಾಗಿದೆ.

ಕನಕದಾಸರ ಕೀರ್ತನೆಗಳಲ್ಲಿ ಅವರ ಪ್ರತಿಭೆಯನ್ನು ತೋರುವ ಕಾವ್ಯಕುಸುಮಗಳು ಸಾಕಷ್ಟಿವೆಯೆಂದು ಹೇಳಬಹುದು. ಅವರ ಭಕ್ತಿ-ನಿಷ್ಠೆಗಳು ಅಚಲವಾದದ್ದು. ಇವರ ಕೀರ್ತನೆಗಳಲ್ಲಿ ಸಾಮಾಜಿಕ ಕಳಕಳಿಯಿದೆ. ಲೋಕದ ಅಂಕುಡೊಂಕುಗಳನ್ನು ತಿದ್ದಿ ಸಸಿನೆಗೊಳಿ

ಸುವ ಪ್ರಯತ್ನವಿದೆ. ನೀತಿನಿರೂಪಣೆಯ ಚಿತ್ರಣವಿದೆ. ಜಾತಿಸಂಸ್ಕಾರಗಳನ್ನು ಮೀರಿದ ಮಿಗಿಲಾದ ಸಂಸ್ಕಾರವೊಂದಿದೆಯೆಂಬುದನ್ನು ತಮ್ಮ ರಚನೆಗಳ ಮೂಲಕ ದಾಸರು ತೋರ್ಪಡಿಸಿದ್ದಾರೆ. ಆದಿಕೇಶವನ ಅಂಕಿತದಿಂದ ಇವರ ಕೀರ್ತನೆಗಳು ಪ್ರಸಿದ್ಧಿ ಪಡೆದಿರುತ್ತವೆ. ವ್ಯಾಸರಾಯರು ಕನಕದಾಸರನ್ನು ತಮ್ಮ ಶಿಷ್ಯರಾಗಿ, ದಾಸಕೂಟದ ಸದಸ್ಯರಾಗಿ ಅಂಗೀಕರಿಸಿದ್ದು ಅವರ ಉಧಾರದೃಷ್ಟಿಯನ್ನು ಪ್ರತಿಬಿಂಬಿಸಿದಂತಾಗಿದೆ. ಇದರಿಂದ ದಾಸ ಪರಂಪರೆಗೂ ಸಹ ವಿಶಿಷ್ಟ ಗುಣಮೌಲ್ಯ ದೊರೆತಂತಾಗಿದೆ.

## ಜನಪ್ರಿಯ ಕೀರ್ತನೆ

'ಬಾಗಿಲನು ತೆರೆದು ಸೇವೆಯನು ಕೊಡು ಹರಿಯೆ' - ಎಂಬ ಕನಕದಾಸರ ಪ್ರಸಿದ್ಧವಾದ ಕೀರ್ತನೆಯಲ್ಲಿ ನರಸಿಂಹನ ಮಹಿಮೆ ಪ್ರಭಾವಗಳ ಹೊಳಪಿದೆ. ದಾಸರ ವಿವೇಚನೆಯಲ್ಲಿ ವೈಶಾಲ್ಯತೆಯನ್ನೂ ಉನ್ನತ ಸಂಸ್ಕಾರವನ್ನೂ ಕಾಣುತ್ತೇವೆ. ಈ ಕೃತಿಯ ಬಗೆಗಿನ ಐತಿಹಾಸಿಕ ನೆಲೆಗಟ್ಟು, ಹಿನ್ನೆಲೆ ತರ್ಕಕ್ಕೆ ಎಡೆಮಾಡಿದೆ. ವಿವೇಕಯುತವಾದ ವಿವಾದವನ್ನು ಹೊರಹಾಕಿದೆ. ಬಹುವಿಧವಾದ ಚಿಂತನೆಗಳಿಗೆ ಕಾರಣವಾದ ದಾಸರ ಈ ಕೀರ್ತನೆ ಜನಪ್ರಿಯವಾದದ್ದಾಗಿದೆ.

ಪ್ರಸ್ತುತ ಕೀರ್ತನೆಯ ಚರಣದಲ್ಲಿ ನರಸಿಂಹಾವತಾರಕ್ಕೆ ಕನಕದಾಸರು ನೀಡಿರುವ ಮಹತ್ವ ಪ್ರಕಟವಾಗಿದೆ. ಪ್ರಹ್ಲಾದನ ಕಡುಭಕ್ತಿಗೆ ನರಸಿಂಹನು ಘುಡುಘುಡಿಸಿ ಕಂಭದಿಂದೊಡೆದು ಮೂಡಿದ ಘಟನೆಯು ಕನಕದಾಸರ ಜೀವನಕ್ಕೂ ಸಂಬಂಧವಿದ್ದಿರಬಹುದಾದ ಎಳೆಯೊಂದನ್ನು ನಮ್ಮ ಮನಸ್ಸಿನ ಚಿತ್ತಾರದಲ್ಲಿ ಮೂಡಿಸುವಂತಿದೆ. ಭಕ್ತನ ಅಂತರಂಗದ ಕೂಗಿಗೆ ಸ್ಪಂದಿಸುವ ಭಗವಂತನ ವರಪ್ರದಗುಣವನ್ನು ದರ್ಶಿಸಬಹುದಾಗಿದೆ.

ಕನಕದಾಸರ ಜೀವನವೇ ಒಂದು ಮಹಾಕೃತಿಯೆಂಬಂತೆ ತೋರುವ ರೀತಿಯಲ್ಲಿ ಅವರ ಸಾಹಿತ್ಯ ಮತ್ತು ಜೀವನದ ಸಂಬಂಧಗಳು ಬೆಸೆದುಕೊಂಡಿವೆ. ಅವರ ಕೃತಿಗಳಲ್ಲಿ ಮಹೋನ್ನತಿಯ ಬೆಳಕನ್ನು ಕಾಣಲು ಸಾಧ್ಯವಿದೆ. ಕನಕದಾಸರ ಜೀವನಸಿದ್ಧಿಯಲ್ಲಿ ಹಿರಿದಾದ ಕನ್ನಡತನವನ್ನು ಕಾಣಬಹುದು. ಚಿರಂತನವಾದ ಸಂಸ್ಕೃತಿಯು ಇಲ್ಲಿ ಪ್ರಜ್ವಲಿಸಿದೆಯೆಂದು ಹೇಳಬಹುದು. ಇವರಿಂದ ದಾಸಸಾಹಿತ್ಯಕ್ಕೆ ತುಷ್ಟಿ-ಪುಷ್ಟಿಗಳು ದೊರೆತಿರುವುದಾದರೆ, ಕಾಗಿನೆಲೆಯಲ್ಲಿ ನರಸಿಂಹನ ನೆಲೆಯನ್ನು ಕಾಣಬಹುದು. ಕೀರ್ತನ ಪರಂಪರೆಯ ಪರಿವ್ರಾಜಕರಾಗಿ ಕನಕದಾಸರನ್ನು ಅರ್ಥೈಸಿಕೊಂಡಲ್ಲಿ ಅವರ ಮನಸ್ಸಿನ ಆಳ-ನಿರಾಳಗಳು ವ್ಯಕ್ತವಾಗುತ್ತವೆ.

ಮುಖ್ಯವಾಗಿ ಕನಕದಾಸರು ದೇವರನ್ನು ಸಖನಂತೆ ಸಲುಗೆಯಿಂದ ಕಂಡವರು. ಅವರ ಎಲ್ಲಾಕೃತಿಗಳಲ್ಲೂ ಈ ಭಾವ ಬಹುತೇಕ ವ್ಯಕ್ತವಾಗಿದೆ ಎಂದಾಗ ಅವರ ದಶಾವತಾರ ಕೃತಿಗಳಲ್ಲೂ ಅದರಲ್ಲೂ ನರಸಿಂಹ ಕೀರ್ತನೆಯಲ್ಲೂ ಇದೇ ಭಾವವನ್ನು ಕಾಣಬಹುದೆಂದರೆ ಅಚ್ಚರಿಯಿಲ್ಲ. ಆದರೆ ನರಸಿಂಹನನ್ನು ಕುರಿತು ಅವರು ಬರೆದದ್ದು ಬಹಳಲ್ಲ.

# ವಿಜಯದಾಸರು

ದಾಸಸಾಹಿತ್ಯದ ಮೊದಲನೆಯ ಘಟ್ಟವನ್ನು ಉಜ್ವಲವಾಗಿ ಬೆಳಗಿಸಿ ಮರೆಯಾದ ಪುರಂದರ-ಕನಕದಾಸರ ತರುವಾಯ ಬಂದ ದಾಸಶ್ರೇಷ್ಠರಲ್ಲಿ ವಿಜಯದಾಸರನ್ನು ಪ್ರಮುಖ ವಾಗಿ ಗುರುತಿಸಬಹುದಾಗಿದೆ. ಸುಮಾರು ಒಂದು ಶತಮಾನ ಕಾಲದ ಅಂತರದಲ್ಲಿ ಪ್ರಸನ್ನ ವೆಂಕಟದಾಸ, ಮಹಿಪತಿದಾಸ, ವಿಜಯದಾಸ, ಗೋಪಾಲದಾಸ ಮತ್ತು ಜಗನ್ನಾಥ ದಾಸರ ಪರಂಪರೆಯನ್ನು ನಾವು ದಾಸ ವಾಙ್ಮಯದಲ್ಲಿ ಗಮನಿಸಬಹುದಾಗಿದೆ. ಇವರಲ್ಲಿ ದಾಸಶ್ರೇಷ್ಠರಾದ ವಿಜಯದಾಸರು ಹೆಚ್ಚಿನ ಸಂಖ್ಯೆಯಲ್ಲಿ ಸುಳಾದಿಗಳನ್ನು, ಪದಗಳನ್ನು ರಚಿಸಿ ಕೀರ್ತಿವಂತರಾಗಿದ್ದಾರೆ. ಪುರಂದರ ದಾಸರ ೪ ಲಕ್ಷ ೭೫ ಸಾವಿರ ಕೃತಿಗಳಿಗೆ ತಾವು ೨೫ ಸಾವಿರ ಬರೆದು ಸೇರಿಸಿ ಒಟ್ಟು ಐದು ಲಕ್ಷ ಕೃತಿಗಳನ್ನಾಗಿಸಿದ್ದುದಾಗಿ ದಾಸರು ತಮ್ಮ ಒಂದು ಕೃತಿಯಲ್ಲಿ ಹೇಳಿದ್ದಾರೆ.

ಸುಳಾದಿಗಳನ್ನು ಬರೆದ ವಿಜಯದಾಸರು 'ರಾಗವೊಂದು ತಾಳ ಏಳು' ಎಂಬ ಪರಿಕ್ರಮವನ್ನಿಟ್ಟುಕೊಂಡಹಾಗೆ ತಿಳಿದು ಬರುತ್ತದೆ. ಸುಳಾದಿಯೆಂಬುದನ್ನು ಸೂಡಾಲಿ ಎಂಬ ಮಾತಿನಿಂದ ಬಿಡಿಸಬಹುದು. ಶುದ್ಧದ ಅಪಭ್ರಂಶವಾದ ಸೂಡ, ಸೂದ, ಧ್ರುವ ಎಂಬ ಎಂಟು ತಾಳಗಳಿಗೆ ಸೂಡಾದಿ ಎಂಬ ನಿರ್ಣಯವಿರುವಂತೆ ಪುಂಡರೀಕ ವಿಟ್ಠಲನ ಕೃತಿ 'ನರ್ತನ ನಿರ್ಣಯ'ದಲ್ಲಿರುವ ಹಾಗೆ ಗೊತ್ತಾಗುತ್ತದೆ. ಈ ನಿರ್ಣಯವು ಸೂಕ್ತವಾದ್ದೆಂದು ಪರಿಗ್ರಹಿಂಕೆಯಾಗಿದೆ. ಅಷ್ಟೆ ಅಲ್ಲದೆ ಇದು ಹೆಚ್ಚು ಸಮಂಜಸವಾಗಿರುತ್ತದೆ.

## <u>ಕನಕಗಿರಿ-ನರಸಿಂಹ</u>

ರಾಯಚೂರು (ಈಗ ಕೊಪ್ಪಳ) ಜಿಲ್ಲೆಯ ಕನಕಗಿರಿಯ ಬಗ್ಗೆ ವಿಜಯದಾಸರು ರಚಿಸಿರುವ ಸುಳಾದಿಯು ಪ್ರಸಿದ್ಧವಾಗಿದ್ದು, ಒಂದೇ ರಾಗ ಮತ್ತು ಬೇರೆ ಬೇರೆ ತಾಳ ಗಳಿರುವ ಇದರ ಮೊದಲ ಭಾಗದಲ್ಲಿ ನರಸಿಂಹನ ರುದ್ರ, ಭದ್ರ, ಭೀಷಣ ಸ್ವಭಾವವನ್ನು ಗಮನಿಸುತ್ತೇವೆ. ಆತನ ವಜ್ರದಂತಹ ನಖಗಳನ್ನೂ, ನಿಟಲ ನೇತ್ರಗಳನ್ನೂ, ರೂಪಪ್ರತಾಪ ಗಳನ್ನೂ ಇಲ್ಲಿ ದಾಸರು ಸ್ತುತಿಸುತ್ತಿದ್ದಾರೆ. ರುದ್ರಾಂತರ್ಯಾಮಿ ಎಂಬ ವಿಶೇಷಣವನ್ನು ಇಲ್ಲಿ ಈತನಿಗೆ ಬಳಸಲಾಗಿದೆ. ನರಸಿಂಹನು ತಮ್ಮ ಲೋಕದ ಉಪದ್ರವಗಳನ್ನು ಪರಿಹರಿಸ ಬೇಕೆಂದು ಪ್ರಾರ್ಥಿಸಿದ್ದಾರೆ. ಕನಕಾದ್ರೀಶನು ಅತ್ಯಂತ ಕರುಣಾಳುವಾಗಿರುವನೆಂದು ಹೇಳುತ್ತಾರೆ. 'ಪ್ರಹ್ಲಾದ ದೇವನ ಆಹ್ಲಾದ ನೋಡಯ್ಯ' ಎಂಬ ನುಡಿಗಳಲ್ಲಿ ನರಸಿಂಹನ ಆತ್ಯಶ್ಚರ್ಯಕರ ರೂಪದ ವಿವರಣೆಯಿದೆ. ಮೋಹನಕನಕಾದ್ರಿ ವಿಜಯವಿಠಲನೆಂಬ ಅಂತ್ಯದಿಂದ ಕೀರ್ತನೆ ಮುಕ್ತಾಯವಾಗುತ್ತದೆ.

'ರಂಗನ ನೋಡಿರೋ ಸಿರಿನರಸಿಂಹನ ಪಾಡಿರೊ, ಮಂಗಳ ಮೂರುತಿ ಡಿಂಗರಿಗರ ಹೃತ್ಸಂಗ ಕರುಣಾಂತರಂಗ' -ಎಂಬ ಪಲ್ಲವಿಯಿಂದ ಮೊದಲಾಗುವ ಕನಕಗಿರಿಯ ನರಸಿಂಹನ

ಸ್ತುತಿಯು ವಿಜಯದಾಸರ ಇನ್ನೊಂದು ಕೀರ್ತನೆಯ ಮೂಲಕ ಹರಿದುಬಂದಿದೆ. ತಂದೆಯೇ ತನ್ನ ಮಗನನ್ನು ಕೊಲ್ಲುವ ನಿರ್ಧಾರವನ್ನು ತೆಗೆದುಕೊಂಡ ಸಮಯದಲ್ಲಿ ಕಂಬದೊಳಗಿಂದ ಬಂದ ಮನುಜ-ಕೇಸರಿರೂಪ ಧರಿಸಿದ ಭಗವಂತನನ್ನು ಆ ಅಂತರ್ಯಾಮಿಯನ್ನು ಇಲ್ಲಿ ದಾಸರು ಹಾಡಿ ಹೊಗಳಿದ್ದಾರೆ.

ದನುಜನ ಉದರವನ್ನು ಬಗೆದು ಕರುಳಮಾಲೆಯನ್ನು ಕೊರಳೊಳಗಿಟ್ಟು ದೇವತೆಗಳು ಜಯಜಯವೆನ್ನುತಿರಲು ತನ್ನ ಪ್ರಭಾವವನ್ನು ಮೆರೆದ ಪ್ರಹ್ಲಾದವರದ ನರಸಿಂಹನನ್ನು ಧ್ಯಾನಿಸುತ್ತಿದ್ದಾರೆ. ಯಾರು ತಮ್ಮ ಮನಸ್ಸಿನಲ್ಲಿ ಏನನ್ನು ಬೇಡುವರೋ ಅವುಗಳನ್ನೆಲ್ಲ ಈತನು ನೀಡುತ್ತಾನೆ. ಈ ರೀತಿಯ ಗುಣಮಹಿಮನಾದ ಗುಣಾಂಬುಧಿತೇಜನಾದ ರಾಜಾಧಿ ರಾಜನಾದ ಜನುಮ ಜನುಮಗಳಲ್ಲೂ ಜನನಾದಿಗಳ ಮುಖ್ಯಕರ್ತಾರನೇ ಆದ ಆತನಿಗೆ ವಂದಿಸುತ್ತಾರೆ.

## ಸ್ಥಳ ಪುರಾಣ

ಕನಕಗಿರಿಯ ಬಗೆಗಿರುವ ಸ್ಥಳಪುರಾಣದ ಕಥೆಯು ಈ ರಚನೆಯಲ್ಲಿ ಅಡಕವಾಗಿದೆ. ಇಲ್ಲಿರುವ ಸ್ವಾಮಿಯು ಕನಕಮುನಿಗಳ ತಪಸ್ಸಿಗೆ ಮೆಚ್ಚಿ ಬಂದಿದ್ದಾನೆಂಬುದು ಪುರಾಣ ಕಥನ. ಮುನಿಗಳ ಕಠೋರವಾದ ನಿಷ್ಠೆಗೆ ಮೆಚ್ಚಿದ ಭಗವಂತನು ಕನಕವೃಷ್ಟಿಯನ್ನು ಸುರಿಸಿದನಂತೆ. ಇದಲ್ಲದೆ ಕನಕ ನೃಕೇಸರಿಯಾದ ಸ್ವಾಮಿಯು ಲಿಂಗಾಕೃತಿಯನ್ನು ಧಾರಣೆ ಮಾಡಿರುತ್ತಾನೆ.

ಇದು ನರಸಿಂಹರೂಪದ ವಿಚಾರದಲ್ಲಿ ಕುತೂಹಲ ಸಂಗತಿಯೂ ಆಗಿದೆ. ಕನಕಾಚಲ ಸ್ವಾಮಿಯು ಮನುಜರ ಪಾಪಕೃತ್ಯಗಳನ್ನು ಹೋಗಲಾಡಿಸಬೇಕೆಂದು ಪ್ರಾರ್ಥಿಸಿದ್ದಾರೆ. ಮುನಿಜನ ಸಮ್ಮತವಾದ ಶೃತಿ-ಉಕ್ತಿಗಳಲ್ಲಡ[illegible]ುವ ಆತನಿಗೆ ಮಣಿದು ಧ್ಯಾನವ ಮಾಡಲು ಮುಕ್ತಿಲಭ್ಯವಾಗುವುದೆಂದು ಹೇಳುತ್ತಾರೆ. ವಿಜಯದಾಸರ ಈ ಸುಳಾದಿಯು ಪ್ರಸಿದ್ಧ ವಾದದ್ದಾಗಿದೆ.

## ಇನ್ನೊಂದು ಸುಳಾದಿ

ವಿಜಯದಾಸರು ಕನಕಗಿರಿಯ ನರಸಿಂಹನ ವಿಶಿಷ್ಟ ರೂಪವಾದ ಲಿಂಗಾಕಾರವನ್ನು ಬೇರೊಂದು ಸುಳಾದಿಯಲ್ಲಿ ವಸ್ತುವನ್ನಾಗಿಸಿಕೊಂಡಿರುತ್ತಾರೆ. ಇದರೊಂದಿಗೆ ಮತ್ತೆರಡು ಸ್ಥಳಗಳ ನರಸಿಂಹ ರೂಪ ವಿಶ್ಲೇಷಣೆಯನ್ನೂ ಮಾಡಿದ್ದಾರೆ. ಇವುಗಳಲ್ಲಿ ಒಂದು ವಾರಣಾವತದಲ್ಲಿರುವ ಜಯಂತ ನರಸಿಂಹ, ಮತ್ತೊಂದು ಶರಧಿ ತೀರದಲಿ ಸಿಂಹಾ ಲಯವೆಂಬ ಪುರದಲ್ಲಿ ಶೋಭಿಸುತ್ತಿರುವ ನರಸಿಂಹ. ಈ ಎರಡನೆಯದು ಸಿಂಹಾಚಲ ಕ್ಷೇತ್ರವಾಗಿ ಪ್ರಸಿದ್ಧವಾಗಿದೆ.

ಜಯ ಜಯ ಜಯ - ಎಂದು ಆರಂಭಗೊಂಡು ರಚನೆಯಾಗಿರುವ ಮತ್ತೊಂದು ಸುಳಾದಿ ಇಲ್ಲಿ ಗಮನಾರ್ಹವಾಗಿದೆ. ನರಸಿಂಹನು ತನ್ನ ಬಾಯನ್ನು ಅಗಲವಾಗಿ ತೆರೆದಿರುವ ಬಗ್ಗೆ ಇಲ್ಲಿನ ವಿವರಣೆಯು ತುಂಬ ಕುತೂಹಲಕರವಾಗಿದೆ. 'ಜಗತೋತ್ಪಾದಕ ವಾಯು ವಯನಾದಿಗಳು ಸ್ತುತಿಸುತ್ತಿರಲು ತ್ರಯಲೋಕ ನಗುವಂತೆ ಬಾಯಿಬಿಟ್ಟನೇನೋ' - ಎಂದಿದ್ದಾರೆ. ಈತನ ನಯನಗಳು ವಿಶಾಲವಾಗಿದ್ದು, ದುಷ್ಟರನ್ನು ಓಡಿಸುವ ಲಯಕಾರಿಯಾದ ಜ್ವಾಲೆಯಂತೆ ಕಾಣುವುದೆಂದು ವರ್ಣಿಸಿದ್ದಾರೆ.

ನರಸಿಂಹನು ಕಂಬದಿಂದ ಪ್ರತ್ಯಕ್ಷನಾದ ಸಮಯದಲ್ಲಿ ಗಾಯನಕ್ಕೆ ಗತಿಕಾಣದೇ ದೇವತೆಗಳು ಮರೆಯಾದರಂತೆ. ಪಯೋನಿಧಿಸುತನಾದ ಈತನ ಲಕ್ಷಣೋಪೇತವಾದ ಚೆಲುವಿಕೆಯನ್ನು ನೋಡಿ ಹಿಗ್ಗಿ ಹಾರೈಸುವಂತಾದರೂ ಆತನ ಅಂಗವೈಲಕ್ಷಣಕ್ಕೆ ಪರಮ ಆಶ್ಚರ್ಯವನ್ನು ತಾಳುತ್ತಾರೆ. 'ಜಯದೇವಿನಾಥ, ದೀನನಾಥ, ದುರ್ಜಯ, ಜಯವಿಟ್ಠಲ ನರಸಿಂಹ ಎಂಬ ಆತನ ಲೀಲೆಗಳಿಗೆ ನಮೋ' ಎಂದು ಶರಣಾಗಿದ್ದಾರೆ.

ನರಸಿಂಹನ ಕೈಗಳಲ್ಲಿ ನಾನಾ ವಿಧವಾದ ಆಯುಧಗಳಿವೆ. ಇವನು ಶತ್ರುವನ್ನು ಸೀಳಲು ಇಷ್ಟೆಲ್ಲ ಆಯುಧಗಳಿದ್ದರೂ ತನ್ನ ನಖಗಳನ್ನೇ ಬಳಸಿದ ಬಗ್ಗೆ ಆಶ್ಚರ್ಯ ವ್ಯಕ್ತಪಡಿಸಿದ್ದಾರೆ. ಸರ್ವಕಾಲರೂಪನಾದ ಆತನ ಅಂಕೆಗೆ ಒಳಪಡದಿರುವುದು ಯಾವುದೂ ಇಲ್ಲವೆಂದು, ಇಂಥವನ ಅಂಕವನ್ನು ಲಕ್ಷ್ಮೀದೇವಿಯು ಅಲಂಕರಿಸಿರುವಳೆಂದು ಹೇಳುತ್ತಾ ಸಾಗುತ್ತಾರೆ. ದಾಸರ ರಚನೆಯ ವಸ್ತುವಿನಲ್ಲಿ ಹೊಸ ವಿಚಾರವೇನಿಲ್ಲವೆಂದು ಭಾಸವಾದರೂ ಹೇಳುವ ಶೈಲಿ ವಿನೂತನವಾದದ್ದಾಗಿದೆ.

## ಅದ್ಭುತ ಕೌತುಕ

ಪರಮಶಾಂತನಾದ ಭಗವಂತನು ಘೋರತರವಾದ ರೂಪವನ್ನು ಧರಿಸಿದ ಪರಿಯನ್ನು ಮುಂದಿನ ಭಾಗದಲ್ಲಿ ಹೋಲಿಕೆಗಳ ಮೂಲಕ ಬಣ್ಣಿಸುತ್ತಾರೆ. ಈತನ ಕೊರಳಲ್ಲಿ ನಾನಾ ಬಗೆಯ ಶ್ರೇಷ್ಠವಾದ ರತ್ನಹಾರಗಳಿದ್ದರೂ ಹಸಿಗರುಳನ್ನು ಧರಿಸಿದ ರೀತಿಯು ವಿಚಿತ್ರವಾಗಿದೆ. ಸಿರೋರುಹ ಮಿಗಿಲಾದ ಅವಯವಗಳು ಮೃದುತರವಾದದ್ದೇ ಆಗಿದ್ದರೂ ಕಠಿಣತರ ಸ್ವಭಾವವನ್ನು ವ್ಯಕ್ತಪಡಿಸಿದ ಕಾರಣವಾದರೂ ಏನಿರಬಹುದೆಂಬ ಸಂಶಯವು ವ್ಯಕ್ತಪಟ್ಟಿದೆ. ಅತ್ತ ನರನೂ ಅಲ್ಲದೆ, ಇತ್ತ ಮೃಗವೂ ಆಗದೆ ಜಗದ್ವಿಲಕ್ಷಣವಾದ ಶರೀರವನ್ನು ಧರಿಸಿ ಅದ್ಭುತವನ್ನು ಬೀರಿರುವ ವಿಧಾನಕ್ಕೆ ಕೌತುಕಗೊಂಡಿದ್ದಾರೆ.

ಪುರಂದರ ಸುರರಾದ್ಯರು ನಿತ್ಯ ನಿನ್ನ ಕಿಂಕರರಾಗಿರುವರೆಂದು ಹೇಳಿರುವ ದಾಸರು, ನಿನ್ನ ಸಹಜ ಸೌಮ್ಯಸ್ವಭಾವವನ್ನುಳಿದು ಘೋರತರ ರೂಪವನ್ನು ಧರಿಸಿದೆಯೆಂದು ನಿವೇದಿಸುತ್ತಾರೆ. ಇಲ್ಲಿ ಪುರಂದರದಾಸರ ಕೀರ್ತನೆಯ ಪ್ರಭಾವವನ್ನೂ ಕೂಡಾ ಗುರುತಿಸಿದರೆ ಅಚ್ಚರಿಯಲ್ಲ.

ದೈತ್ಯಸಂಹಾರವಾದ ನಂತರ ಉಗ್ರರೂಪತಳೆದ ನರಸಿಂಹನ ಕೋಪವನ್ನು ಶಾಂತಗೊಳಿಸಲು ಯಾರಿಂದಲೂ ಆಗಲಿಲ್ಲ. ತರಳ ಪ್ರಹ್ಲಾದನಿಗೆ ಸ್ವಾಮಿಯನ್ನು ಶಾಂತನಾಗುವಂತೆ ಬೇಡಿಕೊಳ್ಳಲು ಹೇಳಲಾಗುತ್ತದೆ. ಆತನ ಮುಂದೆ ಹೋಗಿನಿಂತ ಬಾಲಕನ ಶಿರದ ಮೇಲೆ ಭಗವಂತನು ತನ್ನ ಹಸ್ತವನ್ನೂರಿದ ನಂತರವೇ ಆತನ ಕೋಪವು ಉಪಸಂಹಾರವಾಗುತ್ತದೆ. ಈ ಸಂದರ್ಭದಲ್ಲಿ 'ಎಂತು ಪೇಳಲಿ ನೋಡಿ ತರಳ ಪ್ರಹ್ಲಾದ ಮುಂದೆ ನಿಲ್ಲಲು ಸೋತ ಮುಗುಳನಗಿಯೇನು' ಎಂಬ ದಾಸರ ವಿಸ್ಮಯಾತ್ಮಕವಾದ ಮಾತುಗಳಿವೆ. 'ತಂತುಗಾರನೆ ನಮ್ಮ ವಿಜಯ ವಿಟ್ಠಲ ಸ್ವತಂತ್ರ ಸರ್ವೋತ್ತಮ ನಿನ್ನ ಮರ್ಯಾದೆಯೆಂತೊ'- ಎಂದು ಹೇಳಿದ ದಾಸರು ಈ ಸಮಸ್ಯೆ ಪರಿಹಾರವಾದ ರೀತಿಯನ್ನು ತಮ್ಮ ನಯಪಿಂದ ಮಾತುಗಳಲ್ಲಾಡಿರುವುದು ಅರ್ಥ ಪೂರ್ಣವಾಗಿದೆ.

ವಿಜಯದಾಸರ ಶಬ್ದ ಚಮತ್ಕಾರಕ್ಕೊಂದು ಉದಾಹರಣೆ ಇಲ್ಲಿದೆ-

*ಕುಟಿಲ ನಿಟಿಲ ಲೋಚನ ಕರಾಳವಕ್ತ್ರ ಕರವಾಳಪಾಣ*

*ಕಠಿಣ ಕೋಪಾಟೋಪಾಗ್ನಿ ಛಟಛಟ ರಭಸ ಚಂಡಪ್ರತಾಪ*

*ಲಿಟಲಿಟ ಜಿಹ್ವಾಗ್ರ ಉಗ್ರಾಧಿಟ ಆಘಟ ನಿಚ್ಯಟವುತ್ಕೃಷ್ಟ*

*ಅಟ್ಟಹಾಸಾ ಮಿಟಿ ಮಿಟಿ ಮಿಟಿ ಮಿಟಿ ನೋಟಾ*

## ಅಹೋಬಿಲ ನರಸಿಂಹ

ಅಹೋಬಿಲ ನರಸಿಂಹನನ್ನು ಕುರಿತು ರಚಿಸಿರುವ ದಾಸರ ಸುಳಾದಿಯಲ್ಲಿ ಪದರಚನೆ. ವಿಷಯ ನಿರೂಪಣೆಗಳ ವೈವಿಧ್ಯತೆಯಿದೆ. ಇದೂ ಸಹಾ ಪ್ರಸಿದ್ಧವಾದ ಸುಳಾದಿಯೇ ಆಗಿದೆ. ಇದರಲ್ಲಿ ಅಹೋಬಿಲ ಕ್ಷೇತ್ರದ ತೀರ್ಥಗಳ ವಿವರಣೆಯನ್ನು ನೀಡುತ್ತಾರೆ. ಅಹೋಬಿಲ ನರಸಿಂಹನ ಬಗೆಗೆ ವಿಜಯದಾಸರಲ್ಲಿದ್ದ ಅಪಾರಶ್ರದ್ಧೆ ಮತ್ತು ನಿಷ್ಠೆಗಳು ಇದರ ಪರಿಶೀಲನೆಯಿಂದ ವ್ಯಕ್ತವಾಗುತ್ತದೆ. (ರಚನೆಯ ಕಡೆಯ ಭಾಗದಲ್ಲಿ ಮನುಜನಾದವನಿಗೆ ಪಾಪ ಓಡಿಸಿ ಪುಣ್ಯ ತಂದು ಕೊಡಬೇಕೆಂದು ಬೇಡಿದ್ದಾರೆ)

## ನರಸಿಂಹ ಸ್ತೋತ್ರ

*ಗುರು ಗುರು ಗಿರಿರಾಜಾತ್ ಕಂದರಾಂತರ್ಗತೇ ವಾ*

*ದಿನಮಣಿ ಮಣಿಶೃಂಗೇ ವಾಂತ ವಹ್ನಿ ಪ್ರದೀಪ್ತೇ*

*ದಧದತಿ ಕಟುದಂಷ್ಟ್ರೇ ಭೀಷಣೋಜ್ಜ್ವಹ್ವವಕ್ತ್ರೇ*

*ದಹದಹ ನರಸಿಂಹಾಸಹ್ಯವೀರ್ಯಾಹಿತಂ ಮೇ*

- ನಾರಾಯಣ ಪಂಡಿತಾಚಾರ್ಯ

# ಗೋಪಾಲದಾಸರು

ಗೋಪಾಲದಾಸರು ವಿಜಯದಾಸರ ಶಿಷ್ಯರಾಗಿದ್ದರು. ಹದಿನೆಂಟನೆಯ ಶತಮಾನದಲ್ಲಿ ಉದಯ ಹೊಂದಿದ ಅಗ್ರಗಣ್ಯರಾದ ದಾಸರಲ್ಲಿ ಇವರೂ ಒಬ್ಬರು. ಪುರಂದರ-ಕನಕದಾಸರ ನಂತರ ದಾಸಕೂಟವನ್ನು ಉಜ್ವಲವಾಗಿ ಬೆಳಗಿದ ಜಗನ್ನಾಥದಾಸರ ಮೇಲೆ ಗೋಪಾಲದಾಸರ ಪ್ರಭಾವವಿದ್ದುದಾಗಿ ತಿಳಿಯಬರುತ್ತದೆ. ಗೋಪಾಲದಾಸರ ಕಾಲವನ್ನು ಸುಮಾರು ಕ್ರಿ.ಶ. ೧೭೨೧ರಿಂದ ೧೭೬೨ರವರೆಗೆ ಎಂದು ಹೇಳಲಾಗುತ್ತಿದೆ.

'ಭಕ್ತಿಯಲಿ ಭಾಗಣ್ಣ' ಎಂಬ ಖ್ಯಾತಿಗೆ ಪಾತ್ರರಾಗಿದ್ದ ಇವರಿಗೆ ತಂದೆ-ತಾಯಿಗಳು ಇಟ್ಟ ಹೆಸರು ಭಾಗಣ್ಣ. ಇವರ ಜೀವನಚರಿತ್ರೆಯನ್ನು ತಿಳಿಯಲು ಇವರ ತಮ್ಮ ರಂಗ ದಾಸರ ಪದ್ಯಗಳು ಆಧಾರವಾಗಿವೆ. ರಾಯಚೂರು ಜಿಲ್ಲೆಯ ದೇವದುರ್ಗ ತಾಲೂಕಿನ ಮೊಸರಕಲ್ಲು ಇವರು ಹುಟ್ಟಿದ ಸ್ಥಳ. ಹಾರೀತ ಗೋತ್ರದವರಾದ ಇವರ ತಂದೆ-ತಾಯಿಗಳು ಮುರಾರಿರಾಯ ಮತ್ತು ವೆಂಕಮ್ಮ. ದಾಸಪ್ಪ, ಸೀನಪ್ಪ, ರಂಗಪ್ಪ ಎಂಬ ಮೂರು ಜನ ತಮ್ಮಂದಿರು. ಗೋಪಾಲದಾಸರ ರೀತಿಯಲ್ಲಿ ಇವರ ಮೂವರು ಸೋದರರೂ ದಾಸಕೂಟಕ್ಕೆ ಸೇರಿದವರಾಗಿದ್ದು ದಾಸ ಸಾಹಿತ್ಯಕ್ಕೆ ತಮ್ಮ ಅಮೂಲ್ಯವಾದ ಸೇವೆಯನ್ನು ಸಲ್ಲಿಸಿರುತ್ತಾರೆ.

## ಬಾಲ್ಯ-ಸಂಸ್ಕಾರ

ಭಾಗಣ್ಣನ ತಂದೆ ಬಾಲ್ಯದಲ್ಲಿಯೇ ತೀರಿಕೊಳ್ಳುತ್ತಾರೆ. ಸಂಸಾರದ ನಿರ್ವಹಣೆ ತಾಯಿ ವೆಂಕಮ್ಮನ ಮೇಲೆ ಬೀಳುತ್ತದೆ. ಸ್ವಂತ ಊರಿನಲ್ಲಿದ್ದ ಪಿತ್ರಾರ್ಜಿತವಾದ ಆಸ್ತಿ ಎಲ್ಲವೂ ತೀರಿದ ಬಳಿಕ ಜೀವನ ನಿರ್ವಹಣೆ ಕಷ್ಟವಾಗುತ್ತದೆ. ಮಕ್ಕಳನ್ನು ಕಟ್ಟಿಕೊಂಡು ವೆಂಕಮ್ಮನು ಗದ್ವಾಲ ಸಂಸ್ಥಾನಕ್ಕೆ ಸೇರಿದ ಸಂಕಾಪುರಕ್ಕೆ ಬರುತ್ತಾಳೆ. ಊರಿನ ಮಾರುತಿಯ ಮಂದಿರವು ಇವರ ವಾಸದ ನೆಲೆಯಾಗುತ್ತದೆ. ಗ್ರಾಮದ ಶಾಲೆಯಲ್ಲಿ ಉಪಾಧ್ಯಾಯರಾಗಿದ್ದವರು ಈಕೆಯ ಮಕ್ಕಳಿಗೆ ವಿದ್ಯಾಭ್ಯಾಸವನ್ನು ನೀಡಲು ಮುಂದಾಗುತ್ತಾರೆ. ಶಾನುಭೋಗರ ನೆರವಿನಿಂದ ಭಾಗಣ್ಣನಿಗೆ ಉಪನಯನವಾಗುತ್ತದೆ. ಅವನಿಗೆ ಗಾಯತ್ರಿ ಮಂತ್ರೋಪದೇಶವಾಗಿ ಅವನು ಮಹಿಮಾವಂತನಾಗುತ್ತಾನೆ.

ಭಾಗಣ್ಣನಿಗೆ ಗಾಯತ್ರಿ ಮಂತ್ರದ ಮಹಿಮೆ, ಪ್ರಭಾವಗಳು ಅರಿವಿಗೆ ಬರುತ್ತವೆ. ಆತನು ಅದನ್ನು ಸಿದ್ಧಿಸಿಕೊಳ್ಳುತ್ತಾನೆ. ಇದರಿಂದಾಗಿ ಅವನಲ್ಲಿ ಅಪೂರ್ವಶಕ್ತಿಯುಂಟಾಗುತ್ತದೆ. ಗದ್ವಾಲದ ರಾಜಾರಾಮ ಭೂಪಾಲನೆದುರಿಗೆ ಪಾಂಡಿತ್ಯ ಪ್ರದರ್ಶನವನ್ನು ಮಾಡಿದ ಭಾಗಣ್ಣನು ಅವರಿಂದ ಅಪೂರ್ವ ಮನ್ನಣೆಯನ್ನೂ ಹೊಂದುತ್ತಾನೆ. ಆಗಿನ ಸಮಾಜಕ್ಕೆ ಅನುಗುಣವಾದ ಸ್ಥಾನಮಾನಗಳನ್ನು ಹೊಂದಿದ ಈತನು ಪಂಡಿತವರ್ಗದಲ್ಲಿ ಪುರಸ್ಕೃತನಾಗಲು ಸಾಧ್ಯವಾಗುತ್ತದೆ.

ಭಾಗಣ್ಣನು ನಂತರ ತನ್ನ ತಾಯಿ ಮತ್ತು ತಮ್ಮಂದಿರೊಂದಿಗೆ ಉತ್ತನೂರಿನಲ್ಲಿ ನೆಲೆಸುತ್ತಾನೆ. ಈ ಸ್ಥಳವು ಆತನ ಅಭ್ಯುದಯದ ನೆಲೆಯಾಗುತ್ತದೆ. ಅವರ ಕುಟುಂಬದ ಸಮಸ್ಯೆಗಳು ಇಲ್ಲಿ ಸ್ವಲ್ಪಮಟ್ಟಿಗೆ ನಿವಾರಣೆಯಾಗುತ್ತವೆ. ಈತನ ತಾಯಿಯ ಭಿಕ್ಷಾವೃತ್ತಿಯೂ ಕೊನೆಗೊಳ್ಳುತ್ತದೆ. ತ್ರಿಕಾಲಜ್ಞಾನಿಯಾದ ಭಾಗಣ್ಣನು ಜ್ಯೋತಿಷ್ಯವನ್ನು ಹೇಳಲಾರಂಭಿಸುತ್ತಾನೆ ಇದರಿಂದ ಆದಾಯವು ವೃದ್ಧಿಯಾಗುತ್ತದೆ. ಇಲ್ಲಿನ ವೆಂಕಟೇಶ ದೇವಾಲಯದಲ್ಲಿ ಭಯ ಭಕ್ತಿಗಳಿಂದ ನರ್ತಿಸುತ್ತ ಈತನು ಕೀರ್ತನೆಗಳನ್ನು ರಚಿಸಿ ಪ್ರತಿಭಾವಂತನಾಗಿ ಬೆಳಗುತ್ತಾನೆ.

ಅನಂತರ ಆದವಾನಿಗೆ ಬಂದ ಭಾಗಣ್ಣನು ಅಲ್ಲಿನ ದಿವಾನರ ಬಳಿ ಕೆಲಕಾಲ ವಾಸ ಮಾಡಿ ದ್ರವ್ಯಸಂಪಾದನೆ ಮಾಡುತ್ತಾನೆ. ತಾನು ಗಳಿಸಿದ ಧನದಲ್ಲಿ ತೀರ್ಥಯಾತ್ರೆಯನ್ನು ಕೈಗೊಳ್ಳಬೇಕೆಂಬ ಅಭಿಲಾಷೆಯುಂಟಾಗುತ್ತದೆ. ಅನೇಕ ತೀರ್ಥಕ್ಷೇತ್ರಗಳಿಗೆ ಭೇಟಿಕೊಟ್ಟು ಕಾಶಿಗೆ ಬಂದಾಗ ಅಲ್ಲಿ ಅವನಿಗೆ ವಿಜಯದಾಸರ ದರ್ಶನವಾಗುತ್ತದೆ. ತನ್ನನ್ನು ಉದ್ಧಾರ ಮಾಡುವ ಗುರುಗಳು ಅವರೇ ಎಂದರಿವಾಗಿ ಅವರಿಂದ ದೀಕ್ಷೆ ಪಡೆಯುತ್ತಾನೆ. ಗುರುಗಳಿಂದ 'ಗೋಪಾಲವಿಠಲ'ನೆಂಬ ಅಂಕಿತ ದೊರೆಯುತ್ತದೆ. ಭಾಗಣ್ಣನು ಗೋಪಾಲದಾಸನಾಗುತ್ತಾನೆ. ಕೀರ್ತನೆ, ಸುಳಾದಿ, ಉಗಾಭೋಗಗಳನ್ನು ರಚಿಸಿ ದಾಸಸಾಹಿತ್ಯವನ್ನು ಶ್ರೀಮಂತಗೊಳಿಸಿದ್ದಾನೆ.

## ಕೀರ್ತನ ಸಾಹಿತ್ಯ

ಗೋಪಾಲದಾಸರ ಕೀರ್ತನೆ ಮತ್ತಿತರ ರಚನೆಗಳಲ್ಲಿ 'ನರಸಿಂಹ ಸ್ತುತಿ'ಯೂ ಒಂದಿರುತ್ತದೆ. ಇಂತಹ ಕೀರ್ತನೆಗೆ ಉದಾಹರಣೆ 'ಕಾಯೋ ಶ್ರೀನಾರಸಿಂಹ ಕಾಯೋ' ಎಂಬುದು. ಇದರಲ್ಲಿ ಒಟ್ಟು ಐದು ಚರಣಗಳಿವೆ. ಪ್ರತಿಯೊಂದು ನುಡಿಯ ಕಡೆಯಲ್ಲಿಯೂ 'ಶ್ರೀನಾರಸಿಂಹ' ಎಂಬ ಮುಕ್ತಾಯವಿರುತ್ತದೆ. ಪರಮೇಶ್ವರನೇ ಮೊದಲಾಗಿ ದೇವತೆಗಳ ಭಯ ನಿವಾರಕನಾದ ನರಸಿಂಹನು ಅಕಾಲಮೃತ್ಯುವನ್ನು ನಿವಾರಿಸುತ್ತಾನೆಂದು ಇಲ್ಲಿ ಹೇಳಲಾಗಿದೆ. ಈತನ ಭೀಷಣ ಭದ್ರರೂಪಗಳನ್ನು ಸ್ತುತಿಸಲಾಗಿದೆ. ಭಗವಂತನನ್ನು ತಾನು ಮರೆತ ಅಜ್ಞಾನದ ನಿವೇದನೆಯಿದೆ. ತನ್ನ ಸ್ವಾಮಿಯು ತನ್ನನ್ನು ಕೈಬಿಡಲಾರನೆಂಬ ಭರವಸೆಯಿದೆ. ಅಬಲರನ್ನು ಕಾಯುವುದೇ ಸ್ವಾಮಿಯ ಉದ್ದೇಶವಾಗಿ ಈತನು ಕ್ಷೀರ ಸಾಗರದಲ್ಲಿ ತನ್ನ ಮನೋರಮೆಯೊಂದಿಗೆ ಮನೋಹರನಾಗಿ ಕಂಗೊಳಿಸುತ್ತಿದ್ದಾನೆಂದು ದಾಸರು ಬಣ್ಣಿಸಿದ್ದಾರೆ.

ಅಹೋಬಿಲ ನಾರಸಿಂಹನ ಬಗ್ಗೆ ಸುಳಾದಿಯೊಂದನ್ನು ದಾಸರು ರಚಿಸಿರುತ್ತಾರೆ. ಏಳುಭಾಗಗಳಲ್ಲಿರುವ ಈ ರಚನೆಯಲ್ಲಿ ಆರು ತಾಳಗಳಿರುತ್ತವೆ. ಇದರ ಮೊದಲ ಭಾಗ ದಲ್ಲಿ ಅನಂತನ ನಾಮಸ್ಮರಣೆಯು ಅಡಕವಾಗಿದೆ. ಅಹೋಬಿಲೇಶನೂ ಆದ ಈತನು ಅನಂತ ಗುಣಗಳಿಂದ ತುಂಬಿದ್ದಾನೆ. ಈತನು ಅನಿಮಿತ್ತ ಬಾಂಧವನಾಗಿದ್ದಾನೆ. ತನ್ನನ್ನು ನಿರಂತರ ಸ್ತುತಿಸಿದ ಮಾರ್ಕಂಡೇಯ ಮುನಿಗೆ ಒಲಿದು ಬಂದಿರುತ್ತಾನೆ. ಇಲ್ಲಿ ಭವನಾಶಿನಿ ತೀರ್ಥದ ಮಹಿಮೆಯನ್ನು ಹೇಳಲಾಗಿದೆ. ದೋಷಾರೋಪಕ್ಕೆ ಗುರಿಯಾಗಿ ನಂತರ ಮುಕ್ತಿಯನ್ನು ಪಡೆದ ಚಂಡಶಾಸನನ ವೃತ್ತಾಂತದ ಸಂಕ್ಷಿಪ್ತ ವಿವರಣೆ ಇಲ್ಲಿ ಕಂಡುಬಂದಿರುತ್ತದೆ.

ಇಲ್ಲಿರುವ ಸಿರಿದೇವಿತೀರ್ಥ, ಗರುಡತೀರ್ಥ, ಉರಗತೀರ್ಥ, ವಾಯುತೀರ್ಥಗಳೆಂಬ ವಿವಿಧ ತೀರ್ಥಗಳಲ್ಲಿ ಭಗವಂತನು ನೆಲೆಸಿ ಭವರೋಗ ಕಳೆಯುತ್ತಿರುವನೆಂಬುದಾಗಿ ವಿವರಿಸಿದ್ದಾರೆ.

ನರಸಿಂಹನ ನಾನಾ ಬಗೆಯ ಅಲಂಕಾರಗಳು, ಆತನ ಆಯುಧ ವಿಶೇಷಗಳು ಆಭರಣಗಳಿಂದ ಕೂಡಿ ಮರುಳುಗೊಳಿಸುವ ರೂಪದ ವಿಶ್ಲೇಷಣೆಯಿದೆ. ಭಗವಂತನು ಸರ್ವಾಂತರ್ಯಾಮಿಯಾಗಿದ್ದಾನೆಂಬ ಸಂಗತಿಯನ್ನು ಸುಂದರವಾದ ಹೋಲಿಕೆಯ ಮೂಲಕವಾಗಿ ಸ್ಪಷ್ಟಗೊಳಿಸುತ್ತಾರೆ. 'ಬೆಲ್ಲದಚ್ಚು ಆವ ಕಡೆಯಿಂದಾದರೂ ತಿನ್ನಲು ಬೆಲ್ಲ ಒಂದು ಕಡೆಯಾಗಿ ಕಲ್ಲು ಒಂದು ಕಡ್ಯಾಗೋದೆ' ಎಂಬಲ್ಲಿ ಸರಳವಾದ ರೀತಿಯಲ್ಲಿ ಗಹನವಾದ ಸವಿಯಾದ ವಿಚಾರವನ್ನು ತಿಳಿಯಪಡಿಸುವ ಧಾಟಿಯಿದೆ. 'ಸುಲಭದಿ ತಿಳುವ ಸ್ಥಳದಲ್ಲಿ ಮಹಾತ್ಮೆ ಉಂಟು' ಎಂಬ ಸಾಲಿನ ಮೂಲಕವಾಗಿ ತೀರ್ಥಕ್ಷೇತ್ರಗಳ ಅಗತ್ಯತೆಯ ಅರಿವು ಮೂಡಿಸಿದ್ದಾರೆ. ನಮ್ಮಲ್ಲಿಯೇ ತುಂಬಿಕೊಂಡು ನಾವು ನೋಡುವ, ಬೇಡುವ, ಮಾಡುವ, ನೀಡುವ ಕಾರ್ಯಗಳ ಕಾರಣನೂ ಆಗಿರುವ ಆತನನ್ನು ಕಂಡ ದಾಸರ ಅಂತರ್‌ದೃಷ್ಟಿ ಅದ್ಭುತವಾದದ್ದೆಂದು ಹೇಳಬೇಕು.

ಅನಂತನೇ ಅಹೋಬಿಲದ ನರಸಿಂಹರೂಪವಾಗಿದ್ದಾನೆಂದು ಸುಳಾದಿಯ ಮೊದಲ ಭಾಗದಲ್ಲಿ ತಿಳಿಸಿದ ದಾಸರು ಕಡೆಯ ಭಾಗದಲ್ಲಿ ಆತನ ವಿಶಿಷ್ಟತೆಯನ್ನು ಹೇಳುತ್ತಿದ್ದಾರೆ. ಈತನ ಅನಂತಾನಂತರೂಪ ಮತ್ತು ಆಯುಧಗಳು ಬಲ್ಲವರಿಗೆ ಕಾಣುತ್ತಿವೆ. ಒಂದು ಕರ್ಮವನ್ನು ಮಾಡಿದವರಿಗೆ ಅನಂತಮಡಿ ಫಲಗಳನ್ನು ನರಸಿಂಹನು ನೀಡುತ್ತಾನೆಂಬ ಆತನ ಪ್ರಾಸಾದಿಕಗುಣವನ್ನು ದಾಸರುಕೊಂಡಾಡಿದ್ದಾರೆ. ಈ ಸ್ಥಳದಲ್ಲಿರುವ ಬಳ್ಳಿ ವೃಕ್ಷ ಪಕ್ಷಿಜಾತಿ ಸಂಕುಲ, ಫಲಪುಷ್ಪಗಳೆಲ್ಲವೂ ಭಗವಂತನಿಗೆ ಅರ್ಪಿತವಾಗುವುದಕ್ಕಾಗಿಯೇ ಇರುವುದಾಗಿದೆ. ಇದನ್ನರಿತು ಅಹೋಬಿಲ ಕ್ಷೇತ್ರದ ಯಾತ್ರೆಯನ್ನು ಮಾಡಿ ಇಲ್ಲಿರುವ ಭಗವಂತನನ್ನು ಆರಾಧಿಸುವ ಕಾರ್ಯದಲ್ಲಿ ನಿರತರಾಗುವವರನ್ನು ಅಂದು ಪ್ರಹ್ಲಾದನಿಗೊಲಿದ ದಯಾಮಯ ಸ್ವಾಮಿಯು ಅನುಗ್ರಹಿಸುವನೆಂಬ ಭಾವನೆಯು ಇಲ್ಲಿ ತುಂಬಿ ಬಂದಿರುತ್ತದೆ.

*ನರಸಿಂಹ ಪಾದ ಭಜನೆಯ ಮಾಡೋ*
*ನರಸಿಂಹನ ಪಾದ ಭಜನೆಯ ಮಾಡಲು*
*ದುರಿತ ಪರ್ವತವ ಖಂಡಿಸುವ ಕುಲಿಶದಂತೆ*
*ತರಳನ ಮೊರೆ ಕೇಳಿ ತವಕದಿಂದಲಿ ಬಂದು*
*ದುರುಳನ ಕೊರಳ ತನ್ನ ಕೊರಳಲಿ ಧರಿಸಿದ*
*ಸುರರೆಲ್ಲ ನಡುಗಲು ಸಿರಿದೇವಿ ಮೊರೆಯಿಡೆ*
*ವರ ಕಂಭದಿಂದ ಬಂದ ವೈಕುಂಠಪತಿ ನಮ್ಮ*
*ಹರಿವಿರಿಂಚಾದಿಗಳು ಕರವೆತ್ತಿ ಮುಗಿಯಲು*
*ಪರಮ ಶಾಂತನಾದ ಪುರಂದರವಿಠಲ*

*- ಪುರಂದರದಾಸರು*

# ಜಗನ್ನಾಥದಾಸರು

ಮಧ್ವಮತದ ತತ್ತ್ವಗಳನ್ನು ಕನ್ನಡದಲ್ಲಿ ಬೋಧಿಸಿದ ಹರಿದಾಸರಲ್ಲಿ ಆ ಗುರಿಯನ್ನು ಅತ್ಯಂತ ಸಮರ್ಥವಾಗಿ, ಶಕ್ತಿಯುತವಾಗಿ ಸಾಧಿಸಿದ ಕೀರ್ತಿಯು ಜಗನ್ನಾಥದಾಸರದ್ದಾಗಿದೆ. ಪುರಂದರ-ಕನಕದಾಸರ ತರುವಾಯ ದಾಸಕೂಟದ ಪರಂಪರೆಯನ್ನು ಉಜ್ವಲವಾಗಿ ಬೆಳಗಿಸಿದವರಲ್ಲಿ ಜಗನ್ನಾಥದಾಸರು ಹಿರಿಯರಾಗಿದ್ದಾರೆ. ಜಗನ್ನಾಥದಾಸರಲ್ಲಿ ಸಂಸ್ಕೃತ ಪಾಂಡಿತ್ಯದೊಂದಿಗೆ ಕನ್ನಡದ ಶ್ರದ್ಧೆ, ಸಂಪ್ರದಾಯನಿಷ್ಠೆಯೊಡನೆ ವಿಶಾಲ ಮನೋಭಾವ, ಅಪರೋಕ್ಷ ಜ್ಞಾನದ ಜೊತೆ ಭಕ್ತಿ ಬೆರೆತುಕೊಂಡಿದೆ.

ಜಗನ್ನಾಥದಾಸರು ರಾಯಚೂರು ಜಿಲ್ಲೆಗೆ ಸೇರಿದ ಮಾನ್ವಿಯಲ್ಲಿ ಹದಿನೆಂಟನೇ ಶತಮಾನದಲ್ಲಿ ಜನಿಸಿದರು. ಇವರ ಪಾಂಡಿತ್ಯ ಅಪಾರವಾದದ್ದು. ದಾಸರು ವಾಸಮಾಡುತ್ತಿದ್ದ ಮನೆಯನ್ನೇ ಇಂದು ದೇವಾಲಯವನ್ನಾಗಿ ಮಾಡಲಾಗಿದೆ. ದಾಸರು ಪೂಜಿಸುತ್ತಿದ್ದ ಸಾಲಿಗ್ರಾಮ, ತುಳಸಿಕಾಷ್ಠದಿಂದ ಮಾಡಿದ ಬೃಂದಾವನಗಳಿವೆ. ಸವಣೂರಿನ ಯತಿಗಳಾದ ಸತ್ಯಬೋಧರು ಇವರಿಗೆ ನೀಡಿದ ಒರಗುಮಣೆ ಮತ್ತು ಪಾದುಕೆಗಳನ್ನು ಈ ಗುಡಿಯಲ್ಲಿ ಸುರಕ್ಷಿತವಾಗಿಡಲಾಗಿದೆ. ಸವಣೂರು, ಕರ್ಜಗಿ, ಕೋಣನತಂಬಿಗಿ - ಈ ಊರುಗಳಲ್ಲಿ ದಾಸರು ಹೆಚ್ಚಾಗಿ ಓಡಾಡುತ್ತಿದ್ದರೆಂದು ತಿಳಿಯುತ್ತದೆ.

## ಶಾಸ್ತ್ರನಿಷ್ಠೆ

ಜಗನ್ನಾಥದಾಸರ ಕೀರ್ತನೆಗಳಲ್ಲಿ ಹರಿಗುರುಸ್ತುತಿ, ಆಧ್ಯಾತ್ಮಿಕ ಅನುಭವಗಳಿಗೆ ಮಿಗಿಲಾದ ಸ್ಥಾನವಿದೆ. ಇವುಗಳಲ್ಲಿ ದಾಸರ ವ್ಯಕ್ತಿತ್ವವೂ ತುಂಬಿಕೊಂಡಿದೆ. ಸಮರ್ಪಣಸಿದ್ಧಿಯ ಪ್ರತೀಕವಾದ ಜಗನ್ನಾಥದಾಸರ ಸಾಹಿತ್ಯ ಕೀರ್ತನೆಗಳಲ್ಲಿ ಭವ್ಯವಾದ ರೂಪಕಗಳು ವ್ಯಾಪಿಸಿಕೊಂಡು ಅವುಗಳನ್ನು ಸತ್ವಗೊಳಿಸಿವೆ. ಇವರು ಮತೀಯ ತತ್ತ್ವವನ್ನು ಸಮಗ್ರವಾಗಿ ತಿಳಿದುಕೊಂಡಿದ್ದರು. ಅದನ್ನು ವಿಶಾಲ ಹೃದಯದಿಂದ ಆಚರಣೆಗೆ ತಂದ ರಸಯೋಗಿಗಳಲ್ಲೊಬ್ಬರಾಗಿದ್ದರು. ಇವರಿಗೆ ನಮ್ಮ ಕನ್ನಡ ಸಂಸ್ಕೃತಿ ಚರಿತ್ರೆಯಲ್ಲಿ ಗಣನೀಯವಾದ ಸ್ಥಾನವಿದೆ.

ಹರಿಕಥಾಮೃತಸಾರವೆಂಬ ಉತ್ಕೃಷ್ಟ ಕೃತಿಯನ್ನು ರಚಿಸಿರುವ ಜಗನ್ನಾಥದಾಸರ ಸಾಹಿತ್ಯದ ಮತ್ತೊಂದು ಭಾಗವಾಗಿ ಅವರ ಕೀರ್ತನೆಗಳನ್ನು ಗಮನಿಸಬಹುದು. ಶ್ರೀಹರಿಯ ಭಕ್ತರೂ ಅನುಯಾಯಿಗಳೂ ಆದವರನ್ನು ಇವರ ಕೀರ್ತನೆಗಳು ಭಗವಂತನ ಪರಮನೆಲೆಗೆ ಕೊಂಡೊಯ್ಯುತ್ತವೆ. ಈ ವಿಶಿಷ್ಟವಾದ ರಚನೆಗಳಲ್ಲಿ ಶಾಸ್ತ್ರಾತ್ಮಕವಾದ ಅಭಿವ್ಯಕ್ತಿಗೊಂದು ಮಾರ್ಗವು ಲಭಿಸಿದೆ. ಕಾವ್ಯಾತ್ಮಕ ಧೋರಣೆಗಿಂತಲೂ ಶಾಸ್ತ್ರನಿಷ್ಠೆ, ವೈದಿಕತೆಗಳು ಹಿರಿಯ ಉಪಾಸನೆಗೆ ಹತ್ತಿರವಾಗಬಲ್ಲದೆಂಬ ಅಭಿಪ್ರಾಯ ದಾಸರಲ್ಲಿ ಇದ್ದಿರಬೇಕೆಂದು ಅಭಿಪ್ರಾಯ ಪಡಬಹುದಾಗಿದೆ. ಜಗನ್ನಾಥ ವಿಠಲ ಅಂಕಿತವನ್ನು ಇವರ ಕೀರ್ತನೆಗಳಲ್ಲಿ ಕಾಣಬಹುದು.

'ನಮೋ ನಮಸ್ತೆ ನರಸಿಂಹದೇವ' ಎಂದು ಆರಂಭಗೊಳ್ಳುವ ಕೀರ್ತನೆಯಲ್ಲಿ ಸ್ಮರಿಸುವವರನ್ನು ಕಾಯಬೇಕೆಂಬ ಬೇಡಿಕೆಯಿದೆ. ತ್ರಿಭುವನ ಸಂಜೀವನಾಗಿರುವ ಭಗವಂತನು 'ಉಮೆಯರಸನ ಹೃತ್ಕಮಲ ದ್ಯುಮಣಿ'ಯಾಗಿರುವನೆಂದು ದಾಸರು ವರ್ಣಿಸಿದ್ದಾರೆ. ವರದ ಕ್ಷೇತ್ರಜ್ಞನಾದ ಆತನು ದಾನವಕುಲಭೀಮನಾಗಿ, ಬ್ರಹ್ಮಾದಿಗಳ ಸ್ತೋಮ, ಸನ್ಮಂಗಳ ನಾಮನಾಗಿ ಚಿತ್ತಮಹಿಮ ನಕ್ಷತ್ರನೇಮಿಯಾಗಿರುವನೆಂದು ಇವರು ಭಾವಿಸಿದ್ದಾರೆ. ಈತನ ಅಪರಾಜಿತ, ಅನಘ, ಅನಿರ್ವಣ್ಣ ಲೋಕೈಕ ಶರಣ್ಯ ಗುಣಗಳನ್ನು ಹೊಗಳಿದ್ದಾರೆ. ಈ ರೀತಿಯ ಮಹಿಮೆಗಳನ್ನುಳ್ಳ ಭಗವಂತನು ದೈತ್ಯೇಂದ್ರನಾದ ಹಿರಣ್ಯಕಶಿಪುವಿನ ಸುತನನ್ನು ಸಲಹಿದ್ದಾನೆ. ತಪನಕೋಟಿ ಪ್ರಭಾವ ಶರೀರವನ್ನು ಹೊಂದಿದವನೆಂದೂ, ದುರಿತೌಘವಿದೂರ ನಾದವನೆಂದೂ, ವಿಪಿನಕುಠಾರನೆಂದೂ ಈತನನ್ನು ಬಣ್ಣಿಸಲಾಗಿದೆ.

ವೇದವೇದಾಂಗ ವೇದವೇದ್ಯಸಾಧ್ಯ ಅಸಾಧ್ಯ ಮುಕ್ತಾಮುಕ್ತರಾರಾಧ್ಯ ಅನುಪಮ ಅನವದ್ಯ ಮೋದಮಯನಾದ ಭಗವಂತನು ಪ್ರಹ್ಲಾದವರದ ನಿತ್ಯೋದಯನಾಗಿ ಮಂಗಳ ಮಯನಾಗಿದ್ದಾನೆ. ಈತನಲ್ಲಿ ತಮ್ಮ ಬಿನ್ನಪವನ್ನು ಸಲ್ಲಿಸಿ ತನ್ನ ಮಾತು ಕೇಳಬೇಕೆಂದೂ ತನಗೆ ಕಥಾಮೃತವನ್ನುಣಿಸಬೇಕೆಂದೂ ಯಾಚಿಸಿದ್ದಾರೆ. ದಾಸರ ಬೇಡಿಕೆಯಲ್ಲಿ ಸಹಜತೆಯ ಕಳಕಳಿ ತುಂಬಿಕೊಂಡಿದೆ.

## ತೊರವೆಯ ನರಸಿಂಹ

ಜಗನ್ನಾಥದಾಸರ ಕೀರ್ತನೆಗಳಲ್ಲಿ ತೊರವೆಯ ನರಸಿಂಹನನ್ನು ಕುರಿತ ಕೀರ್ತನೆಯು ಪ್ರಸಿದ್ಧವಾದದ್ದು. ಇಲ್ಲಿನ ನರಸಿಂಹನನ್ನು ನೀರ-ತರಂಗಿಣೀ ತೀರದವನೆಂದು ಹೇಳಿದ್ದಾರೆ. ಅವನ ಪಾದಪಂಕಜಗಳನ್ನು ಸೇವಿಸುವುದಕ್ಕಾಗಿ ಅವನಲ್ಲಿಗೆ ಸಾರಿದ್ದಾರೆ. ನಾರದರಿಂದ ಸ್ತೋತ್ರ ಮಾಡಿಸಿಕೊಂಡವನೆಂದೂ, ಶ್ರೀ ಭೂರಮಣನೆಂದೂ, ದುರಿತಾದಿ ಬ್ರಹ್ಮಸಮೀರ ಮುಖ್ಯರಿಂದ ಅರ್ಚಿಸಿಕೊಂಬ ಪಾದಗಳುಳ್ಳವನೆಂದೂ ಈತನನ್ನು ಸ್ತೋತ್ರ ಮಾಡಲಾಗಿದೆ. ಕ್ಷೀರಾಬ್ಧಿಶಯನನಾದ ಭಗವಂತನಲ್ಲಿ ಮೊರೆಯಿಟ್ಟು ತನ್ನನ್ನು ಸಲಹುವ ಭಾರ ಅವನದ್ದಾಗಿದೆ ಯೆಂದು ಆತನ ಮೇಲೆ ಜವಾಬ್ದಾರಿಯನ್ನು ಹೊರಿಸಿದ್ದಾರೆ. ಅವನು ವೇದವೇದ್ಯನಾಗಿ ಸಂಸಾರೋದದಿ ತಾರಕನಾಗಿರುವನೆಂದು ಹೇಳಿದ್ದಾರೆ. ಶ್ರೀದ ಶ್ರೀಶ ಅನಂತಕಾಮನಾಗಿರುವ ಅವನು ಬಾದರಾಯಣ ಭಕ್ತ ವರಪ್ರಹ್ಲಾದ ಪೋಷಕನಾಗಿದ್ದಾನೆ. ತನ್ನನ್ನು ಸರ್ವತಾ ವೀತಶೋಕ ಭವಭೀತಿಗಳಿಂದ ರಕ್ಷಿಸಿ ತನ್ನ ದೂತರಲ್ಲಿ ಒಬ್ಬನಾಗಿಸಬೇಕೆಂದು ಪ್ರಾರ್ಥಿಸುತ್ತಾರೆ.

'ಪಾಲಿಸೋ ನರಸಿಂಹ ಪಾಲಿಸೋ' -ಎಂಬ ಕೀರ್ತನೆಯು ಶ್ರೇಷ್ಠವಾದ ರಚನೆಗಳ ಸಾಲಿಗೆ ಸೇರುತ್ತದೆ. ಭಗವಂತನು ಕಮಲಾಲಯನಾಗಿದ್ದಾನೆಂದೂ ಆತನನ್ನು ತಾನು ನಂಬಿರುವೆನೆಂದು ಹೇಳುತ್ತಾರೆ. ಬಾಲೇಂದುಕೋಟಿಯ ಸೋಲಿಪ ನಖಗಳನ್ನು ಹೊಂದಿರುವ ಆತನು ಮೂರುಲೋಕದ ಅರಸನಾಗಿರುವನು. ಆತನು ಪ್ರಹ್ಲಾದನ ಮೊರೆಯನ್ನು ಆಲಿಸಿ ಅವನನ್ನು ರಕ್ಷಿಸಿದ್ದಾನೆ. ಭಕ್ತಪ್ರಿಯನೂ ಸುಖಸಂದೋಹ ಮೂರುತಿಯೂ ಆಗಿರುವ

ಇಂದಿರಾರಮಣನು ವೃಂದಾರಕೇಂದ್ರನ ದುರಿತಗಳನ್ನು ನಿವಾರಿಸಿದಂತೆ ತನ್ನ ಕಷ್ಟಗಳನ್ನು ದೂರ ಮಾಡಬೇಕೆಂದು ಬೇಡುತ್ತಾರೆ. ತನ್ನ ರೂಪವನ್ನು ತೋರಿ ಪಾಪಗಳನ್ನು ಪರಿ ಹರಿಸಬೇಕೆಂಬ ಯಾಚನೆಯ ಧ್ವನಿಯು ಈ ಕೀರ್ತನೆಯಲ್ಲಿದೆ.

ನರಕಂಠೀರವನೂ ಸಪ್ತದ್ವೀಪಾಧಿಪತಿಯೂ ಆದ ನರಸಿಂಹನು ತನ್ನನ್ನು ಕರುಣಾಮುದ್ದನ ಮಾಡಿ ಬಳಿಗೆ ಕರೆಸಿಕೊಳ್ಳಬೇಕೆಂದು ಮೊರೆಯಿಡುತ್ತಾರೆ. ಶರಣಪಾಲಕನೆಂಬ ಆತನ ಬಿರುದನ್ನು ಕೇಳಿ ತಾನು ಓಡೋಡಿ ಬಂದೆನೆಂದೂ ತನ್ನ ಪರಿಪರಿ ಅಪರಾಧಗಳನ್ನು ಮನ್ನಿಸಬೇಕೆಂದೂ, ಜನನ ಮರಣಗಳ ಉಪಾಧಿಯನ್ನು ಕತ್ತರಿಸಿ ಹಾಕಿ ಆತನ ಶರಣರ ಸಂಗದಲ್ಲಿರಿಸಿಕೊಳ್ಳಬೇಕೆಂದು ವಿನಂತಿಸಿಕೊಳ್ಳುತ್ತಾರೆ.

## ಅವತಾರ ಮಹಿಮೆ

ಕಂಸಾರಿಯಾದ ಕೃಷ್ಣನಂತೆ ಆತನನ್ನು ಕಂಡು ಹಂಸ-ಡಿಂಬಕರನ್ನು ಧ್ವಂಸಮಾಡಿದ ಅವನ ಕಾರ್ಯಗಳನ್ನು ಮೆಚ್ಚಿಕೊಳ್ಳುತ್ತಾರೆ. ಬ್ರಹ್ಮನಿಂದಲೂ ಇತರ ದೇವತೆಗಳಿಂದಲೂ ಸ್ತೋತ್ರ ಮಾಡಿಸಿಕೊಂಡ ಆತನ ಪರಿಪೂರ್ಣ ಗುಣ ಪಾರಮ್ಯವನ್ನು ಕೊಂಡಾಡುತ್ತಾರೆ. ಅವನು ಭಕ್ತವಾರಿಧಿಗೆ ಚಂದ್ರಸಮಾನನಾಗಿರುವನೆಂದು ಹೇಳುತ್ತಾರೆ. ಸ್ಮರನ ಕಾಂತಿಯನ್ನು ಸಹ ನಿಸ್ತೇಜಗೊಳಿಸುವ ಪ್ರಭಾಮಂಡಲವನ್ನು ಹೊಂದಿರುವವನೆಂದಿದ್ದಾರೆ. ಮತ್ಸ್ಯಾವತಾರದ ಮಹಿಮೆಯನ್ನು ಎತ್ತಿಹಿಡಿಯುತ್ತಾರೆ. ಸಮುದ್ರಮಂಥನ ಕಾಲದಲ್ಲಿ ಅಮೃತವನ್ನು ಹಂಚಿದ ಆತನ ಕಾರ್ಯಸಾಧನೆಯನ್ನು ಮನಸಾರೆ ಕೊಂಡಾಡುತ್ತಾರೆ. ಭೂಮಿಯನ್ನು ತೆಗೆದುಕೊಂಡು ಹೋದವನಿಂದ ಮರಳಿ ಧರೆಯನ್ನು ಯಥಾಸ್ಥಿತಿಗೆ ತಂದವನೆಂಬ ಆತನ ವರಾಹ ರೂಪದ ಚಿತ್ರವನ್ನು ನೀಡಿದ್ದಾರೆ. ಇಷ್ಟೆಲ್ಲ ಅವತಾರಗಳ ಹಿರಿಮೆಯನ್ನು ಬಣ್ಣಿಸಿ ಕಡೆಗೆ ಹಿರಣ್ಯಕಶ್ಯಪನ ಉದರವನ್ನು ಬಗೆದ ಅವನ ಧೀರ ಪರಾಕ್ರಮ ಗುಣಗಳನ್ನು ಶ್ಲಾಘಿಸುತ್ತಾರೆ.

ವಿಷ್ಣುವಿನ ಅವತಾರಗಳಾದ ವಾಮನ, ರಾಮ, ಕೃಷ್ಣ ಮೊದಲಾದವರ ಚಿತ್ರಣಗಳನ್ನು ನೀಡಿರುವ ಈ ಕೃತಿಯ ರಚನೆ ಉತ್ತಮವಾದದ್ದಾಗಿದೆ. ಈ ರೀತಿಯ ಅವತಾರಗಳ ಮಹಿಮೆಯಿಂದ ಪ್ರಸಿದ್ಧನಾದ ನರಸಿಂಹನು ತನ್ನ ಮಾನಸಪೂಜೆಯನ್ನು ಒಪ್ಪಿಸಿಕೊಳ್ಳಬೇಕೆಂದು ದೈನ್ಯದಿಂದ ಬೇಡುತ್ತಾರೆ. ಇವರ ಪಾಲಿಗೆ ಆತನು ಅನಾಥಬಂಧುವೂ ಆಗಿದ್ದಾನೆ. ಭವ ವ್ಯಾಧಿಗಳನ್ನು ಕಳೆಯುವವನಾಗಿದ್ದಾನೆ. ದೃಢವಾದ ಸಂಕಲ್ಪ ಅಚಲವಾದ ಶ್ರದ್ಧೆಗಳನ್ನು ದಾಸರ ಕೀರ್ತನೆಯಲ್ಲಿ ಮನಗಾಣಬಹುದಾಗಿರುತ್ತೆ. ಬ್ರಹ್ಮನ ಪಿತನಾದ ಆತನಲ್ಲಿ ಜಗನ್ನಾಥ ದಾಸರು ಸಲ್ಲಿಸುವ ಪ್ರಾರ್ಥನೆಯು ಮೆಚ್ಚತಕ್ಕದ್ದು.

## ರುದ್ರಭದ್ರ ಮೂರುತಿ

ಜಗನ್ನಾಥದಾಸರ ಇನ್ನೊಂದು ಕೃತಿ 'ರುದ್ರಾಂತರ್ಗತ ಪಾಹಿ ನರಸಿಂಹ' -ಎಂಬುದು ಇದರಲ್ಲಿಯೂ ಪ್ರಾರ್ಥನಾ ಗುಣವನ್ನು ಕಾಣಬಹುದು. ಈ ರಚನೆಯು ಅವರ ಇತರ

ಕೃತಿಗಳಿಗಿಂತ ತುಸು ಭಿನ್ನವೂ ವಿಚಾರಪೂರ್ಣವೂ ಆಗಿರುವುದನ್ನು ಪರಿಶೀಲನೆಯ ಮೂಲಕ ಮನವರಿಕೆ ಮಾಡಿಕೊಳ್ಳಬಹುದು. ಇದರಲ್ಲಿ 'ಭದ್ರಮೂರುತಿ ನಿರ್ಗತಾಂಹ್ವ ಹೃದ್ರೋಗ ಕಳೆದು ಜ್ಞಾನಾರ್ದ್ರಸ್ವಾಂತನ' ಮಾಡಬೇಕೆಂಬ ಬೇಡಿಕೆಯಿದೆ. ತನ್ನ ಉಪದ್ರವಗಳನ್ನು ದೂರ ಮಾಡಿ ಅನರ್ಥ್ಯ ಸಮುದ್ರವನ್ನು ದಾಟಿಸಬೇಕೆಂದು ಅವನಲ್ಲಿ ಕೇಳಿಕೊಳ್ಳುತ್ತಾರೆ.

'ಈಶನಿಗೆ ತಾನೇಸೇಸು ಜನ್ಮಗಳ ದಾಸ'ನೆಂಬುದು ತಿಳಿದಿದೆ. ಆತನು ವಾಸವಾನುಜ ವನಧಿಶಯನನೂ ಆಗಿದ್ದಾನೆ. 'ಮಹೇಶ ನಂದಿತನೂ ಆಗಿರುವ ಕರುಣಾ ಸಮುದ್ರನಾದವನೂ ಕರಾಳವದನನಾದವನು ತನ್ನನ್ನು ಸಲಹಬೇಕಲ್ಲದೆ ಇನ್ನಿತರರನ್ನು ತಾನು ಕಾಣೆನು' ಎಂದಿದ್ದಾರೆ. ಸ್ಥಿರವಾದ ನಂಬಿಕೆ ಅಚಲವಾದ ನಿಷ್ಠೆಗೊಂದು ನಿದರ್ಶನವಿಲ್ಲಿದೆ.

ಹೇಮಕಶ್ಯಪ ಅರ್ಥಾತ್ ಹಿರಣ್ಯಕಶಿಪು ತನ್ನ ಸುತನ ಬಾಧಿಸುತ್ತಾನೆ. ಅನಾಥನಾದ ಅವನನ್ನು ವ್ಯೋಮಪರ್ವತಾಂಬುದಿಧಾಮದೊಳಗಿಂದ ಹೊರತಂದ ಶ್ರೀಮನೋಹರ ಸಾರ್ವಭೌಮನಾದ ನರಸಿಂಹನನ್ನು ಕೊಂಡಾಡುತ್ತಾರೆ. ಕುರುಭೂಪಾಲನ ಸಭೆಯೊಳಗೆ ದ್ರೌಪದಿಯನ್ನು ಕಾಪಾಡಿದ ಆತನ ಅನಾಥರಕ್ಷಕ ಗುಣವನ್ನು ಇಲ್ಲಿ ನಿರೂಪಿಸಿದ್ದಾರೆ. ವೇದಗಮ್ಯ ವೇದವ್ಯಾಸ, ಕಲ್ಕಿ ಮುಂತಾದ ಆತನ ಇನ್ನಿತರ ಅವತಾರಗಳ ವಿಚಾರವನ್ನು ಪ್ರಸ್ತಾಪಿಸುತ್ತಾರೆ. ಮಹಿದಾಸ ಶ್ರೀಶ ಶ್ರೀದ ಅನ್ನದ ವಿಶ್ವಧನ್ವಂತ್ರಿಯೆಂಬ ಆತನ ರೂಪಗಳ ವಿವರಣೆ ನೀಡುತ್ತಾರೆ. ಭಗವಂತನು ತನ್ನವರ ವಿಷಾದರೋಗಗಳ ನಿವಾರಕನೆಂಬ ಉದಾತ್ತ ಕಲ್ಪನೆಯಿಂದ ಕೀರ್ತನೆಯು ಮುಕ್ತಾಯವಾಗುತ್ತದೆ.

## ಒಟ್ಟು ನೋಟ

ಆಧ್ಯಾತ್ಮಿಕ ಅನುಭವವು ಜಗನ್ನಾಥದಾಸರಲ್ಲಿ ಗಟ್ಟಿಗೊಂಡಿರುವುದನ್ನು ಅವರ ಕೀರ್ತನೆಗಳ ಆಧಾರದ ಮೇಲೆ ಮನದಟ್ಟು ಮಾಡಿಕೊಳ್ಳಬಹುದಾಗಿದೆ. ಅವರ ಸಮರ್ಪಣಾ ಭಾವವು ತುಂಬ ಅರ್ಥಗರ್ಭಿತವಾದ ರೀತಿಯಲ್ಲಿ ಹೊರಹೊಮ್ಮಿರುತ್ತದೆ. ಅನುಭವ ತುಂಬಿ ಹೇಳಿರುವ ಇವರ ಕೀರ್ತನೆಗಳು ಭಾಗವತ ಸಾಹಿತ್ಯದಲ್ಲಿ ಅಮೂಲ್ಯವಾದದ್ದಾಗಿವೆ. ಕೀರ್ತನೆಗಳು ಅವರ ಮಹಾವ್ಯಕ್ತಿತ್ವದ ಮತ್ತು ಸಮರ್ಪಣಸಿದ್ಧಿಯ ಪ್ರತೀಕವಾದ ಭವ್ಯರೂಪಕಗಳಾಗಿರುವುದನ್ನು ಅರಿತುಕೊಳ್ಳಬಹುದಾಗಿದೆ. ಸಾಗರದಲ್ಲಿನ ನಿಕ್ಷೇಪದಂತೆ ನರಸಿಂಹನ ಪರವಾದ ಕೆಲವು ರಚನೆಗಳನ್ನು ಗಮನಿಸುವುದಾದಲ್ಲಿ ದಾಸರಿಗೆ ಆತನ ಬಗೆಗಿದ್ದ ಶ್ರದ್ಧಾಭಕ್ತಿಗಳು ಗೋಚರವಾಗುತ್ತವೆ.

*ನೀರತರಂಗಿಣೀ ತೀರ ನಾರಸಿಂಹ*
*ಶಾರದನಾತವಪಾದಪಂಕಜ*
*ತೋರು ಮನದಲಿ ತವಕದಿ*

(ತೊರವೆಯ ನರಸಿಂಹನನ್ನು ಕುರಿತು ಜಗನ್ನಾಥದಾಸರು)



## ಅಧ್ಯಾಯ - 7

# ಕನ್ನಡ ಭಾಗವತ

## ನಿತ್ಯಾತ್ಮ ಶುಕಯೋಗಿ

ಭಾಗವತ ಪುರಾಣವನ್ನು ಮೊತ್ತಮೊದಲಿಗೆ ಕನ್ನಡ ಭಾಷೆಯಲ್ಲಿ ಬರೆದ ಕವಿ ನಿತ್ಯಾತ್ಮ ಶುಕಯೋಗಿ. ಇದು ಈತನ ಬಿರುದಾಗಿತ್ತೆ ಹೊರತು ನಿಜವಾದ ಹೆಸರಲ್ಲ. ಈತನ ನಿಜನಾಮಧೇಯವೇನಿತ್ತೆಂಬುದನ್ನು ಖಚಿತವಾಗಿ ತಿಳಿಯಲಾಗುತ್ತಿಲ್ಲ. ಈತನ ಕಾವ್ಯನಾಮವಾಗಿದ್ದ 'ನಿತ್ಯಾತ್ಮ' ಎಂಬ ಪ್ರಯೋಗವನ್ನು ಕಾವ್ಯದ ಪ್ರತಿಸಂಧಿಯ ಕೊನೆಯಲ್ಲೂ ಕಾಣಬಹುದಾಗಿದೆ.

'ನಿತ್ಯಾತ್ಮ'ನೆಂಬ ಅಂಕಿತವನ್ನು ಹೊಂದಿದ್ದ ಕವಿಯು ತನ್ನ ಕಾವ್ಯನಾಮದ ಜೊತೆ ಜೊತೆಗೆ 'ಗೋಪಿನಾಥ', 'ನಾರಾಯಣ', 'ಪದ್ಮಸದೃಶ' ಎಂಬ ಇನ್ನಿತರ ಹೆಸರುಗಳನ್ನು ಸೇರಿಸಿಕೊಂಡು ಬಳಸಿಕೊಂಡು ಬಂದಿದ್ದಾನೆ. ಇದನ್ನು ಕಾವ್ಯಾಭ್ಯಾಸದಲ್ಲಿ ಗಮನಿಸಬಹುದು. ಶುಕ ಮಹರ್ಷಿಯು ಪರೀಕ್ಷಿತ ರಾಜನಿಗೆ ಉಪದೇಶಿಸಿದ ಭಾಗವತವನ್ನು ಕನ್ನಡದಲ್ಲಿ ಮೊದಲು ರಚಿಸಿರುವ ಈತನು ಭಕ್ತಕವಿಯಾಗಿದ್ದಾನೆ. ಶುಕ - ಎಂಬ ಪ್ರಯೋಗವನ್ನು ತನ್ನ ಅಭಿಮಾನದ ಬಿರುದಾಗಿ ಧರಿಸಿ ನಿತ್ಯಾತ್ಮ ಶುಕಯೋಗಿ ಎಂದು ತನ್ನನ್ನು ವರ್ಣಿಸಿಕೊಂಡಿರುವನೆಂದು ಭಾವಿಸಲು ಅವಕಾಶವಿರುತ್ತದೆ.

ನಿತ್ಯಾತ್ಮ ಶುಕಯೋಗಿಯ ಹೆಸರು ಸದಾನಂದ ಎಂದಿರಬಹುದು. ಭಾಗವತ ಕೃತಿಯ ಕೆಲವೆಡೆಗಳಲ್ಲಿ 'ಇದು ಸದಾನಂದಾಖ್ಯ ಯೋಗಿಯ ತೊದಲುನುಡಿ', 'ಯೋಗೀಂದ್ರ ನಳಿಳೋದಿತ ಸದಾನಂದ ಮುದದೊಳಭಿವರ್ಣಿಸಿದಂ' ಗೋಪೀನಾಥ ಮಂಗಳವನೀವನು ಸದಾನಂದಾಖ್ಯ ಮುನಿವರಗೆ- ಎಂಬೀ ಮೊದಲಾದ ಉದ್ಧರಣಗಳಿಂದ ಮೇಲಿನ ಊಹೆಯನ್ನು ಸಮರ್ಥಿಸಬಹುದಾಗಿದೆ. ಯೋಗಿ, ಯೋಗೀಂದ್ರ - ಎಂದು ಬಳಸಿರುವ ಹೆಸರುಗಳ ಆಧಾರದಿಂದ ಈತನೊಬ್ಬ ಸನ್ಯಾಸಿಯಾಗಿದ್ದಿರಬೇಕು. ಅಚ್ಯುತಾರಣ್ಯರ ಹೊಗಳಿಕೆಯಿರುವ ಕಾರಣ ಇವರು ಈತನ ಗುರುಗಳಾಗಿದ್ದಿರಬೇಕು.

## ಕಾಲ - ಕೃತಿ

ಶುಕಯೋಗಿಯ ಭಾಗವತವನ್ನು ಸುಮಾರು ಹದಿನೈದನೆಯ ಶತಮಾನದ ಕಾಲಾಂತ್ಯಕ್ಕೆ ಸೇರಿಸಬಹುದು. ಈತನ ಕಾವ್ಯವು ಸುಮಾರು ಹನ್ನೆರಡು ಸಾವಿರ ಪದ್ಯಗಳಿಂದ ಕೂಡಿದೆ. ಕುಮಾರವ್ಯಾಸನ ಆದರ್ಶವಿಟ್ಟುಕೊಂಡು ರಚಿಸಲಾದ ಕೃತಿಯಲ್ಲಿ ಬೇರಾವ ಕನ್ನಡ ಕವಿಯ ಸ್ಮರಣೆಯೂ ಇಲ್ಲದಿರುವುದು ಆಶ್ಚರ್ಯಕರವಾದ ಸಂಗತಿಯಾಗಿದೆ. ಇದರಲ್ಲಿನ ಹನ್ನೊಂದು ಹನ್ನೆರಡನೆಯ ಸ್ಕಂಧಗಳಲ್ಲಿ ಚಾಟುವಿಠಲನು ಭಾಗವತದ ರಚನಕಾರನೆಂದಿರುವ ಕಾರಣ ಸದಾನಂದ ಕವಿಗೇ ಅಂದಿನ ವೇಳೆಗೆ ಈ ಬಿರುದು ಬಂದಿರಬಹುದಾಗಿದೆ.

'ಕನ್ನಡ ಭಾಗವತ'ವೆಂದು ಪ್ರಸಿದ್ಧವಾಗಿರುವ ಈ ಕಾವ್ಯವನ್ನು ಬರೆದ ಕವಿಗೆ ಚಾಟುವಿಠಲನಾಥನೆಂಬ ಹೆಸರಿತ್ತೇ ಅಥವಾ ಚಾಟುವಿಠಲನೆಂಬ ಕವಿಯಿದ್ದನೆ ಎಂಬ ಜಿಜ್ಞಾಸೆಯಲ್ಲಿ ಯಾವುದೂ ಇಲ್ಲಿಯವರೆಗೆ ನಿರ್ಧಾರವಾಗಿಲ್ಲ. ಭಾಗವತದ ಮೊದಲ ಹತ್ತು ಸ್ಕಂಧಗಳನ್ನು ಅಚ್ಯುತಾರಣ್ಯರೆಂಬ ಯತಿಯ ಮಾರ್ಗದರ್ಶನದ ಮೇರೆಗೆ ರಚಿಸಿದ್ದಿರಬೇಕು. ಗ್ರಂಥ ರಚನೆಯು ಯಾವುದೋ ಕಾರಣದಿಂದ ನಿಂತುಹೋಗಿ ಆನಂತರ ಆತನಲ್ಲಿ ಭಕ್ತಿಯಿದ್ದ - ಬಹುಶಃ ಆತನ ಶಿಷ್ಯನಾದ ಚಾಟುವಿಠಲನು ಅಪೂರ್ಣವಾಗಿದ್ದ 'ಪುರಾಣ ತಿಲಕ'ವನ್ನು ಪೂರ್ಣಗೊಳಿಸಿರಬೇಕು. ಇದು ಸಹಾ ಅಭಿಪ್ರಾಯವಾಗಿದೆಯೇ ಹೊರತು ಖಚಿತವಾದ ನಿರ್ಧಾರವಲ್ಲ.

ಭಾಗವತವು ಪುರಾಣತಿಲಕ. ಇದರಲ್ಲಿ ಭಗವಂತನ ದಿವ್ಯಚರಿತ್ರೆಯ ವರ್ಣನೆಯಿದೆ. ಇದನ್ನು ಕೇಳುವುದು, ಓದುವುದು ಮೋಕ್ಷಕ್ಕೆ ಸಾಧನವಾಗಿದೆ. ಇದು ವೇದವೆಂಬ ಕಲ್ಪ ವೃಕ್ಷದ ಫಲ. ಶುಕಮಹರ್ಷಿಯ ಮಾತಿನಲ್ಲಿ ಹರಿದುಬಂದ ಅಮೃತ. ಇಂತಹ ರಸವತ್ತಾದ ಗ್ರಂಥವು ಸ್ವರ್ಗ-ಕೈಲಾಸ-ವೈಕುಂಠಗಳಲ್ಲಿಯೂ ದೊರೆಯುವುದಿಲ್ಲ. ಆದ್ದರಿಂದ ಭಾಗ್ಯಶಾಲಿ ಗಳಾದ ಭಕ್ತರು, ರಸಿಕರಾದ ಭಾವುಕರು ಈ ಲೋಕದಲ್ಲಿರುವಾಗಲೇ ಭಗವತ್ ರಸಪಾನ ಮಾಡಿ ಕೃತಾರ್ಥರಾಗಬೇಕು.

ಭಾಗವತವನ್ನು ಮೊದಲು ಹೇಳಿದಾತ ಭಗವಂತನಾದ ನಾರಾಯಣ. ಈತನು ಬ್ರಹ್ಮನಿಗೆ ಪ್ರೀತಿಯಿಂದ ಇದನ್ನು ಹೇಳಲಾಗಿ ಆತನು ತನ್ನ ಮಾನಸಪುತ್ರನಾದ ನಾರದನಿಗೆ ಉಪದೇಶ ಮಾಡಿದನು. ನಾರದರಿಂದ ವ್ಯಾಸರಿಗೆ, ವ್ಯಾಸರಿಂದ ಶುಕತಾತನಿಗೆ ಈ ಕಥೆಯು ಹರಿದುಬಂದಿದೆ. ಮಹಾಮುನಿಯಾದ ಶುಕನು ಪರೀಕ್ಷಿತ ಮಹಾರಾಜನಿಗೆ ಆತನ ಮರಣ ಭೀತಿಯನ್ನು ಹೋಗಲಾಡಿಸಲು ಇದನ್ನು ಹೇಳುವ ಸಂದರ್ಭದಲ್ಲಿ ಅಲ್ಲಿ ಅನೇಕ ಮುನಿ ಗಳು ಕುಳಿತು ಕೇಳುತ್ತಿದ್ದರು. ಅವರಲ್ಲಿ ಸೂತಮಹರ್ಷಿಯೂ ಒಬ್ಬ. ನೈಮಿಷಾರಣ್ಯದಲ್ಲಿ ಸಭೆ ಸೇರಿದ್ದ ಶೌನಕಾದಿ ಮುನಿಗಳಿಗೆ ಸೂತಮಹರ್ಷಿಗಳು ಹೇಳಿದ ಭಾಗವತವು 'ಪುರಾಣತಿಲಕ'ವೆಂದು ಪ್ರಸಿದ್ಧವಾಗಿದೆ. ಇದನ್ನು ಸುಲಿದ ಬಾಳೆಯ ಹಣ್ಣಿನ ರೀತಿಯಲ್ಲಿ ಕನ್ನಡಿಗರಿಗೆ ನೀಡಿದ ನಿತ್ಯಾತ್ಮ ಶುಕಯೋಗಿಯು ಗೌರವಾರ್ಹನಾಗಿರುತ್ತಾನೆ.

## ಸಾಹಿತ್ಯಸುಧೆ

ಭಾಗವತದ ಸಪ್ತಮ ಸ್ಕಂಧದಲ್ಲಿ ನರಸಿಂಹಾವತಾರದ ಕಥೆಯಿದೆ. ಪರೀಕ್ಷಿತ ಮಹಾರಾಜನು 'ಭಗವಲ್ಲೀಲಾ ಕಥನ'ವನ್ನು ಶುಕಮಹರ್ಷಿಗಳಿಂದ ವಿವರವಾಗಿ ಕೇಳಿದ ಮೇಲೆ ಭಗವಂತನಿಗೆ ದೇವತೆಗಳು-ದೈತ್ಯರು ಎಂಬ ಭೇದಭಾವವಿದ್ದ ಕಾರಣವನ್ನರಿಯಲು ತವಕವುಂಟಾಗುತ್ತದೆ. ಆಗ ಶುಕಮಹರ್ಷಿಗಳು ಹಿಂದೆ ಧರ್ಮರಾಯನಿಗೆ ಆತನ ರಾಜಸೂಯ ಯಾಗದ ಸಮಯದಲ್ಲಿ ನಾರದರು ಹೇಳಿದ ನರಸಿಂಹಾವತಾರದ ಕಾರ್ಯ ಕಾರಣಗಳನ್ನು ತಿಳಿಸುತ್ತಾರೆ.

ಈ ಕೃತಿಯಲ್ಲಿ ಬರುವ ನರಸಿಂಹಾವತಾರದ ಕಥೆಯು ಮೂಲರಚನೆಗೆ ಹತ್ತಿರವಾಗಿದೆ. ಮೂಲಕೃತಿಯ ಭಾವವನ್ನು ಸರಳವಾದ, ಸುಂದರವಾದ ಭಾಮಿನೀಷಟ್ಪದಿಯಲ್ಲಿ ನೀಡಲಾಗಿದೆ. ಆದರೆ ಇದರ ಸರಳಾನುವಾದಕ್ಕೆ ಮಾತ್ರ ನಾವಿಂದು ತೃಪ್ತಿಪಡಬೇಕಾಗಿದೆ.

ಭಾಗವತದ ನಿರೂಪಣೆಯ ಹಿನ್ನೆಲೆಯಲ್ಲಿ ಅಂದಿನ ಕಾಲಕ್ಕೆ ಮೋಕ್ಷಪ್ರದವಾದ ಸಾಹಿತ್ಯವನ್ನು ಅಂದು ಪ್ರಚಲಿತವಾಗಿದ್ದ ಭಾಷೆ, ಛಂದಸ್ಸುಗಳಲ್ಲಿ ಕನ್ನಡ ಜನತೆಗೆ ನೀಡಬೇಕೆಂಬ ಹಿರಿದಾದ ಆಶಯಕ್ಕೆ ಕೃತಿಯು ನೆರವಾಗಿದೆ. ನರಸಿಂಹಾವತಾರ ಕತೆಗೆ ಸಂಬಂಧಪಟ್ಟ ಎಲ್ಲ ವಿಧವಾದ ಸಾಹಿತ್ಯವನ್ನು ಪರಿಶೀಲಿಸಬೇಕೆಂಬ ಬಲವಾದ ಕಾರಣದಿಂದ ಚಾಟುವಿಠಲನ ಭಾಗವತದ ಪ್ರಸಂಗವನ್ನು ಇಲ್ಲಿ ಹೇಳಲಾಗಿದೆ.

ಹಿರಣ್ಯಕಶಿಪು ತನ್ನ ಮಗನಾದ ಪ್ರಹ್ಲಾದನ ಮೇಲಿನ ವೈರದಿಂದ ವಿಷ್ಣು ಸಾಕ್ಷಾತ್ಕಾರವನ್ನು ಪಡೆದನು. ಪ್ರಹ್ಲಾದನು ನಿಷ್ಕಾಮವಾದ ಸಾತ್ವಿಕ ಭಕ್ತಿಯಿಂದ ಭಗವಂತನನ್ನು ಒಲಿಸಿಕೊಂಡು 'ಪರಮ ಭಾಗವತ'ನೆಂಬ ಕೀರ್ತಿ ಪಡೆದನು. ಇಂತಹ ಪುರಾಣತಿಲಕವನ್ನು ಓದುವುದರಿಂದ ಸಾಹಿತ್ಯಸುಧೆಯನ್ನು ಸವಿಯುವಂತಾಗುತ್ತದೆ.

*ಜಗದುದರನವತಾರ ಸಂಖ್ಯೆಯ*
*ಬಗೆಯಬಲ್ಲವರಾರು ಭೂಪಾಂ*
*ಸಗಳನಭ್ರದ ತಾರೆಗಳನಾಸಾರ ಬಿಂದುಗಳ*
*ತೆಗೆದು ಲೆಕ್ಕಿಸಬಹುದು ಭೃಗ್ವಾ*
*ದಿಗಳು ಸುರನರವರರು ಮನ್ವಾ*
*ದಿಗಳು ಹರಿಯಂಶಾಂಶಸಂಭವರಿವರು ಕೇಳೆಂದ*

ಭೂಮಿಯ ಧೂಳಿನ ಕಣಗಳನ್ನು, ಆಗಸದಲ್ಲಿನ ನಕ್ಷತ್ರಗಳನ್ನು, ಮಳೆಹನಿಗಳನ್ನು ಲೆಕ್ಕ ಹಾಕಬಹುದೋ ಏನೋ, ಆದರೆ ಭಗವಂತನ ಅವತಾರಗಳನ್ನು ಊಹಿಸಲು ಶಕ್ಯರಾದವರಿಲ್ಲ. ಭೃಗು ಮುಂತಾದವರು, ಮನುಗಳು, ದೇವತೆಗಳು, ಮಾನಸಶ್ರೇಷ್ಠರೆಲ್ಲರು ಶ್ರೀಹರಿಯ ಅಂಶಾಂಶಗಳಿಂದ ಸಂಭವಿಸಿದವರಾಗಿದ್ದಾರೆ.

# ಪ್ರಸನ್ನ ವೆಂಕಟದಾಸ

ಮಹಾವಿಷ್ಣುವಿನ ಜನಪ್ರಿಯ ಅವತಾರರೂಪನಾದ ನರಸಿಂಹನನ್ನು ಆರಾಧಿಸದ ಹರಿದಾಸರು ಯಾರೂ ಇಲ್ಲವೆಂದು ಹೇಳುವಷ್ಟರ ಮಟ್ಟಿಗೆ ಕೀರ್ತನ-ಸ್ತೋತ್ರ ಸಾಹಿತ್ಯವು ಹುಲುಸಾಗಿ ಬೆಳೆದಿದೆ. ಈ ಸಂಪ್ರದಾಯಕ್ಕೆ ಸೇರುವ ಪ್ರಸನ್ನ ವೆಂಕಟದಾಸರನ್ನು ವಿಜಯದಾಸರ ಸಮಕಾಲೀನರೆಂದು ಹೇಳಬಹುದು. ಈತನ ಜೀವಿತದ ಕಾಲವನ್ನು ಖಚಿತವಾಗಿ ತಿಳಿಯಲಾಗದಿದ್ದರೂ ಸುಮಾರು ಹದಿನೇಳನೆ ಶತಮಾನದ ಅಂತ್ಯಭಾಗದಿಂದ ಹದಿನೆಂಟನೆಯ ಶತಮಾನದ ಮಧ್ಯಭಾಗದಲ್ಲಿ ಈತನು ಜೀವಿಸಿದ್ದಿರಬಹುದೆಂದು ಹೇಳಬಹುದಾಗಿದೆ.

## ಬಾಳನೋಟ

ಪ್ರಸನ್ನ ವೆಂಕಟದಾಸನ ತಂದೆ-ತಾಯಿಗಳು ಕಾಖಂಡಕಿ ನರಸಪ್ಪಯ್ಯ ಮತ್ತು ಲಕ್ಷ್ಮೀಬಾಯಿ ಎಂದು ಗುರುತಿಸಲಾಗುತ್ತಿದೆ. ಇವರ ಜನ್ಮನಾಮ ವೆಂಕಟೇಶ ಎಂದಿತ್ತು. ಹೆತ್ತವರು ಚಿಕ್ಕಂದಿನಲ್ಲಿಯೇ ತೀರಿಹೋದ ಕಾರಣ ಇವರು ತಮ್ಮ ಅಣ್ಣ - ಅತ್ತಿಗೆಯರ ಆಶ್ರಯದಲ್ಲಿ ಬೆಳೆಯುತ್ತಿದ್ದರು. ಅಣ್ಣನವರು ಪುರಾಣ ಪ್ರವಚನಕ್ಕಾಗಿ ಊರೂರು ಸುತ್ತುತ್ತಿದ್ದರು. ಹಳ್ಳಿಯಿಂದ ಹಳ್ಳಿಗೆ ಓಡಾಡುತ್ತಿದ್ದರು. ವೆಂಕಟೇಶನ ದಿನಚರಿಯು ಹೊರಗೆ ದನಗಳನ್ನು ಮೇಯಿಸುವುದರೊಂದಿಗೆ, ಮನೆಯಲ್ಲಿ ಅತ್ತಿಗೆಗೆ ಇತರ ಕೆಲಸ ಕಾರ್ಯಗಳಲ್ಲಿ ಸಹಾಯ ಮಾಡುವುದರಲ್ಲಿ ಕಳೆಯುತ್ತಿತ್ತು.

ಹೀಗೆ ಕಾಲ ಕಳೆಯುತ್ತಿರಲಾಗಿ ಆಗೊಂದು ದಿನ ಅತ್ತಿಗೆಯ ನಿಷ್ಠುರ ಮಾತುಗಳಿಗೆ ಬೇಸರವಾಗಿ ವೆಂಕಟೇಶನು ಮನೆಯಿಂದ ಹೊರಗೆ ಹೋಗಿಬಿಡುತ್ತಾನೆ. ಊರೂರು ಸುತ್ತಾಡಿ ಕೊನೆಗೆ ತಿರುಪತಿಗೆ ಬರುತ್ತಾನೆ. ಇಲ್ಲಿ ಆತನಿಗೆ ಹರಿದಾಸರ ಪ್ರೇರಣೆ ಮತ್ತು ಶ್ರೀನಿವಾಸನ ಅನುಗ್ರಹಗಳು ಲಭಿಸುತ್ತವೆ. ವೆಂಕಟನು ತಿರುಪತಿಯಲ್ಲಿ ಹಲವು ಕಾಲವಿದ್ದು ಗುರುಗಳಿಗಾಗಿ ಶೋಧನೆ ನಡೆಸುತ್ತಾನೆ. ಮುದ್ಗಲ ಜನಾರ್ದನಾಚಾರ್ಯರೆಂಬ ಗುರುಗಳು ದೊರೆಯಲಾಗಿ ಅವರಿಂದ ಪುರಾಣ ದ್ವೈತಸಿದ್ಧಾಂತಗಳ ಪಾಠಗಳನ್ನು ಕಲಿಯುತ್ತಾನೆ.

ತಾನಾಗಿಯೇ ವಿದ್ಯೆಯನ್ನರಸಿಕೊಂಡು ಬಂದ ಅಥವಾ ವಿದ್ಯೆಯೇ ಇವನನ್ನು ಹುಡುಕಿಕೊಂಡು ಮನೆಯಿಂದ ಹೊರಗಡೆಗೆ ತಂದ ಕಾರಣವಾಗಿ ಎಮ್ಮೆ ಕಾಯುವವನು ವಿದ್ಯಾವಂತನಾಗುತ್ತಾನೆ. ವಿದ್ಯಾಭ್ಯಾಸವು ಮುಗಿದ ಬಳಿಕ ವೆಂಕಟನು ಬಾಗಲಕೋಟೆಗೆ ಮರಳುತ್ತಾನೆ. ಊರಿಗೆ ಮರಳಿದ ಈತನು ಹರಿಭಕ್ತಿಪ್ರಚಾರವನ್ನು ಕೈಗೊಳ್ಳುತ್ತಾನೆ. ದಾಸನೆಂಬ ಹೆಗ್ಗಳಿಕೆಗೆ ಪಾತ್ರನಾದ ಈತನನ್ನು ಭಕ್ತಸಮೂಹವು ಪ್ರಸನ್ನ ವೆಂಕಟದಾಸನೆಂದು ಗುರುತಿಸಿದ ಕಾರಣ ಭಾಗವತೋತ್ತಮನಾಗುತ್ತಾನೆ.

ಪ್ರಸನ್ನ ವೆಂಕಟದಾಸನಿಗೆ ವಿವಾಹವಾಗಿ ಒಬ್ಬ ಮಗನಿದ್ದ ಹಾಗೆ ತಿಳಿದುಬರುತ್ತದೆ. ಈತನ ಹೆಸರು ವೆಂಕಟಕೃಷ್ಣಾಚಾರ್ಯನೆಂದಿದ್ದಿರಬೇಕೆಂದು ಊಹೆಯಿದೆ. ಆದರೆ ಇತರ

ವಿವರಗಳಾವುವೂ ಗೊತ್ತಾಗುತ್ತಿಲ್ಲ. ಬಾಗಲಕೋಟೆ ಸಮೀಪದ ಗುಹಾದೇವಾಲಯಗಳಿಗೆ ಖ್ಯಾತವಾದ ಬಾದಾಮಿಯಲ್ಲಿ ಪ್ರಸನ್ನವೆಂಕಟದಾಸರ ಕಟ್ಟೆಯಿದೆ. ಇದನ್ನು ಇವರ ಮರಿಮಕ್ಕಳಾದ ಅಣ್ಣಯ್ಯಾಚಾರ್ಯರು ಕಟ್ಟಿಸಿದರೆಂದು ಹೇಳುತ್ತಾರೆ. ಪ್ರಸನ್ನವೆಂಕಟದಾಸರ ಪುಣ್ಯತಿಥಿಯನ್ನು ಪ್ರತಿವರ್ಷವೂ ಭಾದ್ರಪದ ಶುದ್ಧ ದ್ವಾದಶಿಯಂದು ವೈಭವದಿಂದ ಆಚರಿಸುತ್ತಾರೆ.

## ಕೀರ್ತನ ಸಾಹಿತ್ಯ

ಪ್ರಸನ್ನ ವೆಂಕಟ ಎಂಬ ಪ್ರಸಿದ್ಧವಾದ ಅಂಕಿತವನ್ನು ಹೊಂದಿ ಖ್ಯಾತವಾದ ಸುಮಾರು ನಾಲ್ಕುನೂರ ಐವತ್ತಕ್ಕೂ ಮಿಗಿಲಾದ ರಚನೆಗಳಿವೆ. ಸುಳಾದಿ, ಉಗಾಭೋಗಗಳಲ್ಲದೆ ಕೆಲವು ದೀರ್ಘಕೃತಿಗಳೂ ಪ್ರಸಿದ್ಧವಾಗಿವೆ. ನಾರದ ಕೊರವಂಜಿ, ನಾರಾಯಣ ಪಂಜರ, ಪ್ರಸನ್ನವೆಂಕಟರ ಭಾಗವತ, ಶ್ರೀಕೃಷ್ಣ ಪಾರಿಜಾತ ಮತ್ತು ಸಹಸ್ರನಾಮ ಮಣಿಗಣ ಷಟ್ಚರಣ ಪದ್ಯಮಾಲ - ಎಂಬ ಹೆಸರಿನ ಕೃತಿಗಳು ಪ್ರಸನ್ನ ವೆಂಕಟರ ಅಂಕಿತದಲ್ಲಿ ನಮಗಿಂದು ಲಭ್ಯವಾಗುತ್ತಿವೆ.

ಇವರ ಭಾಗವತವು ಸಂಸ್ಕೃತ ಮೂಲ ಭಾಗವತ ಕೃತಿಯ ದಶಮಸ್ಕಂಧದ ಪೂರ್ವಾರ್ಧವನ್ನು ವಸ್ತುವನ್ನಾಗಿ ಉಳ್ಳದ್ದು. ಬಿಡಿಬಿಡಿಯಾದ ಕೀರ್ತನೆಗಳ ಮೂಲಕ ಭಾಗವತದ ಕಥೆಯನ್ನು ಹೇಳುವ ಇವರ ಶೈಲಿ ಕನ್ನಡ ಸಾಹಿತ್ಯಕ್ಕೆ ವಿನೂತನವಾದದ್ದೆಂದು ಹೇಳಬೇಕು. ಇಡೀ ಭಾಗವತದ ಹಿರಿಮೆ-ಗರಿಮೆಗಳು ಇದರಲ್ಲಿ ಪಡಿಮೂಡಿವೆ. ಒಟ್ಟಾರೆ ಸಂಸ್ಕೃತ ಭಾಗವತವನ್ನು ಅನುಸರಿಸಿ ರಚಿತವಾಗಿರುವ ಇದರ ಶ್ರೇಷ್ಠತೆಯನ್ನು ಕೊಂಡಾಡದ ಭಾಗವತೋತ್ತಮರಿಲ್ಲವೆಂಬುದು ಸರಿಯಾದ ಮಾತಾದೀತು.

*ಶ್ರೋತವ್ಯವು ಇದೆ ಮಂತ್ರವ್ಯವು ಇದೆ ಧ್ಯಾತವ್ಯವು ನಮಗೆ*
*ಪೂತವು ಹರಿಗುಣಗಾಥೆಯು ಮುಕುತಿಯು ಪಾಥೇಯವು ನಮಗೆ*

ಹರಿಕಥೆಯ ಬಗ್ಗೆ ದಾಸರಿಗಿರುವ ಅಪಾರ ಗೌರವವು ಈ ಎರಡು ಪಾದಗಳ ಮೂಲಕ ವ್ಯಕ್ತವಾಗಿದೆ. ಇದರಲ್ಲಿ ಹರಿಯನ್ನು ಕುರಿತ ಭಾವನೆ ಹರಿದಿದೆ. ಹರಿ ಎಂದರೆ ಕೃಷ್ಣನೆಂಬ ಅರ್ಥವೂ ಈ ಸಂದರ್ಭದಲ್ಲಿ ತಿಳಿದು ಬರುವುದಾದರೂ ವಿಶಾಲವಾದ ಅರ್ಥದಲ್ಲಿ ಇದು ವಿಷ್ಣು ಮತ್ತು ಆತನ ಗುಣಗಳನ್ನು ಹೊಗಳುವುದಾಗಿದೆ.

ಪ್ರಸನ್ನವೆಂಕಟರ ಒಂದು ಕೀರ್ತನೆಯಲ್ಲಿ ದೇವಾಸುರ ಯುದ್ಧದಲ್ಲಿ ಅಪಜಯ ಹೊಂದಿದ ಅಸುರರು ಧರೆಗೆ ಬಂದು ರಾಜಕುಲದಲ್ಲಿ ಹುಟ್ಟಿ ದೇವಾಂಶರಾದ ರಾಜರನ್ನು ಪೀಡಿಸಲು ಭೂಭಾರ ಹೆಚ್ಚಾಗುತ್ತದೆ. ಆಗ ಪೃಥ್ವಿಯು ಅಪಾರವಾದ ವೇದನೆಯಿಂದ ನೊಂದು ರೋದಿಸುವಳು. ದೇವತೆಗಳು ಬಳಲಿ ಪ್ರಾರ್ಥಿಸಿದಾಗ ಶಿವ ಮತ್ತು ದೇವೇಂದ್ರರು ವಿಷ್ಣುವಿನ ಹತ್ತಿರ ಸೇರಿ ಸ್ತೋತ್ರ ಮಾಡುತ್ತಾರೆ. ಈ ಸಂದರ್ಭದಲ್ಲಿ ಭೂದೇವಿಯು ಹರಿಸ್ತುತಿ, ಹರಿಯ ಸೃಷ್ಟಿಕಾರ್ಯದ ವರ್ಣನೆ, ದಶಾವತಾರದ ವರ್ಣನೆಗಳಿವೆ.

*ಶ್ರೀಕೃಷ್ಣನ ಲೀಲಾವತಾರ ಘನ್ನ*
*ಕೊಂಡಾಡುವ್ ಶ್ರವಣ ಮನನ ಮಾಡುವ್*

- ಎಂಬ ಪಲ್ಲವಿ ಮತ್ತು ಅನುಪಲ್ಲವಿಗಳಿಂದ ಕೂಡಿದ ಕೀರ್ತ
ಬರುವ ನಾಲ್ಕನೆಯ ಪದ್ಯವನ್ನು ಇಲ್ಲಿ ಗಮನಿಸಬೇಕು.

*ಪ್ರಣತರಿಚ್ಛೆನುಸಾರ ಪೂರೆವ ಕೃಪಾಕರ*
*ಘನಶ್ರುತಿಹರನೊದ್ದ ಗಹನಾಬ್ಧಿ ಮಥಿಸಿದ*
*ವನಿಯಕಷ್ಟನ ಸೀಳ್ದಮರರಿಪುಮರ್ದ*

- ಇಲ್ಲಿ ಬಂದಿರುವ ಅಮರರಿಪುಮರ್ದ ಎಂಬ ಪದದ ಬಳಿಕೆ ನರಸಿಂಹಾವತಾ
ಸೂಚಿಸುತ್ತದೆ. ಕಾರಣ ಇದರ ಹಿಂದಿನ ಪದದ ಕ್ರಿಯೆ ಸೀಳುವುದಾಗಿದೆ.

ಶ್ರೀಕೃಷ್ಣನ ಜನನದ ಸಂದರ್ಭವನ್ನು ಮತ್ತೊಂದು ಪದ್ಯದಲ್ಲಿ ವಿವರಿಸಿ
ಆತನ ಲೀಲೆಗಳಲ್ಲೊಂದಾದ ಮಾವ ಕಂಸನನ್ನು ಕೊಂದ ಪ್ರಸಂಗೋಕ್ತಿಯು
ಈ ಸಂದರ್ಭದಲ್ಲಿಯೇ ನರಸಿಂಹನಂತೆ ಕೃಷ್ಣನು ದೇವಕಿಯ ಗರ್ಭದಲ್ಲಿ
ಮೂಲಪದ್ಯವನ್ನು ನೋಡಬಹುದು -

*ಮಾವಕಂಸನ ಕೊಲುವ ಭಾವದಲ್ಲಿ ತಂದೆ ವಾಸು*
*ದೇವನಂಗನೆ ತಾಯಿ ದೇವಕಿಯ ಜಠರದಲಿ*
*ಶ್ರೀವಾಸುದೇವಾವಿರ್ಭಾವವಾದನು ಸ್ವೇಚ್ಛೆ ಶ್ರೀವರನರಸಿಂಹನಂತೆ*

ಮಹಾವಿಷ್ಣುವಿನ ದಶಾವತಾರಗಳಲ್ಲಿ ಒಬ್ಬನಾದ ಶ್ರೀಕೃಷ್ಣನ ವಿಚಾರ
ಭಾಗವತವು ತನ್ನಲ್ಲಿ ತುಂಬಿಕೊಂಡಿರುವುದಾದರೂ ಕ್ವಚಿತ್ತಾಗಿ ಬರುವ ಆತನ
ಅವತಾರಗಳ ಬಗ್ಗೆ ದಾಸರ ಮನಸ್ಸಿನಲ್ಲಿ ತುಂಬಿರುವ ಪ್ರೀತಿ, ಆದರಗಳಿಗೆ ನರಸಿಂಹಾವತ
ಒಂದು ಉದಾಹರಣೆಯಾಗಿರಲು ಸಾಕು.

ಶ್ರೀಕೃಷ್ಣ ಜನನವಾದ ಹನ್ನೆರಡನೆಯದಿನ ಮುತ್ತೈದೆಯರೆಲ್ಲರೂ ಸೇರಿ ಮಗು
ಸಿಂಗರಿಸಿ ತೊಟ್ಟಿಲಿಗೆ ಹಾಕಿ ಜೋಗುಳ ಹಾಡಿ ನಾಮಕರಣ ಮಹೋತ್ಸವ ನೆರವೇರಿಸು
ಈ ಜೋಗುಳದ ವಿಚಾರವು ಮೂಲಭಾಗದಲ್ಲಿಲ್ಲ. ಕೀರ್ತನೆಯ ಮೂಲಕ ದ
ಸ್ವಂತ ರಚನೆಯಾಗಿದೆ. ಇದರಲ್ಲಿ ದಶಾವತಾರದ ವರ್ಣನೆಯಿದೆ.

*ಜೋ ಜೋ ಝಷಕುಲೋತ್ತರಕರ್ವ ಜೋಜೋ*
*ಜೋಜೋ ಜಲಧಿಮಂಥನಕೂರ್ಮ*
*ಜೋಜೋ ವಸುಧಸ್ಥಾಪಕಕೋಲ ಜೋ ಜೋ*
*ಜೋಜೋ ಖಳವಿದಾರಣಶೀಲ*

ಮೇಲಿನ ಲಾಲಿ ಹಾಡಿನಲ್ಲಿ ಬರುವ 'ಖಳವಿದಾರಣಶೀಲ' ಎಂಬ ಮಾತಿನ ಬಳಕೆಯಲ್ಲಿ ನರಸಿಂಹನು ದುಷ್ಟದೈತ್ಯನನ್ನು ಬಗೆದ ವರ್ಣನೆಯು ಪುಟ್ಟಮಾತಿನಲ್ಲಿ ಅಡಕವಾಗಿ ಬಂದಿರುತ್ತದೆ.

ಕೃಷ್ಣನ ಬಾಲಲೀಲೆಗಳಲ್ಲಿ ಮೊಸರು, ಬೆಣ್ಣೆಗಳನ್ನು ಕದ್ದ ಘಟನೆಗಳು ತುಂಬ ರೋಚಕವಾದದ್ದಾಗಿವೆ. ಇದರ ಚಿತ್ರಣ ಅರ್ಥಾತ್ ಯಶೋದೆಯು ಮೊಸರುಕಡೆಯುವ ದೃಶ್ಯವು ದಾಸರ ಕೀರ್ತನೆಯಲ್ಲಿ ಕಂಡುಬರುತ್ತದೆ. ಇಲ್ಲಿನ ಶರಚರ ಗಿರಿಧರ ಧರೋದ್ಧರ ನರಹರ-ಎಂಬ ಪದಗಳ ಗುಂಪಿನಲ್ಲಿರುವ ನರಹರ ಎಂಬ ವಿಶೇಷಣವು ನರಸಿಂಹನ ರೂಪದ ವಿವರಣೆಯಲ್ಲದೆ ಬೇರೇನೂ ಆಗಿಲ್ಲವೆನ್ನಬಹುದು.

ದಶಾವತಾರದ ಹಿರಿಮೆಯನ್ನು ನಿಬಿಡವಾಗಿಸಿರುವ ಕೃತಿಯೊಂದನ್ನು ದಾಸರು ರಚಿಸಿದ್ದು ಇದರಲ್ಲಿ ನರಸಿಂಹನ ಪ್ರಸ್ತಾಪವಿದೆ -

*ಸಂಯುಕ್ತ ಭವ್ಯವರದಾತ್ಮ ಹೇಮ*
*ನಯನಹರ ಧೃತ ಭೂತಳಾತ್ಮ*
*ಭಯದೂರ ನರಮೃಗಸ್ವರೂಪ ಲೋಕ*
*ತ್ರಯ ಕೀರ್ತಿತ ಸುಪ್ರತಾಪ*

## ಒಟ್ಟು ನೋಟ

ಭಾಗವತದ ಆದ್ಯಂತಗಳನ್ನು ಹಾಡಾಗಿ, ವೃತ್ತವಾಗಿ ದ್ವಿಪದಿಯಾಗಿ ಸಂಪೂರ್ಣವಾಗಿ ಕನ್ನಡಿಸಿದ ಕೀರ್ತಿಯು ಪ್ರಸನ್ನ ವೆಂಕಟದಾಸರಿಗೆ ನಿಸ್ಸಂದೇಹವಾಗಿ ಸಲ್ಲುತ್ತದೆ. ಈ ಕಾಯಕದಲ್ಲಿ ಅವರ ಅಚಲವಾದ ಶ್ರದ್ಧೆ, ನಿಷ್ಠೆಗಳನ್ನಲ್ಲದೆ ಪ್ರಾಮಾಣಿಕವಾದ, ನೇರವಾದ ನುಡಿಗಳ ಅಭಿವ್ಯಕ್ತಿಯಿದೆ.

ದಾಸಸಾಹಿತ್ಯವನ್ನು ಶ್ರೀಮಂತಗೊಳಿಸುವಲ್ಲಿ ಗಮನಾರ್ಹ ಪಾತ್ರ ವಹಿಸಿರುವ ಇವರ ಕೀರ್ತನೆಗಳು ಬಾದಾಮಿ ಗುಹೆಗಳಲ್ಲಿ ಈಗಲೂ ಪ್ರತಿಧ್ವನಿಸುತ್ತಿರಬಹುದು. ಅಲ್ಲಿನ ಭವ್ಯ ನರಸಿಂಹಶಿಲ್ಪವು ಇದಕ್ಕೆ ಸಾಕ್ಷಿಯಾಗಬಹುದಷ್ಟೆ. ಕೀರ್ತನೆಯಂತಹ ಹಾಡುಗಬ್ಬದ ಮೂಲಕ ಪುರಾಣ ಕಾವ್ಯವೊಂದನ್ನು ರಚಿಸಬೇಕೆಂಬ ಅವರ ಹಂಬಲದ ಹಿನ್ನೆಲೆಗೆ ಸಂಗೀತ ಪ್ರಜ್ಞೆಯ ಭದ್ರವಾದ ತಳಹದಿಯಿರುತ್ತದೆ.

ಪ್ರಸನ್ನ ವೆಂಕಟದಾಸರ ಭಾಗವತವು ದಾಸಸಾಹಿತ್ಯಕ್ಕೆ ವಿನೂತನವಾದ ಕಾಂತಿ, ಸೊಬಗುಗಳನ್ನು ನೀಡಿರುವುದು ಅವರ ಸಾಹಿತ್ಯವನ್ನು ಪರಿಶೀಲಿಸಿದಾಗ ಎಂತಹವರಿಗೂ ಮನವರಿಕೆಯಾಗುತ್ತದೆ. ಹೀಗಾಗಿಯೇ ಕನ್ನಡ ಭಾಗವತದಲ್ಲಿ ಪ್ರಸನ್ನ ವೆಂಕಟದಾಸರಿಗೆ ಪ್ರತ್ಯೇಕವಾದ ಸ್ಥಾನವನ್ನು ನೀಡಬಹುದು.

# ಹೆಳವನಕಟ್ಟೆ ಗಿರಿಯಮ್ಮ

ದಾವಣಗೆರೆ ಜಿಲ್ಲೆಯ ಹರಿಹರದಿಂದ ಹೊನ್ನಾಳಿ ಮಾರ್ಗದಲ್ಲಿ ಬರುವ ಮಲೆಬೆನ್ನೂರಿನ ಸೆರಗಿಗೆ ಹೊಂದಿಕೊಂಡಂತಿರುವ ಕೊಮಾರನಹಳ್ಳಿ ಅಥವಾ ಹೆಳವನಕಟ್ಟೆಯಲ್ಲಿ ಜನಿಸಿದ್ದ, ಕನ್ನಡ ನಾಡಿನ ಮೀರಾಬಾಯಿ ಎಂದು ಖ್ಯಾತರಾಗಿದ್ದ ಗಿರಿಯಮ್ಮನವರ ಸಾಹಿತ್ಯದಲ್ಲಿಯೂ ನರಸಿಂಹನ ವರ್ಣನೆಯನ್ನು ಕಾಣಬಹುದಾಗಿದೆ. ಇದಕ್ಕೆ ಅವರ ಪ್ರಸಿದ್ಧ ಕೀರ್ತನೆಯೊಂದನ್ನು ಇಲ್ಲಿ ನಿದರ್ಶನವಾಗಿ ಉದ್ಧರಿಸಲಾಗಿದೆ. ಕೀರ್ತನಕಾರರಲ್ಲಿ ಪ್ರಥಮ ಮಹಿಳಾತಾರೆಯಾಗಿ ಗಿರಿಯಮ್ಮನವರು ಮಿನುಗುತ್ತಿದ್ದಾರೆ.

## ದಾಗಿನಕಟ್ಟೆ ಗೋಟುಗುಣಿ ನರಸಿಂಹದೇವರ ವರ್ಣನೆ

ಶ್ರೀ ನರಸಿಂಹದೇವ ಶರಣರಕ್ಷಕ ದಾನವಾರಿ ಸುಭಕ್ತಾಧೀನ ಮೂರುತಿಯನೆ
ಹರಿ ತನ್ನ ಗುರುವೆಂದು ಸ್ಮರಿಸುತಿರಲು ಬಾಲ ।
ನಿರವಕಾಣದೆ ದುಷ್ಟ ಹಿರಣ್ಯಕಾಸುರನನು ।
ಪರಿಯ ಭಂಜಿಸುತಿರೆ ಮೊರೆದು ಕೋಪದಳೆದ್ದು ।
ತರಳಗೊಲಿದೆ ಬಹು ಕರುಣಾನಿಧಿಯೆ

ಛಿಟಿ ಛಿಟಿಲ್ ಭುಗಿ ಭುಗಿಲ್ ಆರ್ಭಟಿಸಿ ।
ಗರ್ಜಿಸಿ ಕಂಭ ಕಿಡಿಯು ಉಗ್ರದಿ ನಿಸ್ಫುಟದಿಯುಬ್ಬಿಸಿದಡೆ ।
ಕಟಿಕಟಿಮಸದಗ್ನಿ ಕಿಟ ಅಗಿವುತ। ನಿಂದ ಕಠಿಣ ಮೂರುತಿಯೇ ।।

ಕೊಬ್ಬಿದ ಹಿರಣ್ಯಕನುಬ್ಬುಮುರಿವೆನೆಂದು ।
ಹೆಬ್ಬಾಗಿಲೊಳು ಸಂಜೆ ಮಬ್ಬಲಿ ದನುಜನ ।
ಗರ್ಭವ ನಖದಿಂದ ಇಬ್ಭಾಗವನ್ನು ಮಾಡಿ ।
ಹಬ್ಬಿದ ಕರುಳನು ಹರುಷದಿ ಧರಿಸಿದೆ ।।

ಭೀತನಾಗಿ ತನ್ನ ತಾತನ ತೊಡೆದಾ ।
ಘಾತಕ ಹರಿಯು ಮಾತನು ಮನ್ನಿಸಿ ।
ಅತಿ ಶಾಂತನಾಗಿ ಪ್ರೀತಿಲಿ ಶಿಷ್ಯನ ಸಲಹಿದ ಅನಾಥ ರಕ್ಷಕನೆ ।।

ಖಳನ ಮರ್ದಿಸಿ ಬಹು ಇಳೆಯಿಂದ ಅಜನಿಗೆ ಬಲು ಹರುಷವನಿತ್ತ ।
ಹೆಳವನಕಟ್ಟೆ ಶ್ರೀವಲ್ಲಭ ದಾಗಿನ-ಕಟ್ಟೆ ನೆಲೆವಾಸ ಕಂಭದ ನರಸಿಂಹ ದೇವಾ ।।

- ಹೆಳವನಕಟ್ಟೆ ಗಿರಿಯಮ್ಮ



## ಅಧ್ಯಾಯ - 8

# ತೆಲುಗು ಭಾಗವತ

ಭಾಗವತವನ್ನು ಅಷ್ಟಾದಶ ಪುರಾಣಗಳಲ್ಲಿ ಅತ್ಯಂತ ಶ್ರೇಷ್ಠವಾದ್ದೆಂದು ಪರಿಗಣಿಸಲಾಗಿದೆ. ವ್ಯಾಸ ಭಗವಾನರು ಕಲೆ ಹಾಕಿದ ಪುರಾಣ ಸಾಹಿತ್ಯಕ್ಕೆ ಇದು ಮುಕುಟಪ್ರಾಯವಾಗಿದೆ. ಶ್ರೇಯಸ್ಸು ಪ್ರೇಯಸ್ಸುಗಳನ್ನು ಒದಗಿಸಿಕೊಡುವ ಭಕ್ತಿ-ವೈರಾಗ್ಯಗಳ ನಿರೂಪಣೆಯೇ ಇದರ ಗುರಿ. ನೀತಿಮಾರ್ಗದ ಹೆದ್ದಾರಿಯಲ್ಲಿ ಇದನ್ನು ಪ್ರಮುಖವಾದ ಮೈಲಿಗಲ್ಲು ಎಂದು ಹೇಳಬಹುದು. ಈ ರೀತಿಯಲ್ಲಿ ಪ್ರಜಾಕೋಟಿಗೆ ಭಕ್ತಿಯ ಸ್ರೋತದ ದರ್ಶನವನ್ನು ಮಾಡಿಸಿರುವ ಭಾಗವತವು ನಮ್ಮ ರಾಷ್ಟ್ರದ ಹಲವಾರು ಪ್ರಮುಖ ಭಾಷೆಗಳಿಗೆ ಅನುವಾದ ಇಲ್ಲವೇ ರೂಪಾಂತರ ಹೊಂದಿರುವುದನ್ನು ನಾವು ಗಮನಿಸಬಹುದು. ಕನ್ನಡ-ತೆಲುಗು ಮೊದಲಾದ ಭಾಷೆಗಳ ಮೂಲಕವಾಗಿ ಈ ಭಕ್ತಿಸಾಹಿತ್ಯವು ಉಜ್ವಲವಾಗಿ ಬೆಳಗಿದೆ. ಹಲವಾರು ಶತಮಾನಗಳಿಂದ ಇಂದಿನವರೆಗೆ ಬೆಳೆದುಕೊಂಡು ಬಂದಿದೆ. ಭಾಗವತ ಧರ್ಮವನ್ನು ಮೊಳಗಿಸಿದೆ.

ದಕ್ಷಿಣ ಭಾರತದ ಭಾಷೆಗಳಲ್ಲಿ ತೆಲುಗಿಗೆ ಭೌಗೋಳಿಕವಾದ ಹರವು ಸ್ವಲ್ಪ ಹೆಚ್ಚಾಗಿರುವುದನ್ನು ಕಂಡುಕೊಳ್ಳಬಹುದಾಗಿದೆ. ಈ ಭಾಷೆಯಲ್ಲಿ ಇತರ ಭಾಷೆಗಳಿಗಿಂತ ಮಿಗಿಲಾದ ಭಕ್ತಿಸಾಹಿತ್ಯದ ಕೃತಿಗಳು ರಚನೆಯಾಗಿವೆ. ಪೌರಾಣಿಕ ಕ್ಷೇತ್ರದಲ್ಲಿ ತೆಲುಗುಸಾಹಿತ್ಯದ ಪಾತ್ರ ಹಿರಿದಾಗಿದೆ. ರಾಮಾಯಣ, ಭಾರತ, ಭಾಗವತಗಳ ಮಹಾಪೂರವೇ ಇಲ್ಲಿ ಹರಿದಿದೆ ಎಂದರೆ ತಪ್ಪೇನಿಲ್ಲ. ಭಕ್ತಿ ಸಾಹಿತ್ಯ ಸಾಮ್ರಾಜ್ಯವು ಬೆಳಗಿದ ತೆಲುಗು ಭಾಷೆಯಲ್ಲಿ ಪೋತನನು ಬರೆದಿರುವ ಭಾಗವತಕ್ಕೆ ಪ್ರಥಮಶ್ರೇಣಿಯ ಸ್ಥಾನವು ಲಭ್ಯವಾಗಿದೆ. ಅತ್ಯಂತ ಜನಪ್ರಿಯವಾಗುವಂತೆ ರಚಿಸಿದ ಕವಿಯ ಪ್ರತಿಭಾ ಸಂಪತ್ತು ಅದ್ವಿತೀಯವಾದ್ದೆಂದು ಹೇಳಬಹುದು.

# ಪೋತನ ಕವಿ

ಆಂಧ್ರ ವಾಙ್ಮಯದಲ್ಲಿ ಅನುವಾದ ಪ್ರಧಾನವಾದ ಕೃತಿಗಳ ಆಧಾರದಿಂದ ಸುಮಾರು ಕ್ರಿ.ಶ. ೧೩೫೦ರವರೆಗಿನ ಕಾಲವನ್ನು 'ಅನುವಾದ ಯುಗ'ವೆಂದು ಕರೆಯಲಾಗಿದೆ, ಅನಂತರ ಎಂದರೆ ಕ್ರಿ.ಶ. ೧೫೦೦ರಿಂದ ಆರಂಭವಾಗುವ ಕಾಲದಲ್ಲಿ ಸ್ವತಂತ್ರ ಕೃತಿಗಳು ಪ್ರಮುಖ ಪಾತ್ರವನ್ನು ನಿರ್ವಹಿಸಿರುವುದನ್ನು ಈ ಭಾಷೆಯ ಸಾಹಿತ್ಯಚರಿತ್ರೆಯಲ್ಲಿ ಕಾಣುತ್ತೇವೆ. ಇದರಿಂದಾಗಿ ಈ ಕಾಲವನ್ನು 'ಪ್ರಬಂಧ ಯುಗ'ವೆಂದು ಹೆಸರಿಸಲಾಗಿದೆ. ಇವೆರಡರ ನಡುವಣ ಸುಮಾರು ನೂರು ವರ್ಷಗಳಲ್ಲಿ-ಕಾಲ ಸುಮಾರು ಕ್ರಿ.ಶ. ೧೪೦೦ರಿಂದ ೧೫೦೦ರವರೆಗೆ- ಕೆಲವು ಅನುವಾದ ಕೃತಿಗಳು ಮತ್ತೆ ಕೆಲವು ಅನುಸರಣ ಕೃತಿಗಳು. ಇನ್ನೂ ಹಲವು ಸ್ವತಂತ್ರ ಕೃತಿಗಳು ಹೊರಹೊಮ್ಮಿದವು. ಈ ಅವಧಿಯನ್ನು 'ಪ್ರಬಂಧಪೂರ್ವ ಯುಗ'ವೆಂದು ಹೆಸರಿಸಲಾಗಿದೆ. ಈ ಯುಗದ ಪ್ರಮುಖನಾದ ಕವಿ ಶ್ರೀನಾಥ. ಈತನ ಸಮಕಾಲೀನನಾಗಿ ತೆಲುಗುಭಾಷೆಯನ್ನು ಉಜ್ವಲಗೊಳಿಸಿದ ಕವಿ ಬಮ್ಮೆರ ಪೋತನ.

ಪೋತನನು ತೆಲುಗಿನ ಮತ್ತೋರ್ವ ಕವಿಯಾದ ತಿಕ್ಕನನಷ್ಟೇ ಪ್ರತಿಭಾವಂತ. ಇವರಿಬ್ಬರೂ ಆಂಧ್ರ ವಾಙ್ಮಯಕ್ಕೆ ಸೂರ್ಯಚಂದ್ರರ ಸಮಾನರಾಗಿ ತೆಲುಗಿನ ವೇದಗಳೆಂದು ಪ್ರಸಿದ್ಧವಾದ ಭಾರತ-ಭಾಗವತಗಳನ್ನು ರಚಿಸಿದ್ದಾರೆ. ಕವಿ ಪೋತನನು ಭಾಗವತದ ಮೂಲಕವಾಗಿ ಕೃಷ್ಣತತ್ವವನ್ನು ತೆಲುಗುನಾಡಿಗೆ ನೀಡಿದ್ದಾನೆ. ಇದು ಕೇವಲ ಆಂಧ್ರಭಾಷೆ ಯವರಿಗೆ ಮಾತ್ರವಲ್ಲದೆ ಭಾಗವತಪಂಥದವರೆಲ್ಲರೂ ಅನುಸರಿಸುವ ಕೃತಿಯಾಗಿ ಮನೋಜ್ಞ ವಾಗಿದೆ. ಭಾಗವತ ಕೃತಿಯಿಂದಾಗಿ ಪೋತನನ ಹೆಸರು ವಿಶಿಷ್ಟವಾಗಿ ಉಳಿದಿರುತ್ತದೆ. ಕನ್ನಡಕ್ಕೆ ಕವಿಯಾದ ಕುಮಾರವ್ಯಾಸನಿದ್ದಂತೆ ತೆಲುಗಿಗೆ ಪೋತನ. ಇವರಿಬ್ಬರೂ ಮೇರು ಸದೃಶರಾದವರು, ಪ್ರತಿಭಾಸಂಪನ್ನರೂ ಹೌದು. ಕನ್ನಡದಲ್ಲಿ ವೀರನಾರಾಯಣನೆ ಕವಿ ಯಾಗಿದ್ದರೆ, ತೆಲುಗಿನಲ್ಲಿ 'ಪಲಿಕೆಡಿದಿ ಭಾಗವತಮಟ, ಪಲಿಕಿಂಚೆವಾಡು ರಾಮಭದ್ರುಂಡಟ' ಆಗಿ ಕವಿ ಪೋತನನು ತಾನು 'ವಿನ್ನಂತ, ಕನ್ನಂತ, ತೆಲಿಯ ವಚ್ಚಿನಂತ ತೇಟಪರಚು' ಎನ್ನುತ್ತಾನೆ.*

'ತೆಲುಗು ತೇಟ' ಎಂಬ ವಾಕ್ಕು ತೆಲುಗು ಭಾಷೆಗೆ ಸಂದಿರುವುದಕ್ಕೆ ಹಲವು ಕಾರಣಗಳಿರಬಹುದು. ಪೋತನ ಕವಿಯ ರಚನಾಗುಣವು ಇದನ್ನು ಪೋಷಿಸುತ್ತದೆ. ಪೋತನನು ಭಕ್ತಿರಸಾಮೃತ ಪ್ರವಾಹದಲ್ಲಿ ದಿಗಂತಕ್ಕೇರಿದ ಕವಿಯಾಗಿದ್ದಾನೆ. ಈತನನ್ನು ಕುರಿತು 'ನಿನ್ನಂತಹ ಕವಿಯು ಮತ್ತೊಬ್ಬನು ತೆಲುಗು ಸೀಮೆಯಲ್ಲಿ ಯಾರಿದ್ದಾನೆ? ಮಹಾನುಭಾವರಾದ ಕವೀಶ್ವರರಲ್ಲಿ ಎಷ್ಟು ಮಂದಿ ನಿನ್ನಂತಹನರಿದ್ದಾರೆ?' ಎಂದೆಲ್ಲ ಹೊಗಳಿದ್ದಾರೆ. ಸುರುಚಿರವಾದ, ಸುವಿಶಾಲವಾದ ಭಕ್ತಿಸಾಮ್ರಾಜ್ಯಕ್ಕೆ ಮುಕುಟವೊಂದಿಲ್ಲವೆಂಬ ವಿಚಾರವನ್ನುಬಿಟ್ಟರೆ ಉಳಿದಂತೆ ಮಹಾರಾಜನೇ ಆಗಿರುವ ಬಮ್ಮೆರ ಪೋತನನ ಬಂಗಾರ ಹಸ್ತಗಳಿಂದ ರಚಿತವಾದ ಭಾಗವತವು ರಸಪುಷ್ಟಿ ಹೊಂದಿ ಚಿಗುರೊಡೆದು ಕಂಗೊಳಿಸುತ್ತ

ತ್ತ್ರಗಳನ್ನು ಧರಿಸಿ ಫಲವನ್ನು ನೀಡುವಲ್ಲಿ ಯಶಸ್ವಿಯಾಗಿದೆ. ಈ ರೀತಿಯಲ್ಲಿ ರಸಜ್ಞ ತವರಿಗೆ ರಸಾಸ್ವಾದವನ್ನುಂಟು ಮಾಡುತ್ತಿದೆ. ಭಾಗವತದಂತೆಯೇ ಇಲ್ಲಿಯೂ ಹಿರಣ್ಯಾಕ್ಷ ಣ್ಯಕಶ್ಯಪರ ಜನ್ಮವೃತ್ತಾಂತ, ವರಾಹಾವತಾರ ವರ್ಣನೆ, ಹಿರಣ್ಯಾಕ್ಷ ಸಂಹಾರಗಳೆಲ್ಲ ಾರನೆಯ ಸ್ಕಂಧಕ್ಕೆ ವಸ್ತುವಾದ ವಿಷಯಗಳೇ ಆಗಿ ಹಿರಣ್ಯಾಕ್ಷವಧೆಯ ನಂತರದ ೀಕದೃಶ್ಯದಿಂದ ಈ ಪ್ರಸಂಗವು ಆರಂಭವಾಗುತ್ತದೆ.

## ಭಾಗವತ

ಪೋತನನ ಭಾಗವತದಲ್ಲಿ ಬಂದಿರುವ ಸಪ್ತಮ ಸ್ಕಂಧವು ಹಿರಣ್ಯಾಕ್ಷ-ಹಿರಣ್ಯಕಶ್ಯಪರ ತ್ತಾಂತ, ಸುಯಜ್ಞೋಪಾಖ್ಯಾನ, ತ್ರಿಪುರಾಸುರ ಸಂಹಾರ, ಅಜಗರೋಪಾಖ್ಯಾನ, ನಾರದರ ರ್ವಜನ್ಮದ ಕಥೆಗಳಿಂದ ಕೂಡಿದೆ. ಇವುಗಳಲ್ಲಿ ಪ್ರಹ್ಲಾದಚರಿತ್ರೆಯ ಅನನ್ಯವಾದ, ಾಮಾನ್ಯವಾದ ಭಾಗವನ್ನು ಪೋತನನು ಉನ್ನತವಾದ ರೀತಿಯಲ್ಲಿ ನಿರೂಪಿಸುವಲ್ಲಿ ಶಸ್ವಿಯಾಗಿದ್ದಾನೆ.

*ಪ್ರಹ್ಲಾದ ನಾರದ ಪರಾಶರ ಪುಂಡರೀಕ*
*ವ್ಯಾಸಾಂಬರೀಷ ಶುಕಶೌನಕ ಭೀಷ್ಮದಾಲ್ಭ್ಯಾನ್*

- ಈ ಶ್ಲೋಕದಲ್ಲಿ ವಿವರಿಸುವ ಹಾಗೆ ಭಕ್ತರ ಸಾಲಿನಲ್ಲಿ ಪ್ರಹ್ಲಾದನು ಸ್ಥಾನದಲ್ಲಿದ್ದಾನೆ. ಈತನ ಚರಿತ್ರೆಯನ್ನು ಪ್ರಮುಖವಾದ ವೈಷ್ಣವ ಸಾಹಿತ್ಯ ಕೃತಿಗಳಲ್ಲಿ ಬಹುದಾಗಿದೆ. ಪೋತನ ಕವಿಯೂ ಇಂತಹ ಭಾಗವತೋತ್ತಮ ಬಾಲಕನ ಚರಿತ್ರೆಯನ್ನು ಸುವಲ್ಲಿ ಯಶಸ್ಸು ಕಂಡಿದ್ದಾನೆ.

ಪೋತನನು ಚಿತ್ರಿಸಿರುವ ಪ್ರಹ್ಲಾದನಲ್ಲಿ ಹಲವಾರು ಉತ್ತಮವಾದ ಗುಣಗಳಿವೆ. ತಮರ್ಯಾದನಾದ ಇವನು ಸುಗುಣಪಾಲಕನೂ, ಸಮಸ್ತಸಭ್ಯನುತಶೀಲನೂ ಆಗಿದ್ದಾನೆ. ಶನನ್ನು ಕವಿಯು ಅಂಬುಜೋದರ ದಿವ್ಯಪಾದಾರವಿಂದ ಚಿಂತನಾಮೃತಪಾನ ವಿಶೇಷ ತ್ತಚಿತ್ತನೆಂದು ಶ್ಲಾಘಿಸಿರುತ್ತಾನೆ. ಈ ಮೂಲಕವಾಗಿ ಕವಿಯು ತನ್ನ ಮನೋಭಿಲಾಷೆ ನ್ನೆಲ್ಲ ಪ್ರಹ್ಲಾದನ ವಿಚಾರದಲ್ಲಿ ತೆರೆದಿಟ್ಟಿರುವನೆಂದು ಹೇಳಬಹುದು.

ಭಾಗವತದಲ್ಲಿ ಒಟ್ಟು ಹನ್ನೆರಡು ಸ್ಕಂಧಗಳಿದ್ದು ಇದರ ಸಪ್ತಮ ಸ್ಕಂಧದ ೀಷತೆ ಏನೆಂದರೆ, ಇಲ್ಲಿ ಉಕ್ತವಾಗಿರುವ ಕಥೆಗಳೆಲ್ಲವನ್ನೂ ನಾರದ ಮುನಿಯು ರ್ಮರಾಯನಿಗೆ ಹೇಳುವುದಾಗಿದೆ. ಶ್ರೀಕೃಷ್ಣನ ಸುದರ್ಶನದಿಂದ ಆತನ ವೈರಿಯಾದ ಶಪಾಲನು ಹತನಾಗುತ್ತಾನೆ. ಅವನ ತೇಜಸ್ಸು ಭಗವಂತನಲ್ಲಿ ಲೀನವಾಗುತ್ತದೆ. ಈ ಚಿತ್ರವು ಧರ್ಮರಾಯನಲ್ಲಿ ಆಶ್ಚರ್ಯ, ಸಂದೇಹಗಳಿಗೆ ಕಾರಣವಾಗುತ್ತದೆ. ಆಗ ಆ ವೇಶದಲ್ಲಿ ನಾರದರು ಸೂಕ್ತ ಸಮಾಧಾನವನ್ನು ನೀಡುತ್ತಾರೆ. ಹಿರಣ್ಯಕಶ್ಯಪನ ಜನ್ಮ ತ್ತಾಂತದ ರಹಸ್ಯವನ್ನು ಹೇಳಿ ಪ್ರಹ್ಲಾದ ಚರಿತೆಯನ್ನು ನಿರೂಪಿಸುವ ಮಧು-

ಪದ್ಯರಚನೆಗಳು ಈ ಭಾಗದಲ್ಲಿವೆ. ಸಂಸ್ಕೃತ ಭಾಗವತಕ್ಕೆ ಸಮನಾಗುವಂತೆ ಹೃದಯಕ್ಕೆ ಹತ್ತಿರವಾಗುವಂತೆ ಪೋತನ ಕವಿಯು ಸಮರ್ಥವಾಗಿ ಅನುವಾದಿಸಿದ್ದಾನೆ. ಕನ್ನಡಿಸಿದಂತೆ ತೆಲುಗಿಸಿದ್ದಾನೆ.

## ಪ್ರಹ್ಲಾದ ಚರಿತೆ

'ಪ್ರಹ್ಲಾದ ಚರಿತೆ'ಯನ್ನು ವಿವರವಾಗಿ ತಿಳಿಸಿಕೊಡುವಂತೆ ಧರ್ಮರಾಯನು ನಾರದರಲ್ಲಿ ಪ್ರಾರ್ಥಿಸುತ್ತಾನೆ. ತಂದೆಯಾದ ಹಿರಣ್ಯನಿಂದ ನಾನಾರೀತಿಯ ಹಿಂಸೆಗೆ ಗುರಿ ಯಾಗಿ ನಂತರದಲ್ಲಿ ಶ್ರೀಹರಿಯ ಕೃಪೆಗೆ ಪಾತ್ರನಾದ ಪ್ರಹ್ಲಾದನ ಮಹಿಮೆಯು ಧರ್ಮ ರಾಯನನ್ನು ಆಕರ್ಷಿಸಿದೆ. ಪೋತನನ ಕವಿ ಹೃದಯವು ಪ್ರಹ್ಲಾದನ ಪರಮ ಭಾಗವತ ಗುಣಗಳಿಂದ ತುಂಬಿಬಂದಿದೆ. ಆತನ ಪ್ರಸಂಗವಿರುವೆಡೆಗಳಲ್ಲೆಲ್ಲ ಕವಿಹೃದಯವು ಆರ್ದ್ರಗೊಂಡಿದೆ. ಉಳಿದ ಭಾಗಗಳಿಂದ ಬೇರೆಯೇ ಆಗಿ ಪ್ರತ್ಯೇಕವಾಗಿ ರೂಪುತಳೆತಿದೆ.

ಪ್ರಹ್ಲಾದನು ವಿಷ್ಣುವಿನ ಭಕ್ತನಾಗಿದ್ದಂತೆ, ಸಮಸ್ತ ಪ್ರಾಣಿಗಳನ್ನೂ ತನ್ನಂತೆ ಭಾವಿಸುವ ಸಮದರ್ಶಿಯಾಗಿರುತ್ತಾನೆ. ಹಿರಿಯರು ಎದುರಾದರೆ ಅವರಿಗೆ ಅತ್ಯಂತ ಗೌರವದಿಂದ ನಮಸ್ಕರಿಸುವ ವಿನಯಶಾಲಿಯಾಗಿರುತ್ತಾನೆ. ಪರಸ್ತ್ರೀಯರು ಕಂಡರೆ ಅವರನ್ನು ಮಾತೃಸದೃಶವಾದ ವಾತ್ಸಲ್ಯದಿಂದ ಭಾವಿಸಿ ಪಕ್ಕಕ್ಕೆ ಸರಿಯುವ ಗುಣವುಳ್ಳವನಾಗಿರುತ್ತಾನೆ. ದೀನರನ್ನು ತಂದೆ ತಾಯಿಯರ ಹಾಗೆ ಆದರಿಸುವ ಕರುಣಾಮಯಿಯಾಗಿರುತ್ತಾನೆ. ಸ್ನೇಹಿತರನ್ನು ಸೋದರರ ಹಾಗೆ ಕಾಣುವ ಸಹೃದಯವಂತನಾಗಿರುತ್ತಾನೆ. ಗುರುಗಳನ್ನು ದೈವಸಮಾನರಾಗಿ ಕಾಣುವ ಆದರ್ಶ ವಿದ್ಯಾರ್ಥಿಯಾಗಿರುತ್ತಾನೆ. ಈ ವಿಧವಾದ ಉತ್ತಮ ಗುಣಗಳಿಂದ ಕೂಡಿದ್ದ ಪ್ರಹ್ಲಾದನಿಗೆ ತನ್ನ ತಂದೆಯು ನೀಡುವ ಹಿಂಸೆಯು ಎಷ್ಟೇ ಕಠಿಣವಾದದ್ದಾದರೂ ಅದನ್ನು ಸಹಿಸಿಕೊಳ್ಳುವ ಮಾನಸಿಕ ದೃಢತೆಯಿರುತ್ತದೆ.

ಪ್ರಹ್ಲಾದನು ತನ್ನ ರೂಪ ಆಕಾರಗಳಲ್ಲಿ ವಿದ್ಯೆ ಐಶ್ವರ್ಯಗಳಲ್ಲಿ ಅಧಿಕನಾದರೂ ಆತನಲ್ಲಿ ಎಳ್ಳಷ್ಟಾದರೂ ಗರ್ವವಿರುವುದಿಲ್ಲ. ಅನೇಕ ಭೋಗ ಭಾಗ್ಯಗಳ ಮಧ್ಯೆ ಬೆಳೆದವನಾದರೂ ಚಂಚಲತೆಯನ್ನು ಹೊಂದಿರಲಿಲ್ಲ. ತಕ್ಕದಾದ ವಯಸ್ಸು, ವಯಸ್ಸಿಗೆ ತಕ್ಕ ಬಲವಿದ್ದವನಾದರೂ ಕಾಮಕ್ರೋಧಾದಿಗಳಿಂದ ದೂರನಾಗಿದ್ದ. ಕಾಂತೆಯರ ರೂಪ ಭೋಗಗಳು ತನ್ನ ಕಣ್ಣಮುಂದೆ ಕುಣಿದಾಡುತ್ತಿದ್ದರೂ ಶೃಂಗಾರಭಾವವು ಅವನ ಮನಸ್ಸಿನೊಳಗೆ ಸುಳಿಯುತ್ತಿರಲಿಲ್ಲ. ಲೋಕದಲ್ಲಿನ ಸಮಸ್ತ ಐಶ್ವರ್ಯಗಳು ಕೈಗೆಟುಕುವಂತಿದ್ದರೂ ಅದನ್ನು ಪಡೆಯಲು ಆಸೆಪಟ್ಟವನಲ್ಲ. ದೈತ್ಯರಾಜನ ಮಗನಾದರೂ ಪ್ರಹ್ಲಾದನಲ್ಲಿ ಸದಾಕಾಲವೂ ಶ್ರೀಹರಿಯ ಚಿಂತೆ ಮನೆಮಾಡಿಕೊಂಡಿತ್ತು. ಪರಮಾತ್ಮನ ಧ್ಯಾನ, ಆತನಲ್ಲಿ ಆಸಕ್ತಿಗಳ ವಿನಾ ಮತ್ತೇನನ್ನೂ ಅವನು ಚಿಂತಿಸುತ್ತಿರಲಿಲ್ಲ. ಬೇರಾವ ಆಲೋಚನೆಗಳೂ ಅವನ ಸನಿಹಕ್ಕೆ ಸುಳಿಯುತ್ತಿರಲಿಲ್ಲ. ಈ ಎಲ್ಲ ವಿಚಾರಗಳನ್ನು ಪೋತನನು ತನ್ನ ಕಾವ್ಯದಲ್ಲಿ ಉಚಿತ ರೀತಿಯಲ್ಲಿ ಪ್ರತಿಪಾದಿಸಿರುತ್ತಾನೆ. ಇಲ್ಲೆಲ್ಲ ಕವಿಯ ಮಾತು ಕೇಳುತ್ತಿದ್ದಂತೆ

ಪ್ರಹ್ಲಾದನನ್ನು ಬಾಲಕ ಎಂದು ಕಾಣದೆ ಹದಿಹರೆಯದ ಯುವಕನಂತೆ ನೋಡಲಾಗಿದೆ ಎಂಬುದು ಸ್ಪಷ್ಟವಾಗುತ್ತದೆ. ಹರಿಯ ನಾಮಸ್ಮರಣೆಯನ್ನು ಕ್ಷಣಮಾತ್ರವೂ ಬಿಟ್ಟಿರದ ಅವನಲ್ಲಿ ಸುಗುಣಗಳು ಮನೆಮಾಡಿದ್ದವೆಂದು ಹೇಳಬಹುದು.

## ಗುಣನಿಧಿ ಪ್ರಹ್ಲಾದ

ಪ್ರಹ್ಲಾದನು ತಮ್ಮ ವೈರಿಕುಲದಲ್ಲಿ ಜನಿಸಿದವನೆಂಬ ವೈರತ್ವವನ್ನು ಹೊಂದದೆ ದೇವತೆಗಳೂ ಸಹ ತಮ್ಮ ಸಭೆಗಳಲ್ಲಿ ಪ್ರಹ್ಲಾದನಂತಹ ಗುಣವಂತನನ್ನು ತಾವು ಎಲ್ಲಿಯೂ ನೋಡಲಿಲ್ಲ ಎಂಬುದಾಗಿ ತಮ್ಮ ಪ್ರಭುತ್ವವಾದ ಕವಿತ್ವದಿಂದ ಹೊಗಳುತ್ತಿದ್ದರು. ಅಪಾರವಾದ ಗುಣನಿಧಿಯಂತಿದ್ದ ಗುಣಾಗ್ರಣಿಯಾದ ಆತನನ್ನು ಹೊಗಳಲು ಸಾಕ್ಷಾತ್ ಆದಿಶೇಷನಿಗಾಗಲಿ, ದೇವತೆಗಳ ಗುರುವಾದ ಬೃಹಸ್ಪತಿಗಾಗಲಿ, ಭಾರತಿಯ ದೊರೆ ಬ್ರಹ್ಮನಿಗೂ ಸಾಧ್ಯವಿರಲಿಲ್ಲವೆಂದು ಕವಿ ಬಣ್ಣಿಸುತ್ತಾನೆ.

ಪ್ರಹ್ಲಾದನು ಊಟ ಮಾಡುವ ಸಮಯದಲ್ಲಾಗಲಿ, ನೀರು ಕುಡಿಯುವಾಗ, ನಿದ್ರೆ ಮಾಡುವಾಗ, ನಗುವಾಗ ಶ್ರೀಹರಿಯ ಪಾದಪದ್ಮಗಳಲ್ಲಿ ತಲ್ಲೀನನಾಗಿರುತ್ತಿದ್ದು ಆತನ ಚಿಂತಾಮೃತವನ್ನಾಸ್ವಾದಿಸುತ್ತ ವಿಶ್ವವನ್ನೇ ವಿಸ್ಮಯಗೊಳಿಸುತ್ತಿದ್ದನು. ಈ ವಿಚಾರವನ್ನು ಕವಿ ಪೋತನನು ಹೃದಯಂಗಮವಾಗಿ ವರ್ಣಿಸಿದ್ದಾನೆ. ಇದೆಲ್ಲ ಮೂಲದಲ್ಲಿಲ್ಲದ ವಸ್ತು ವಿಶೇಷಗಳು. ಭಾಗವತ ಕವಿ ಪೋತನ ತನ್ನ ಕವಿಚಕ್ಷುಗಳಲ್ಲಿ ಕಂಡಂತೆ ವಿವರಿಸುವ ಪ್ರಯತ್ನವಾಗಿದೆ.

ಈ ರೀತಿಯಲ್ಲಿ ಕವಿಯು ಪಾಠಕರಿಗೆ, ಸಹೃದಯರಿಗೆ ಪ್ರಹ್ಲಾದ ಚರಿತೆಯೆಂಬ ರಸಾಮೃತವನ್ನು ಉಣಬಡಿಸಿರುತ್ತಾನೆ. ಇದನ್ನು ಓದಿದ, ಕೇಳಿದ ಯಾರಿಗಾದರೂ ತೆಲುಗು ಸಾಹಿತ್ಯದಲ್ಲಿ ಇಂತಹ ಅನರ್ಘ್ಯರತ್ನವಿರುವುದು ಗೋಚರವಾಗುತ್ತದೆ. ಪೋತನ ಕವಿಯು ತೆಲುಗು ಸಾಹಿತ್ಯದ ಚೂಡಾರತ್ನದಂತಿದ್ದಾನೆ. ಮಹಾಕವಿಯಾದ ಪೋತನನು ಶ್ರೀಕೃಷ್ಣತತ್ವವನ್ನು ನಾನ್ಯಥಾಸ್ವಾದ್ಯವಾಗಿ ಗಾನಮಾಡಿ ಆಂಧ್ರರ ಮನೋಲೋಕದಲ್ಲಿ ಅತ್ಯದ್ಭುತವಾದ ಪರಿವರ್ತನೆ ಯನ್ನುಂಟು ಮಾಡಿದ್ದಾನೆ. ತೆಲುಗು ಸಾಹಿತ್ಯದಲ್ಲಿ ಮೇರುಸದೃಶವಾಗಿ ಮೆರೆದಿದ್ದಾನೆ ಕವಿಯು ಮೂಲ ಭಾಗವತನನ್ನೇ ಅನುಸರಿಸಿದ್ದರೂ ಆತನ ಪ್ರತಿಭಾ ವ್ಯಾಪಾರದಿ ಅಲ್ಲಲ್ಲಿ ಹೊಸತನದ ಹೊಳಪನ್ನು, ಕಾವ್ಯತ್ವದ ಮಿಂಚನ್ನು ಕಾಣಬಹುದಾಗಿದೆ.

## ಕಥಾರಂಭ

ಬ್ರಹ್ಮದತ್ತ ವರಪ್ರಸಾದದಿಂದ ವೀರಾಧಿವೀರನಾದ, ಮೂರುಲೋಕಗಳಿಗೂ ಅಧಿಪತಿ ಯಾದ ಹಿರಣ್ಯಕಶ್ಯಪನ ಹೆಸರು ಕೇಳಿದೊಡನೆ ದೇವತೆಗಳೂ ಗಡಗಡನೆ ನಡುಗುತ್ತಿದ್ದರು. ಈ ರೀತಿಯಾಗಿ ಚಂಡಶಾಸನನಂತಿದ್ದ ತಂದೆಗೆ ಮಗನನ್ನು ತನ್ನಂತೆಯೇ ಬೆಳೆಸಬೇಕೆಂಬ ಮಹತ್ವಾಕಾಂಕ್ಷೆಯಿತ್ತು. ಅವನು ತನ್ನ ಮಗನನ್ನು ವಿದ್ಯಾಪಾರಂಗತನಾಗಿ ಮಾಡಲು

ಗುರುಗಳ ಹತ್ತಿರ ಬಿಟ್ಟಿರುತ್ತಾನೆ. ಗುರುಗಳು ಬಾಲಕನಿಗೆ ಯೋಗ್ಯರೀತಿಯಲ್ಲಿಯೇ ವಿದ್ಯಾದಾನ ಮಾಡಿರುತ್ತಾರೆ. ವಿದ್ಯಾಭ್ಯಾಸದ ಕ್ರಮವು ಮುಗಿದ ನಂತರ ಪ್ರಹ್ಲಾದನು ತಂದೆಯ ಸಮ್ಮುಖದಲ್ಲಿ ತಾನು ಕಲಿತದ್ದನ್ನು ಒಪ್ಪಿಸಬೇಕಾದ ಪ್ರಸಂಗವೊದಗಿ ಬರುತ್ತದೆ. ಅವನು ತಂದೆಯ ಮುಂದೆ ನಿರೂಪಿಸಿದ ವಿಷಯವಾದರೂ ವಿಷ್ಣುಭಕ್ತಿಗೆ ಸಂಬಂಧಪಟ್ಟದ್ದೇ ಆಗಿರುತ್ತದೆ. 'ಶ್ರವಣಂ ಕೀರ್ತನಂ....' ಎಂಬ ನವವಿಧ ಭಕ್ತಿಮಾರ್ಗವನ್ನೊಳಗೊಂಡ ಪದ್ಯವನ್ನು ಅವನು ಹಾಡುತ್ತಾನೆ.

ಪೋತನ ಕವಿಯು ಈ ಸಂದರ್ಭದಲ್ಲಿ ಅರ್ಥಗರ್ಭಿತವಾದ ನುಡಿಗಳನ್ನೇ ಹೇಳಿಸಿದ್ದಾನೆ. 'ಲೋಕದಲ್ಲಿ ಕುರುಡನಾದವನಿಗೆ ಬೆಳದಿಂಗಳಿನ ಮಹತ್ವವು ಗೊತ್ತಾಗುವುದಿಲ್ಲ. ಕಿವುಡನಾದವನಿಗೆ ಮಂಗಳಕರವಾದ ಶಂಖಧ್ವನಿಯು ಕೇಳಿಸುವುದಿಲ್ಲ. ಮೂಕನಾದವನಿಗೆ ಪುಸ್ತಕದ ಜ್ಞಾನವು ದೊರೆಯುವುದಿಲ್ಲ. ನಪುಂಸಕನಿಗೆ ಕಾಂತೆಯರ ಸಹವಾಸವು ಲಭಿಸುವುದಿಲ್ಲ. ಕೃತಘ್ನರಾದವರಿಗೆ ಬಂಧುತ್ವವು ಹೊಂದಿಕೊಳ್ಳುವುದಿಲ್ಲ. ಬೂದಿಯಲ್ಲಿ ಹಾಕಿದ ಹೋಮದ್ರವ್ಯಗಳಿಂದ ಯಾವ ಪ್ರಯೋಜನವೂ ಇಲ್ಲ. ಜಿಪುಣನಾದವನಿಗೆ ಸಂಪತ್ತಿನಿಂದ ಯಾವ ಉಪಯೋಗವೂ ಇಲ್ಲ. ನೆಗಡಿ ಹಿಡಿದ ಮೂಗುಳ್ಳವರಿಗೆ ಸುಗಂಧದಿಂದ ಲಾಭವೇನಿಲ್ಲ. ಹರಿಭಕ್ತಿಯಿಲ್ಲದವನ ಜೀವಿತವೂ ನಿಸ್ಸಾರವಾದದ್ದು' ಎಂಬ ಸಾರಭೂತವಾದ ನುಡಿಗಳನ್ನು ಅವನು ಆಡುತ್ತಾನೆ.

ಪ್ರಹ್ಲಾದನ ಮಾತುಗಳಲ್ಲಿ ಹುದುಗಿರುವ ಸಾರಸರ್ವಸ್ವವನ್ನು ಮೂಲದಲ್ಲಿರುವಂತೆಯೇ ಓದಿಕೊಂಡಲ್ಲಿ ಅದರಲ್ಲಿನ ಅರ್ಥವ್ಯಾಪ್ತಿಯ ಗಹನತೆ ಕಂಡುಬರುತ್ತದೆ. ತನ್ನ ತಂದೆಯ ಸಮ್ಮುಖದಲ್ಲಿ ಹರಿಭಕ್ತಿಯ ವಿವರಣೆಯನ್ನು ಅರ್ಥಗರ್ಭಿತವಾಗುವಂತೆ ಮನ ಮುಟ್ಟಿಸುವ ಪ್ರಯತ್ನವಿಲ್ಲಿದೆ. ಇದರಲ್ಲಿಯೂ ಕವಿಯ ಪಾಂಡಿತ್ಯ, ಸಹಜ ಪ್ರತಿಭೆಗಳು ವ್ಯಕ್ತವಾಗಿವೆ. ಭಕ್ತಿಯೆಂಬ ರಸವನ್ನು ಶೀಶೆಗಳಲ್ಲಿ ತುಂಬಿ ನೀಡಿದಂತಿರುವ ಕವಿಯ ಸಾಮರ್ಥ್ಯವನ್ನು ಮೆಚ್ಚಿಕೊಳ್ಳಬೇಕಾದದ್ದೇ ಆಗಿದೆ.

## ಭಕ್ತಿಸಿದ್ಧಾಂತ

ಪೋತನ ಕವಿಯು ತಾನು ನಂಬಿದ ಭಕ್ತಿಸಿದ್ಧಾಂತವನ್ನು ಪ್ರಹ್ಲಾದನ ನುಡಿಗಳ ಮೂಲಕ ಹೊರಹಾಕುವಂತಿದೆ. ಇದಕ್ಕೆ ಮತ್ತೊಂದು ನಿದರ್ಶನವನ್ನು ಪೂರಕವಾಗಿ ಗಮನಿಸಬಹುದಾಗಿದೆ. 'ಶ್ರೀಹರಿಯನ್ನು ಪೂಜಿಸುವ ನಿಜವಾದ ಕರಗಳೇ ಕರಗಳು; ನಾರಾಯಣನನ್ನು ಹೊಗಳುವ ನಾಲಗೆಯೆ ನಾಲಗೆ; ಶ್ರೀಪತಿಯನ್ನು ಕಾಣುವ ಕಂಗಳೇ ಕಂಗಳು; ಶೇಷಶಾಯಿಯ ಚರಣಗಳಿಗೆ ನಮಿಸುವ ಶಿರಸ್ಸೇ ಶಿರಸ್ಸು; ಚಕ್ರಧಾರಿಯ ಕತೆಗಳನ್ನು ಕೇಳುವ ಕಿವಿಗಳೇ ಅಸಲಾದ ಕಿವಿಗಳು; ಭಗವಂತನಿಗೆ ಮಾಡುವ ಪ್ರದಕ್ಷಿಣೆಯೇ ನಿಜವಾದ ಪ್ರದಕ್ಷಿಣೆ; ಪುರುಷೋತ್ತಮನಲ್ಲಿ ನೆಟ್ಟ ಬುದ್ಧಿಯೇ ಬುದ್ಧಿ; ಅಂಬುಜಾಕ್ಷನ ಆಲೋಚನೆಯನ್ನು ಮಾಡಿದ ದಿನವೇ ಸುದಿನ; ಚಕ್ರಧರನನ್ನು ಕುರಿತು ವಿವರಿಸುವ

ವಿದ್ಯೆಯೇ ನಿಜವಾದ ವಿದ್ಯೆ; ಗೋವಿಂದನನ್ನು ಕುರಿತು ಬೋಧಿಸುವ ಗುರುವೇ ಶ್ರೇಷ್ಠನಾದ ಗುರು; ವಿಷ್ಣುವನ್ನು ಆರಾಧಿಸಲು ಉಪದೇಶಿಸುವ ತಂದೆಯೇ ದಿಟವಾದ ತಂದೆ. ಹೀಗೆ ಮಾನವ ಶರೀರದಲ್ಲಿನ ಕೈಗಳು, ನಾಲಗೆ, ಕಣ್ಣುಗಳು, ಕಿವಿಗಳು, ಕಾಲು, ಶಿರಸ್ಸು ಮನಸ್ಸು ಮೊದಲಾದ ಸರ್ವಾಂಗಳೂ ಸಹ ಧ್ಯಾನದಲ್ಲಿ ನಿರತವಾಗತಕ್ಕವು' ಎಂಬ ವಿಚಾರವು ಬೋಧಪ್ರದವಾಗಿದೆ.

ಕವಿ ಪೋತನನು ಅಚ್ಯುತನ ಸೇವೆಯನ್ನು ಮಾಡದ ಅವಯವಗಳು ಹೇಗೆ ನಿಷ್ಪ್ರಯೋಜಕವಾದದ್ದೆಂಬ ವಿಚಾರವನ್ನು ಮತ್ತೊಂದು ಸೀಸಪದ್ಯದಲ್ಲಿ ಮನಮುಟ್ಟುವಂತೆ ಹೇಳುತ್ತಾನೆ. 'ಶ್ರೀಪತಿಯ ಸೇವೆ ಮಾಡದ ಶರೀರವು ಶರೀರವಲ್ಲ; ಅದು ಕೇವಲ ಗಾಳಿ ಯಿಂದ ಕೂಡಿದ ಕಮ್ಮಾರನ ತಿದಿಯಂತೆ. ವೈಕುಂಠ ಪತಿಯನ್ನು ಹೊಗಳದ ಬಾಯಿ ಅದು ಬಾಯಿ ಅಲ್ಲ; ಢಮಢಮ ಎಂದು ಧ್ವನಿಮಾಡುವ ಚರ್ಮವಾದ್ಯವಷ್ಟೆ. ಹರಿಪೂಜೆ ಮಾಡದ ಹಸ್ತಗಳು ಹಸ್ತಗಳಲ್ಲ; ಅವು ಕೇವಲ ಮಂದೆಲೆಗಳಿಂದ ನಿರ್ಮಿತವಾದ ದೊನ್ನೆಯ ಹಾಗಷ್ಟೆ. ಕೇಶವನನ್ನು ಕಾಣದಿರುವ ಕಣ್ಣುಗಳು ಕಣ್ಣುಗಳೇ ಅಲ್ಲ; ಅವು ಶರೀರವೆಂಬ ಗೋಡೆಯಲ್ಲಿ ಕೊರೆದ ಕನ್ನ ಮಾತ್ರವಾದೀತಷ್ಟೆ. ಆ ಜಗನ್ನಾಥನನ್ನು ಆಲೋಚಿಸದ ಜನ್ಮವು ಜನ್ಮವಲ್ಲ; ಅದು ಕೇವಲ ನೀರಿನ ಗುಳ್ಳೆ ಮಾತ್ರವೆಂದೇ ಹೇಳ ಬೇಕು. ವಿಷ್ಣುಭಕ್ತಿಯಿಲ್ಲದ ಪಂಡಿತನು ಪಂಡಿತನಲ್ಲ; ಅವನು ಕೇವಲ ದ್ವಿಪಾದ ಪಶು ಎಂದು ಭಾವಿಸಬೇಕು'.

ಪ್ರಹ್ಲಾದನ ಭಕ್ತಿಬೋಧನೆಯು ಇಷ್ಟುಮಾತ್ರಕ್ಕೆ ಮುಗಿಯಲಿಲ್ಲ. ಬ್ರಹ್ಮನಂತಹವನಿ ಗಾದರೂ ಸಹ ಭವಬಂಧನವೆಂಬ ಕಾರ್ಮೋಡದಿಂದ ಬಿಡಿಸಿಕೊಳ್ಳಬೇಕಾದರೆ ಭಗವಂತನ ಧ್ಯಾನವೆಂಬ ಪ್ರಭಂಜನವು ಅಗತ್ಯವಾದದ್ದು. ಈ ರೀತಿಯ ಗಾಢವಾದ ರಹಸ್ಯವನ್ನು ಮಾರ್ಮಿಕವಾದ ರೀತಿಯಲ್ಲಿ ತನ್ನ ಪಾಂಡಿತ್ಯಪೂರ್ಣವಾದ ಶೈಲಿಯಲ್ಲಿ ಕವಿಯು ಮತ್ತೊಂದು ಸೀಸಪದ್ಯದಲ್ಲಿ ಹೇಳುತ್ತಾನೆ.

'ಚಕ್ರಧಾರಿಯಾದ ಭಗವಂತನ ಸೇವೆಗೈಯದಿದ್ದಲ್ಲಿ ಸಂಸಾರ ಬಂಧನಗಳು ಕಳಚ ಲಾರವು. ಅದೇ ರೀತಿ ಬಿರುಗಾಳಿ ಬೀಸದೆ ಕಾರ್ಮೋಡಗಳ ಸಮೂಹವು ಕರಗಲು ಸಾಧ್ಯವಾಗುವುದಿಲ್ಲ. ವಿಷ್ಣು ಸೇವಾಮೃತವೆಂಬ ವರ್ಷಧಾರೆಯಿಲ್ಲದೆ ತಾಪತ್ರಯಗಳೆಂಬ ದಾವಾಗ್ನಿಯು ಆರುವುದಿಲ್ಲ. ಕಾಡಿನಲ್ಲಿ ಉರಿಯುವ ಕಾಳ್ಗಿಚ್ಚಿಗೂ ಅದು ಆರಬೇಕಾದರೆ ಮಳೆಯು ಅತ್ಯಗತ್ಯ. ಹರಿಚಿಂತನೆಯಿಂದ ಕೂಡಿದವನ ಪಾಪಗಳು ಪಟಪಟನೆ ಹಾರಿ ಹೋಗುತ್ತವೆ. ಅಂತೆಯೇ ಅಮೋಘವಾದ ಜಲರಾಶಿಗೆ ಸಮುದ್ರದಲ್ಲಿನ ಬಡಬಾಗ್ನಿಯು ಸಹ ಆರಿಹೋಗುತ್ತದೆ. ಕೇಶವನ ನಾಮಸ್ಮರಣೆಯಿಂದ ನಮ್ಮನ್ನು ಸುತ್ತಿಕೊಂಡಿರುವ ಆಪತ್ತುಗಳು ತೊಲಗಿ ಹೋಗುತ್ತವೆ. ಭಾಸ್ಕರನ ಉಜ್ವಲವಾದ ಕಿರಣಗಳಿಗೆ ಕತ್ತಲನ್ನು ಓಡಿಸುವ ಶಕ್ತಿಯಿದೆ. ಸಾರಾಂಶದಲ್ಲಿ ಹೇಳುವುದಾದರೆ ಹರಿಭಕ್ತಿಯೆಂಬ ಅಂಜನವಿಲ್ಲದೆ ನಿರ್ಮಲವಾದ ನಿರುಪಮಾನವಾದ ಪುನರ್ಜನ್ಮವಿಲ್ಲದ ಮುಕ್ತಿಯೆಂಬ ತವನಿಧಿಯನ್ನು

ಎಟುಕಿಸಿಕೊಳ್ಳುವುದು ಯಾರಿಗಾದರೂ ಅಸಾಧ್ಯವಾದದ್ದೆ ಆಗಿದೆ. ಆ ಬ್ರಹ್ಮನಿಗೂ ಸಹ ಇದು ಬಿಟ್ಟು ಬೇರೆ ದಾರಿಯಿಲ್ಲ'.

ಪ್ರಹ್ಲಾದನು ಮೇಲಿನ ರೀತಿಯಲ್ಲಿ ಹಿರಣ್ಯಕಶ್ಯಪುವಿನ ಮುಂದೆ ಭಗವದ್ಭಕ್ತಿಯ ವಿಚಾರಗಳನ್ನು ಹೂರಣದಂತೆ ತುಂಬಿಟ್ಟಿದ್ದಾನೆ. ಇದನ್ನು ಕೇಳಿದ ಹಿರಣ್ಯಕಶಿಪು ಉರಿದುರಿದು ಬೀಳುತ್ತಾನೆ. ತನ್ನ ಮಗನನ್ನು ಹೇಗಾದರೂ ಮಾಡಿ ತನ್ನ ಮಾರ್ಗಕ್ಕೆ ತರಬೇಕೆಂದು ನಾನಾವಿಧವಾಗಿ ಪ್ರಯತ್ನಿಸುತ್ತಾನೆ. ಹೆದರಿಸುತ್ತಾನೆ, ಬೆದರಿಸುತ್ತಾನೆ, ಧಿಕ್ಕರಿಸುತ್ತಾನೆ, ಬಾಧಿಸುತ್ತಾನೆ. ಅನೇಕ ರೀತಿಯಲ್ಲಿ ಹಿಂಸಿಸುತ್ತಾನೆ. ಯಾವ ರೀತಿಯ ಘೋರವಾದ ಹಿಂಸೆಗಳಿಂದಲೂ ಅವನಿಗೆ ಎಳ್ಳಷ್ಟೂ ತೊಂದರೆಯಾಗಲಿಲ್ಲ. ಕೂದಲೆಳೆಯೂ ಕೊಂಕಲು ಸಾಧ್ಯವಾಗುವುದಿಲ್ಲ.

ತಂದೆ ಮಕ್ಕಳ ಸಂಭಾಷಣೆಯ ನಡುವೆ 'ದಿಕ್ಕು' ಎಂಬ ಮಾತನ್ನು ಸಂದರ್ಭಾನುಸಾರ ವಾಗಿ ಬೇರೆ ಬೇರೆ ಅರ್ಥಗಳಲ್ಲಿ ಬಳಸಲಾಗಿರುತ್ತದೆ. ಮಗನಿಗೆ ತಂದೆಯಾದವನ ವಿನಾ ಬೇರೆ ಯಾರೂ ದಿಕ್ಕಿಲ್ಲವೆಂದು ಹಿರಣ್ಯಕಶಿಪು ಆಡಿದ ಮಾತಿಗೆ ಪ್ರಹ್ಲಾದನು, 'ಅಚ್ಯುತನು ಎಲ್ಲರಿಗೂ ಎಲ್ಲದಕ್ಕೂ ದಿಕ್ಕಾಗಿದ್ದಾನೆ' ಎಂಬ ವಿಚಾರವನ್ನು ಮನವರಿಕೆ ಮಾಡಿಕೊಡುತ್ತಾನೆ.

ಲೋಕದಲ್ಲಿ ಬಲವಂತರಾದವರಿಗೆ, ಬಲಹೀನರಾದವರಿಗೆ ಯಾರು ಬಲವಾಗಿರು ವನೋ, ತನ್ನ ತಂದೆಗೂ ತನಗೂ ಬ್ರಹ್ಮಾದಿದೇವತೆಗಳಿಗೂ ಯಾರು ಬಲವಾಗಿರುವನೋ ಸಮಸ್ತ ಜೀವಜಂತುಗಳಿಗೆ ಯಾರು ಬಲವಾಗಿರುವನೋ ಅವನು ಪರಾತ್ಪರ ಪ್ರಭುವಾಗಿ ದ್ದಾನೆಂಬ ನುಡಿಗಳು ಜಗದಾಧಾರನಾಗಿರುವವನ ಜಗದೋದ್ಧಾರಕ ನೀತಿಯನ್ನು ಪ್ರತಿ ಪಾದಿಸುತ್ತದೆ.

ತಂದೆ-ಮಕ್ಕಳ ಸಂಭಾಷಣೆಯು ವಾದ-ವಿವಾದದ ರೀತಿ ಸಾಗುತ್ತಿರುತ್ತವೆ. ಎಲ್ಲಿಯೂ ಇಲ್ಲವೆಂಬ ತಂದೆಯ ಮಾತನ್ನು ಎಲ್ಲೆಲ್ಲಿಯೂ ಇರುವನೆಂಬ ಸಾರ್ವತ್ರಿಕತೆಯ ಮೂಲಕ ಮಗನು ಸ್ಥಿರಪಡಿಸುತ್ತಾನೆ.

*ఇందుగలడందు లేడని*
*సందేహము వలదు చక్రి సర్వోపగతుం/*
*డెందెందు వెదకి చూచిన*
*అందందే కలడు దానవాగ్రణి వింటే//*

- ಇವರಿಬ್ಬರ ದೂಷಣೆ ಪ್ರತಿದೂಷಣೆಗಳು ಅತಿರೇಕಕ್ಕೆ ಹೋಗುತ್ತವೆ. ಆ ಸಮಯದಲ್ಲಿ ಮಹಾವಿಷ್ಣುವು ನರಸಿಂಹರೂಪದಲ್ಲಿ ಚರಾಚರ ಜೀವಿಗಳಲ್ಲೆಲ್ಲ ತುಂಬಿ ಕೊಂಡಿರುತ್ತಾನೆ. ದಿವ್ಯಪ್ರಭಾವದಿಂದ ಎಲ್ಲ ಪ್ರದೇಶ ಎಲ್ಲ ವಸ್ತುಗಳಲ್ಲಿ ಅಣುಅಣುವಾಗಿ ಅಚ್ಯುತನು ನರಸಿಂಹ ಸ್ವರೂಪಿಯಾಗಿ ಅವತರಿಸುತ್ತಾನೆ.

## ಕಂಭ ಪ್ರಹಾರ

ಶ್ರೀಹರಿಯ ಸರ್ವಾಂತರ್ಯಾಮಿ ಸ್ವಭಾವವನ್ನು ಪ್ರಹ್ಲಾದನ ಮಾತುಗಳಿಂದ ಕೇಳಿದ ಹಿರಣ್ಯಕಶಿಪು ಅವನನ್ನು ಸಭಾಭವನದ ಕಂಭದಲ್ಲಿ ಕಾಣಿಸಬೇಕೆಂಬ ಅಭಿಲಾಷೆಯನ್ನು ಹೊಂದುತ್ತಾನೆ. ಭಗವಂತನನ್ನು ತನಗೆ ಅಲ್ಲಿ ತೋರಿಸಬೇಕೆಂದೂ, ಹಾಗೇನಾದರೂ ಕಾಣಲಾಗದಿದ್ದರೆ ಪ್ರಹ್ಲಾದನ ಶಿರಸ್ಸನ್ನು ಅವನ ದೇಹದಿಂದ ಬೇರ್ಪಡಿಸಲಾಗುವುದೆಂದೂ ಹೆದರಿಸುತ್ತಾನೆ. ನಂತರ ಆ ದೈತ್ಯೇಶ್ವರನು, ಭಯಂಕರವಾದ ತೇಜಸ್ಸಿನಿಂದ ಕೂಡಿ ಜೀವ ಕೋಟಿಗೆ ನೋಡಲು ಅಸಾಧ್ಯವಾದ ರೀತಿಯಲ್ಲಿ ಆ ಸ್ವಾಮಿಯು ಪ್ರತ್ಯಕ್ಷನಾಗಲು ಸಂಭ್ರಮಿಸುತ್ತಿದ್ದ ಸಭಾಭವನದ ಕಂಭವನ್ನು ತನ್ನ ಅಂಗೈನಿಂದಲೇ ಬಲವಾಗಿ ಹೊಡೆಯುತ್ತಾನೆ.

ಶ್ರೀಹರಿಯೊಂದಿಗೆ ಶತ್ರುತ್ವವನ್ನು ಬೆಳೆಸಿಕೊಂಡಿದ್ದ ಹಿರಣ್ಯಕಶಿಪುವಿನ ಮನಸ್ಸಿನಲ್ಲಿ ದ್ವೇಷದ ಜ್ವಾಲೆಯು ಧಗಧಗನೆ ಉರಿಯುತ್ತಿರುತ್ತದೆ. ಇದರಿಂದಾಗಿ ಅವನ ವಿವೇಕ, ವಿಚಾರವಂತಿಕೆಗಳು ಸುಟ್ಟುಹೋಗಿರುತ್ತದೆ. ಆದರೆ ಅವನಿಗೆ ಧೈರ್ಯ, ಗಾಂಭೀರ್ಯಗಳು ಮಾತ್ರವೇ ಬಂಡವಾಳವಾಗಿ ಅದರಿಂದಾಗಿ ಮನಸ್ಥೈರ್ಯವು ಇಮ್ಮಡಿಸಿರುತ್ತದೆ. ಹೃದಯ ಚಂಚಲತೆಯ ಕಾರಣ ಅವನಲ್ಲಿ ತಾಮಸ ಗುಣವು ವಿಜೃಂಭಿಸಿರುತ್ತದೆ.

ಹರಿಯನ್ನು ತೋರಿಸಲು ಪ್ರಹ್ಲಾದನಿಗೆ ಸವಾಲನ್ನು ಹಾಕಿ ಅಂಗೈನಿಂದ ಕಂಭವನ್ನು ಹೊಡೆದ ರಭಸಕ್ಕೆ ಅವನ ಕೈಯಲ್ಲಿನ ಬಂಗಾರದ ಮಣಿಖಚಿತವಾದ ಕಂಕಣವು ಗಣಗಣ ಧ್ವನಿಮಾಡುತ್ತದೆ. ದಿಗ್ಗಜಗಳ ದಂತಗಳನ್ನು ತುಂಡರಿಸುವ ಹಾಗೆ ಹೊಡೆದ ಪೆಟ್ಟಿನಿಂದ ದಶದಿಕ್ಕುಗಳಲ್ಲಿ ಜ್ವಾಲೆಯ ಕಿಡಿಗಳು ಚಿಮ್ಮುತ್ತ ಚಟಪಟನೆ ಸದ್ದುಮಾಡುತ್ತಿವೆ. ಪ್ರಳಯ ಕಾಲವುಂಟಾದಾಗ ಅತಿವೇಗವಾಗಿ ಬೀಸುವ ಗಾಳಿಯಿಂದೆಂಬಂತೆ ಗುಡುಗಿನ ಸಪ್ಪಳದಿಂದ ಧಾವಿಸುವ ಮೋಡಗಳಿಂದ ಮೂಡುವ ಸಿಡಿಲಿನ ಭಯಂಕರ ಧ್ವನಿಯ ಹಾಗೆ ಚಟಚಟ ಪಟಪಟವೆಂಬ ಶಬ್ದವು ವಿಪರೀತವಾಗಿ ಮೇಲೆ ನೆಗೆದು ಆಕಾಶವನ್ನೆಲ್ಲ ಹರಡಿಕೊಂಡು ಕರ್ಣಕಠೋರವಾಗಿ ಮೊಳಗುತ್ತಿದೆ.

## ಕಂಭೋದ್ಭವ ನರಸಿಂಹ

ಬ್ರಹ್ಮ, ಇಂದ್ರ, ವರುಣ, ವಾಯು, ಅಗ್ನಿ-ಮೊದಲಾದ ದೇವತೆಗಳೊಂದಿಗೆ ಸಮಸ್ತ ಜಂತುಗಳಿಂದ ಕೂಡಿದ ಬ್ರಹ್ಮಾಂಡಭಾಂಡವು ಒಮ್ಮೆಲೆ ಫಟಾರನೆ ಒಡೆದಂತಾಗುತ್ತದೆ. ಮಹಾಕಂಭವು ತುಂಡು ತುಂಡಾಗಿದೆ. ಅದರಿಂದ ದೇದೀಪ್ಯಮಾನವಾದ ದಿವ್ಯತೇಜಸ್ಸಿನಿಂದ ಕೂಡಿದ ನರಸಿಂಹರೂಪವು ಆವಿರ್ಭವಿಸುತ್ತದೆ.

ದೈತ್ಯೇಶ್ವರನ ಹೊಡೆತದಿಂದ ಹೊರಮೂಡಿಬಂದ ನರಸಿಂಹಸ್ವಾಮಿಯ ವರ್ಣನೆ ಪೋತನನ ಭಾಗವತದಲ್ಲಿ ವಿವರ ವಿವರವಾಗಿರುವುದನ್ನು ನೋಡಬಹುದು. ಆತನ ಪಾದಗಳು ಚಕ್ರ, ಚಾಪ, ಮೀನದಂತಹ ಶುಭಚಿಹ್ನೆಗಳಿಂದ ಕೂಡಿ ಪದ್ಮಗಳ ಹಾಗೆ

ಶೋಭಿಸುತ್ತಿವೆ. ಪಾದಚಲನೆಯ ವೇಗ ಮತ್ತು ಭಾರಕ್ಕೆ ಭೂಮಿಯನ್ನು ಹೊತ್ತ ಅಷ್ಟದಿಗ್ಗಜಗಳು, ಆದಿಶೇಷ, ಕುಲಪರ್ವತಗಳು, ಕೂರ್ಮರಾಜರೇ ಮೊದಲಾದವರು ಅಣಗಿಹೋದಂತಾಗಿದ್ದಾರೆ.

ಉಗ್ರಮೂರ್ತಿಯಾದ ನರಸಿಂಹನ ತೊಡೆಗಳು ಕ್ಷೀರಸಮುದ್ರದಲ್ಲಿ ಹುಟ್ಟಿದ ಐರಾವತ ಬೆಟ್ಟಗಳ ಹಾಗೆ ಬಲಿತು ಬಲಿಷ್ಠವಾಗಿವೆ. ಮಣಿಗಳಿಂದ ಅಲಂಕರಿಸಿದ ಮುತ್ತಿನ ಒಡ್ಯಾಣವು ನಡುವಿನ ಸುತ್ತಲೂ ಪೀತಾಂಬರವನ್ನು ಭದ್ರವಾಗಿ ಬಿಗಿದಿದೆ. ಅದರ ಧ್ವನಿಯು ಮೊಳಗುವಂತಿದೆ. ನಾಭಿಯ ವರ್ಣನೆ ಇಲ್ಲಿ ಸೊಗಸಾಗಿರುವುದು ಕಂಡುಬರುತ್ತದೆ. ಅದು ಆಕಾಶಗಂಗೆಯ ನದಿಯಲ್ಲಿ ಉಂಟಾಗುವ ಸುಳಿಯಂತಿದೆ. ಅದರಿಂದುಂಟಾದ ಸರಸ್ಸಿನಂತೆ ಗಂಭೀರವಾಗಿ ಕಾಣುತ್ತಿದೆ. ನರಸಿಂಹಸ್ವಾಮಿಯ ನಡುವು ಹಿಡಿಯಲ್ಲಿ ಹಿಡಿಯು ವಷ್ಟಾಗಿದ್ದು ನಿಗಿನಿಗಿ ಹೊಳೆಯುತ್ತಿದೆ. ಆತನ ವಕ್ಷಸ್ಥಲವು ದೊಡ್ಡಬೆಟ್ಟದ ಹಾಗೆ ಅತಿ ಕಠಿಣವಾಗಿಯೂ, ವಿಶಾಲವಾಗಿಯೂ ಶೋಭಿಸುತ್ತಿದೆ.

ಮಹೋನ್ನತವಾದ ಪರ್ವತ ಶಿಖರಗಳನ್ನು ಹೋಲುತ್ತಿರುವ ಆತನ ಬಾಹುಗಳು ಶಂಖ, ಚಕ್ರ, ಗದೆ, ಖಡ್ಗ, ಕುಂತ, ತೋಮರಾದಿ ವಿವಿಧ ಆಯುಧಗಳಿಂದ ತುಂಬಿಕೊಂಡಿವೆ. ಎಣಿಕೆಗೆ ಮೀರಿದ ಬಾಹುಗಳು ವೀರರಸದಿಂದ ಕೂಡಿದ ಸಾಗರಕ್ಕೆ ಅಣೆಕಟ್ಟನ್ನು ಕಟ್ಟಿದಂತೆ ಕಂಡುಬರುತ್ತಿವೆ. ಅವು ಪುಷ್ಪಮಾಲಿಕೆಗಳಿಂದ ವಿರಾಜಿಸುತ್ತಿವೆ. ಮನೋಹರವಾದ ಹಾರಗಳು, ಭುಜಕೀರ್ತಿಗಳು, ಕಂಕಣ, ಮಕರ ಕುಂಡಲಗಳು, ಕಿರೀಟಗಳಿಂದ ಕೂಡಿದ ಸ್ವಾಮಿಯು ಧಗಧಗನೆ ಉರಿಯುವಂತೆ ಕಂಡುಬರುತ್ತಿದ್ದಾನೆ. ಆತನ ಕಂಠವು ಮೂರುರೇಖೆಗಳಿಂದ ಪ್ರಕಾಶಿಸುತ್ತಿದ್ದು ಪರ್ವತ ಶಿಖರದಂತೆ ದೃಢವಾಗಿ ಇರುವುದಾಗಿದೆ. ಪಾದದಿಂದ ಕಂಠದವರೆಗಿನ ವರ್ಣನೆಯ ನಂತರ ಮುಂದಿನ ಮಾತುಗಳಲ್ಲಿ ಕವಿಯು ಆತನ ಮೊಗದ ವರ್ಣನೆಗೆ ಮಹತ್ವವನ್ನಿತ್ತಿದ್ದಾನೆ.

ಇಂದ್ರಧನುಸ್ಸಿನಂತೆ ಬಾಗಿರುವ ಕಣ್ಣಿನ ಪಾಪೆಗಳು (ಕನುಬೊಮಲು) ಮುರಿದು ಕೊಂಡು ಮುಖವು ಭಯಂಕರವಾಗಿ ಕಾಣುತ್ತಿದೆ. ಆತನ ಸುಂದರವಾದ ಕೆನ್ನೆಗಳು ಗಂಡುಶಿಲೆಯಂತೆ ಅತಿಕಠಿಣವಾಗಿವೆಯಾದರೂ ಕಮನೀಯವಾಗಿ ಕಾಣುತ್ತಿವೆ. ಸ್ವಾಮಿಯ ದೀರ್ಘವಾದ ಜಡೆಗಳು ಸಂಧ್ಯಾಸಮಯದಲ್ಲಿ ಹೊರಹೊಮ್ಮುವ ಮೇಘಮಾಲಿಕೆಗಳಂತೆ ಮಿರುಗುತ್ತಿವೆ. ಅವು ಆ ಕಡೆ ಈ ಕಡೆ ವೇಗವಾಗಿ ಆಡುತ್ತಿರುವುದರಿಂದ ಉಂಟಾಗುತ್ತಿರುವ ಗಾಳಿಯ ರಭಸಕ್ಕೆ ಆಕಾಶದಲ್ಲಿ ಹಾರಾಡುತ್ತಿರುವ ವಿಮಾನಗಳು ವೈಮಾನಿಕರೊಂದಿಗೆ ಉಯ್ಯಾಲೆ ಆಡುವ ಹಾಗಾಗುತ್ತಿದೆ. ಆತನ ಕಿವಿಗಳು ನಿಶ್ಚಲತೆಯಿಂದಿದ್ದು ಶಂಖಗಳ ರೀತಿ ಪರಿಶುಭ್ರವಾಗಿವೆ. ಮಂದರಪರ್ವತವನ್ನು ಕಡೆಗೋಲಾಗಿ ಮಾಡಿಕೊಂಡು ಕ್ಷೀರ ಸಮುದ್ರವನ್ನು ಕಡೆದಾಗ ಗಿರಗಿರನೆ ತಿರುಗುತ್ತಿರುವ ಅದರ ವೇಗಕ್ಕೆ ಸಮುದ್ರದ ಅಲೆಗಳು ಜಗಸವನ್ನೆಲ್ಲ ಆವರಿಸಿಕೊಂಡು ಅದರಿಂದ ಉದ್ಭವವಾದ ಹೇರಳ ನೊರೆಯಂತೆ ಕೇಸರಗಳು ನಾಸವಾಗುತ್ತಿವೆ. ಸ್ವಾಮಿಯ ಶರೀರದ ಮೇಲಿನ ರೋಮರಾಶಿಯು ಪೂರ್ಣಹುಣ್ಣಿಮೆಯ

ಚಂದ್ರನ ಬೆಳದಿಂಗಳ ಕಿರಣಗಳಂತೆ ಬೆಳಗುತ್ತಿವೆ. ನರಸಿಂಹ ಸ್ವಾಮಿಯ ಆಪಾದಮಸ್ತಕ ವಿವರಣೆ ಪೋತನನ ಕಾವ್ಯದಲ್ಲಿ ಸುಂದರವಾದ ನುಡಿರೂಪದಂತೆ ಕಂಡುಬಂದಿವೆ. ಆತನ ಪದಸಂಪತ್ತಿಗೆ, ಕಣ್ಣಿಗೆ ಕಟ್ಟುವ ಹಾಗೆ ಚಿತ್ರಿಸುವ ಕುಶಲತೆಗೆ ಇದು ನಿದರ್ಶನವೆಂಬಂತಿದೆ.

ನರಸಿಂಹಸ್ವಾಮಿಯ ಸಿಂಹಗರ್ಜನೆಗೆ ಕುಮುದ, ಸುಪ್ರತೀಕ, ವಾಮನ, ಐರಾವಣ, ಸಾರ್ವಭೌಮವೇ ಮೊದಲಾದ ದಿಗ್ಗಜಗಳ ಕಿವಿಗಳು ತೂತಾಗಿ ಹೋಗುತ್ತಿವೆ. ಆತನ ದಿವ್ಯವಾದ ದೇಹವು ಬೆಳ್ಳಿಯ ಬೆಟ್ಟದಂತೆ ಪ್ರಕಾಶಿಸುತ್ತಿದ್ದು ನೋಡಲು ಅಸಾಧ್ಯವಾದ ಕಾಂತಿಯಿಂದ ಬೆಳಗುತ್ತಿದೆ. ಆ ಶರೀರಕಾಂತಿಯು ಶತ್ರುರಾಕ್ಷಸರ ಗರ್ವಾಂಧಕಾರವನ್ನು ಸೀಳಿ ಹಾಕುತ್ತಿದೆ. ಇಷ್ಟೆಲ್ಲ ಭಯಭೀತಿಗಳನ್ನು, ಸಂಭ್ರಮಾಶ್ಚರ್ಯಗಳನ್ನು ಉಂಟು ಮಾಡುವ ಹಾಗಿದ್ದ ಆತನ ಆಕಾರವು ಪ್ರಹ್ಲಾದನಿಗೆ ಸಂತೋಷಕಾರಕವಾಗಿದ್ದರೆ ಹಿರಣ್ಯಕಶ್ಯಪನಿಗೆ ಅದು ಸಂತಾಪಕಾರಕವಾಗಿರುವುದಾಗಿದೆ. ನರಕೇಸರಿಯ ಅಂತರಂಗವು ಕರುಣಾರಸದಿಂದಲೂ, ಬಹಿರಂಗವು ವೀರರಸದಿಂದಲೂ ವಿರಾಜಿಸುತ್ತಿದೆ. ಕಾವ್ಯದಲ್ಲಿರಬೇಕಾದ ರಸಗಳ ಬಗ್ಗೆ ಕವಿಯು ಹೊಂದಿರುವ ವಿವೇಚನಾ ಸಾಮರ್ಥ್ಯವನ್ನು ಇದು ತಿಳಿಸುವಂತಿದೆ.

ನರಸಿಂಹಸ್ವಾಮಿಯು ದಿವ್ಯಪ್ರಭಾವದಿಂದ ಕೂಡಿದವನಾಗಿ ಸಭಾಭವನದ ಮಧ್ಯದ ಸ್ತಂಭದಿಂದ ಆವಿರ್ಭವಿಸಿದ್ದಾನೆ. ಅದ್ಭುತವಾದ ಈತನ ರೂಪವನ್ನು ಕಂಡ ಹಿರಣ್ಯಕಶ್ಯಪನು ನಿಶ್ಚೇಷ್ಟಿತನಾಗಿ ಹೀಗೆನ್ನುತ್ತಿದ್ದಾನೆ -

*ನರಮೂರ್ತಿಗಾದು ಕೇವಲ*
*ಹರಿಮೂರ್ತಿಯುನ್‌ಗಾದು ಮಾನವಾಕಾರಮುನ್‌ಕೇ*
*ಸರಿಯಾಕಾರಮುನುನ್ನದಿ*
*ಹರಿಮಾಯಾರಚಿತಮಗು ಯಥಾರ್ಥಮು ಚೂಡನ್*

- ಇದು ನರರೂಪವೂ ಅಲ್ಲ, ಸಿಂಹರೂಪವೂ ಅಲ್ಲ. ಯಥಾರ್ಥದಲ್ಲಿ ಇದು ಮಾನವಾಕಾರ ಸಿಂಹಾಕಾರಗಳೆರಡನ್ನೂ ಸೇರಿಸಿ ಏರ್ಪಡಿಸಿರುವ ಶ್ರೀಹರಿಯ ಮಾಯಾರೂಪ. ಇಲ್ಲದಿದ್ದಲ್ಲಿ ಇಂಥ ರೂಪವು ಎಲ್ಲಿಯಾದರೂ ಕಂಡುಬರುವುದೆ?

## ಉರಿಮೊಗ

ನರಸಿಂಹನ ಮೊಗವು ಗಾಳಿಗೆ ಅಲುಗಾಡುವ ಪಾರಿಜಾತ ಪಲ್ಲವದ ಹಾಗೆ ರಾಗರಂಜಿತವಾಗಿ, ಕೋಪಾವೇಶದಿಂದ ಉರಿಮುಖವಾಗಿದೆ. ಶರತ್ಕಾಲದ ಮೋಡಗಳ ನಡುವೆ ಮಿನುಗುವ ಮಿಂಚಿನ ಬಳ್ಳಿಯಂತೆ ಆತನ ಕೋರೆದಾಡೆಗಳು ತಕಪಕನೆ ಹೊಳೆಯುತ್ತಿವೆ. ಪ್ರಳಯಕಾಲದಲ್ಲಿ ಸಮಸ್ತಲೋಕಗಳನ್ನು ಕಬಳಿಸಲು ರಭಸವಾಗಿ ಧಾವಿಸುವ ಅಗ್ನಿಜ್ವಾಲೆಯ ಹಾಗೆ ಸ್ವಾಮಿಯ ನಾಲಗೆಯು ಕೆಂಡದಂತಿದ್ದು ಭಯವನ್ನುಂಟು ಮಾಡುತ್ತಿದೆ. ಆತನ ನಾಸಿಕದ ರಂಧ್ರಗಳು ಮೇರು-ಮಂದರ ಪರ್ವತದ ಗುಹೆಗಳ ಹಾಗೆ ವಿಸ್ತಾರವಾಗಿದೆ.

ಅವುಗಳಿಂದ ಹೊರಹೊಮ್ಮುತ್ತಿರುವ ನಿಟ್ಟುಸಿರನ್ನು ತಡೆದುಕೊಳ್ಳಲಾಗದೆ ಸಪ್ತಸಾಗರಗಳು ಅಲ್ಲಕಲ್ಲೋಲವಾಗಿ ಸುಡಸುಡ ಕಾಯುತ್ತಿದೆ. ಪ್ರಭುವಿನ ಕಂಗಳಲ್ಲಿ ಮೂಡಣದ ಗಿರಿಶಿಖರದ ಮೇಲೆ ಪ್ರಕಾಶಿಸುವ ತರಣಿಮಂಡಲದ ಕಿರಣಗಳ ತೇಜಸ್ಸಿನ ಪ್ರತಿರೂಪವಿದೆ. ಆ ಕಣ್ಣು ಗಳ ಅಂಚಿನಿಂದ ಹೊರಹೊಮ್ಮುತ್ತಿರುವ ಕಾಂತಿಯ ಕಾರಣದಿಂದಾಗಿ ಗ್ರಹಮಂಡಲಗಳು, ನಕ್ಷತ್ರಮಂಡಲಗಳು ಕಕ್ಕಾಬಿಕ್ಕಿಯಾಗಿ ಬುಡಮೇಲಾಗಿವೆ. ಗ್ರಹ, ತಾರಾಮಂಡಲಗಳು ಸ್ವಾಮಿಯ ಅಧೀನವೆಂಬ ಭಾವನೆ ಇಲ್ಲಿನ ವಿವರಣೆಯ ಹಿನ್ನೆಲೆಯಲ್ಲಿರುವುದು ಗಮನಾರ್ಹ ವಾಗಿದೆ.

## ನಖ ವರ್ಣನೆ

ಅಚ್ಯುತನಾದ ಶ್ರೀಮಹಾವಿಷ್ಣುವು ಧರಿಸಿರುವ ಆಯುಧಗಳಲ್ಲಿ ಸುದರ್ಶನದ್ದೆ ಪ್ರಮುಖ ಪಾತ್ರವೆನ್ನಬೇಕು. ಅದು ದಾನವರ ಕಣ್ಣುಗಳಿಗೆ ಪ್ರಳಯಕಾಲದ ಬೆಂಕಿಯಂತಿರುವು ದೆಂಬ ವಿವರಣೆಯೂ ನಮ್ಮಲ್ಲಿದೆ. ಆದರೆ ವಿಷ್ಣುವಿನ ನಾಲ್ಕನೆ ಅವತಾರವಾದ ನರಸಿಂಹನ ಕೈಗಳಿಗೆ ಶೋಭೆ ತರುವುದು ಅತನ ಬಲಿಷ್ಠವಾದ ಉಗುರುಗಳಿಗೆ ಮಾತ್ರವೇ ಸಾಧ್ಯವೆನ್ನಬೇಕು.

ಆಳ್ವಾರರಲ್ಲಿ ಹನ್ನೆರಡನೆಯವರಾದ ತಿರುಮಂಗೈ ಅವರು ಮತ್ತು ದ್ವೈತಸಿದ್ಧಾಂತ ಪ್ರತಿಪಾದಕರಾದ ಆಚಾರ್ಯ ಶಿರೋಮಣಿ ಶ್ರೀಮಧ್ವಾಚಾರ್ಯರು ನಖಗಳಿಗೆ ಪ್ರಾತಿನಿಧ್ಯ ನೀಡಿ ಅದನ್ನು ವರ್ಣಿಸಿರುವ ಸಾಹಿತ್ಯವು ವಿಶಿಷ್ಟವಾಗಿದೆ.

ಪೋತನ ಮಹಾಕವಿಯೂ ಸಹ ಭಗವಂತನ ನಖಗಳ ವಿವರಣೆಯಲ್ಲಿ ವಿಶೇಷ ಆಸ್ಥೆ ವಹಿಸಿರುವುದು ಆತನ ಭಾಗವತದಿಂದ ವ್ಯಕ್ತವಾಗುತ್ತದೆ. ನರಸಿಂಹಸ್ವಾಮಿಯ ಉಗುರುಗಳು ದಾನವೇಂದ್ರನ ವಕ್ಷಕವಾಟವನ್ನು ಒಡೆಯುವ ಸಮಯದಲ್ಲಿ ಬಲವಾದ ಕೊಡಲಿಯಂತೆ ಪ್ರಕಾಶಿಸುತ್ತಿತ್ತು. ದೈವವಿರೋಧಿಯ ಹೃದಯ ಪಂಕಜವನ್ನು ಬೇಧಿಸುವ ಸಂದರ್ಭದಲ್ಲಿ ಆತನ ಉಗುರುಗಳು ನೆಲವನ್ನು ಅಗೆಯುವ ಪಿಕಾಶಿಯಂತೆ ಕಾಣಿಸುತ್ತಿತ್ತು. ಅಮರವಿರೋಧಿಯಾದವನ ರಕ್ತನಾಳಗಳನ್ನು ಕತ್ತರಿಸುವ ಸಮಯದಲ್ಲಿ ಆ ಉಗುರುಗಳು ಬಲಿಷ್ಠವಾದ ಕುಡುಗೋಲುಗಳ ಹಾಗೆ ಕಂಗೊಳಿಸುತ್ತಿತ್ತು. ಅಸುರೇಶ್ವರನ ಕರುಳುಗಳನ್ನು ಬೇರ್ಪಡಿಸುವ ಸಮಯದಲ್ಲಿ ಭಗವಂತನ ಉಗುರುಗಳು ಗರಗಸದಂತೆ ರಾರಾಜಿಸುತ್ತಿತ್ತು. ತನ್ನ ತೊಡೆಗಳ ಮೇಲೆ ಮಲಗಿದ್ದ ರಾಕ್ಷಸನನ್ನು ಯಾವ ರೀತಿಯ ಇತರ ಶಸ್ತ್ರಾಸ್ತ್ರಗಳನ್ನೂ ಉಪಯೋಗಿಸದೆ ತನ್ನ ನಖಗಳಿಂದಲೇ ಸಂಹರಿಸಿದ್ದು ನರಸಿಂಹದೇವನ ವಿಚಿತ್ರವಾದ ವಿಭಿನ್ನವಾದ ರಣವಿಜಯವನ್ನು ಸಾಧಿಸಿ ತೋರುವಂತಿರುವುದಾಗಿದೆ.

ನರಸಿಂಹನ ಉಗುರುಗಳ (ನಖಾಯುಧ) ವರ್ಣನೆಗೆ ಪೋತನ ಕವಿ ವಿಶೇಷಗಮನ ಕೊಟ್ಟು ವರ್ಣಿಸಿದ್ದಾನೆ. ಇದನ್ನು 'ಆಯುಧ ವಿಶೇಷ'ವೆಂದೇ ಪರಿಗಣಿಸುವ ವಿವರಗಳಿವೆ. ಭೀಕರಾಕೃತಿಯನ್ನು ಧರಿಸಿದ ನರಸಿಂಹನ ಉಗುರುಗಳು ರಾಕ್ಷಸ ಸೇನೆಯ ಧೈರ್ಯಲತೆಗಳನ್ನು ಕತ್ತರಿಸುವ ಕುಡುಗೋಲಿನ ಹಾಗೆ ಕಂಡುಬರುತ್ತಿವೆ. ಆ ನಖಗಳನ್ನು ರಾಕ್ಷಸರಾಜರ

ಮಾಂಸಖಂಡಗಳಿಂದ ಪುಷ್ಟವಾದ ಎದೆಯೆಂಬ ಹೊಲಗಳನ್ನು ಉಳುವ ಹರಿತವಾದ ನೇಗಿಲುಗಳೆಂದು ಕರೆಯಲಾಗಿದೆ. ಶತ್ರುಗಳ ಕಣ್ಣುಗಳಿಗೆ ಭಯಂಕರವಾದ ಜ್ವಾಲೆಯಂತೆ ಆ ಉಗುರುಗಳು ಕಂಗೊಳಿಸುತ್ತಿವೆ. ಆದರೂ ಅವು ಶರಣಾಗತರಾದ ಭಕ್ತರ ಕಣ್ಣುಗಳಿಗೆ ಮಾತ್ರ ಚಕೋರಗಳಿಗೆ ಚಂದ್ರನ ರೇಖೆಯಂತೆ ಅಂದವಾಗಿ ಕಾಣುತ್ತಿವೆ. ಅವು ಕೇವಲ ಉಗುರುಗಳು ಮಾತ್ರವಾಗಿರದೆ ಚಕ್ರಾಯುಧಗಳಾಗಿ ಕಂಡುಬರುತ್ತಿರುವುದು ಇಲ್ಲಿನ ವಿಶೇಷ ವೆಂದು ಹೇಳಬಹುದು.

## ಕಾಳಗದ ಭೀಕರತೆ

ನರಸಿಂಹ ರೂಪವನ್ನು ಧರಿಸಿ ಬಂದಿರುವ ಶ್ರೀಹರಿಯು ತಾನು ಸರ್ವಾತ್ಮಕನೆಂಬು ದನ್ನು ನಿರೂಪಿಸಲು, ತನಗೆ ಮೃತ್ಯುರೂಪನಾಗಿ ಈ ರೂಪದಲ್ಲಿ ಪ್ರತ್ಯಕ್ಷನಾಗಿರುವನೆಂದು ಅರಿತ ದಾನವನು ತಾನು ಇವನೊಂದಿಗೆ ಹೋರಾಡಿ ವಿಜಯ ಸಾಧಿಸುವೆನೆಂದು ನಿರ್ಧರಿಸು ತ್ತಾನೆ. ಹಿರಣ್ಯಕಶಿಪು ಮನೋಧೈರ್ಯದಿಂದ ಈತನ ಮೇಲೆ ಹೋರಾಡಲು ಗದೆಯನ್ನು ಹಿಡಿದು ಮುನ್ನಡೆಯುತ್ತಾನೆ. ಇದರಿಂದ ಮೃಗರಾಜನ ಸಮೀಪಕ್ಕೆ ಮದಗಜವೊಂದು ಸುಳಿದಂತಾಗುತ್ತದೆ. ದೇವದೇವನ ಮನಃಶಾಂತಿಯ ಮುಂದೆ ಈತನು ದಾವಾನಿಲನ ಮುಂದೆ ಮಿಂಚುಹುಳುವಿನಂತೆ ಕಂಡುಬರುತ್ತಾನೆ. ಅವನು ತನ್ನ ಕೈಲಿದ್ದ ಗದಾದಂಡವನ್ನು ಗಿರಗಿರನೆ ತಿರುಗಿಸಿ ಸ್ವಾಮಿಯ ಮೇಲೆಸೆಯುತ್ತಾನೆ. ಭಗವಂತನು ಅದನ್ನು ನಿವಾರಿಸಿ ಗರುಡನು ಸರ್ಪವನ್ನು ಹಿಡಿದಂತೆ ಅವನನ್ನು ಹಿಡಿದಿದ್ದಾನೆ. ಇದಕ್ಕೆ ಪ್ರತಿಯಾಗಿ ದಾನವೇಂದ್ರನು ಮೇಲೆ ಹಾರಿ ಸಾಹಸ ಚಾಕಚಕ್ಯತೆಗಳಿಂದ ತಪ್ಪಿಸಿಕೊಳ್ಳುತ್ತಾನೆ. ಅವನು ಅಧೈರ್ಯಗೊಳ್ಳದೆ ಹೋರಾಟವನ್ನು ಮುಂದುವರೆಸಿದ್ದಾನೆ. ತನ್ನ ಭುಜಬಲದ ಮುಂದೆ ನರಸಿಂಹನು ಕುಗ್ಗಿಹೋಗುತ್ತಾನೆಂಬ ಆತ್ಮಸ್ಥೈರ್ಯದಿಂದ ಅವನು ಹೋರಾಟ ನಡೆಸಿರುತ್ತಾನೆ. ಹೋರಾಟದ ಮನೋಹರ ದೃಶ್ಯ ಪೋತನನ ಕಾವ್ಯದಲ್ಲಿ ಮೂಡಿಬಂದಿರುವುದಕ್ಕೆ ಇದು ಸಾಕ್ಷಿಯಾಗಿದೆ.

ಆಗಸದಲ್ಲಿ ನಿಂತು ಇವರಿಬ್ಬರ ಕಾಳಗವನ್ನು ವೀಕ್ಷಿಸುತ್ತಿದ್ದ ದೇವತೆಗಳು ಈ ದಾನವನು ಮಣಿಯುವಂತಿಲ್ಲವೆಂದೂ, ತಮಗೆ ಮುಪ್ಪು ತಪ್ಪಿದ್ದಲ್ಲವೆಂಬುದಾಗಿಯೂ ಭಾವಿಸುತ್ತಾರೆ. ದಾನವನು ಬಿರುಸಿನಿಂದಲೇ ಯುದ್ಧವನ್ನು ಮುಂದುವರೆಸಿರುತ್ತಾನೆ. ಚಾಕ ಚಕ್ಯತೆಯಿಂದ ಭೂಮ್ಯಾಕಾಶಗಳಲ್ಲಿ ಸುತ್ತುತ್ತಿದ್ದಾನೆ. ಅನೇಕ ವಿಧವಾಗಿ ತಪ್ಪಿಸಿಕೊಳ್ಳುತ್ತಿದ್ದಾನೆ. ಭಯಗೊಳಿಸುವಂತಿರುವ ಮೊಗದಿಂದ ಕೂಡಿದ ಡೇಗೆಯ ಹಕ್ಕಿಯು ಆಕಾಶದಲ್ಲಿ ಹಾರುತ್ತಿರುವಂತೆ ಕಾಣುವ ದಾನವನ ಅಹಂಕಾರವನ್ನು ಸ್ವಾಮಿಯು ನಿಗ್ರಹಿಸುತ್ತಿದ್ದಾನೆ. ಇಲ್ಲೆಲ್ಲ ಕವಿಯು ಮೂಲ ಭಾಗವತಕ್ಕೆ ನಿಷ್ಠನಾಗಿರುವ ವಿಚಾರವು ಸ್ಪಷ್ಟವಾಗುತ್ತದೆ.

ಉಗ್ರನರಸಿಂಹನಂತೆ ಕಾಣುವ ಆತನ ಉಚ್ಛ್ವಾಸ-ನಿಶ್ವಾಸಗಳಿಂದ ಬೆಂಕಿಯ ಜ್ವಾಲೆಗಳು ಹೊರಹೊಮ್ಮಿ ಭೂಮಿ-ಅಂಬರಗಳನ್ನು ಕವಿದಿದೆ. ಕೊರಳಿನ ಧಗಧಗಿಸುವ

ಬೇಗೆಯು ನಿಶಾಚರನ ಕಣ್ಣುಗಳು ಗಿರಗಿರ ತಿರುಗುವಂತೆ ಮಾಡಿ ಅವನನ್ನು ಕುರುಡನನ್ನಾಗಿಸಿದೆ. ಕಂಟಕಪ್ರಾಯವಾದ ಆತನ ಕೇಸರಗಳ ಪ್ರಭಾವಕ್ಕೆ ಮೇಘಪಂಕ್ತಿಗಳು ಚದುರಿಹೋಗಿವೆ. ಉಗ್ರಮೂರ್ತಿಯ ತೀಕ್ಷ್ಣವಾದ ನಖಕಾಂತಿಯು ಪ್ರಳಯಕಾಲದ ಮೋಡಗಳಿಂದ ಉಂಟಾಗುತ್ತಿರುವ ವಿದ್ಯುಲ್ಲತೆಗಳ ಹಾಗೆ ಕಂಡುಬರುತ್ತಿವೆ. ನರಹರಿಯು ದಾನವನನ್ನು ನೋಡಿ ಜಟೆಗಳನ್ನು ಝಳಪಿಸಿದ್ದಾನೆ. ಕಣ್ಣಿನ ರೆಪ್ಪೆಗಳನ್ನು ಅಗಲವಾಗಿ ತೆರೆದು ತೀಕ್ಷ್ಣವಾಗಿ ವೀಕ್ಷಿಸುತ್ತಾನೆ. ತನ್ನ ನಾಲಗೆಯನ್ನು ವಿಕೃತವಾಗಿ ಆಡಿಸಿ ನರಸಿಂಹನು ದಾನವೇಂದ್ರನನ್ನು ಹಿಡಿಯುತ್ತಾನೆ. ನಾಗೇಂದ್ರನು ಇಲಿಯನ್ನು ಹಿಡಿಯುವ ಹಾಗೆ ನರಸಿಂಹಮೂರ್ತಿಯು ಲೀಲಾಜಾಲವಾಗಿ ಅಸುರನನ್ನು ಹಿಡಿಯುವ ವೇಳೆಗೆ ಪ್ರಾಣಭೀತಿಯಿಂದ ಅವನು ಸುತ್ತಿರಿಗಿ ಹೋಗಿದ್ದಾನೆ. ಭಕ್ತರಕ್ಷಾ ಪರಾಯಣನೂ, ದುಷ್ಟಶಿಕ್ಷಾ ಪರತಂತ್ರನೂ, ಕಡುಭಯಂಕರವಾಗಿ ನಾಲಿಗೆಯನ್ನು ಆಡಿಸುತ್ತಿರುವವನೂ ಆದ ನರಸಿಂಹಸ್ವಾಮಿಗೆ ದೇವತೆಗಳ ವಿರೋಧಿಯಾದ ಅಸುರನು ಒಳಗಾಗಿ ಹೋಗಿದ್ದಾನೆ.

ಗರುಡನು ನಾಗರಹಾವನ್ನು ಹಿಡಿದು ಸೀಳಿದ ಹಾಗೆ ಆಗ್ರಹಗೊಂಡ ಸ್ವಾಮಿಯು ವಜ್ರಕಠೋರದೇಹಿಯಾದ, ಅಚಂಚಲ ಉತ್ಸಾಹವಂತನಾಗಿದ್ದ, ಮಹಾಬಾಹುವಾದ, ಇಂದ್ರ, ಅಗ್ನಿ, ಯಮಾದಿಗಳಿಗೆ ಮಹಾಭಯಂಕರನಾದ, ದನುಜ ಶುಭಕರನಾದ, ದುಸ್ಸಾಹಸ ವಿಕ್ರಮನಾದ ಹಿರಣ್ಯಕಶಿಪುವನ್ನು ಹಿಡಿದು ಬಲವಂತವಾಗಿ ತನ್ನ ತೊಡೆಗಳ ಮೇಲೆ ಅಡ್ಡ ವಾಗಿ ಮಲಗಿಸಿ ಕೊಂಡು ತನ್ನ ಉಗುರುಗಳಿಂದ ಅವನ ಎದೆಯನ್ನು ಸೀಳಿ ಹಾಕಿ ರಾಕ್ಷಸನನ್ನು ಸಂಹರಿಸುತ್ತಾನೆ. ನರಸಿಂಹವಧೆಯ ಕಾರ್ಯದ ಒಂದು ಹಂತವು ಇಲ್ಲಿಗೆ ಮುಕ್ತಾಯಗೊಂಡಂತಾಗುತ್ತದೆ. ರಾಕ್ಷಸೇಶ್ವರನ ಗುಂಡಿಗೆಯನ್ನು ಸೀಳಿ, ಅವನ ಕಠೋರ ರಕ್ತನಾಳಗಳನ್ನು ತುಂಡರಿಸಿ, ಅವನ ಕಠಿಣಾತಿಕಠಿಣವಾದ ವಕ್ಷಸ್ಥಲವನ್ನು ಒಡೆದು, ನಿಶಾಚರನ ಮಾಂಸಖಂಡಗಳನ್ನು ಚೂರುಚೂರು ಮಾಡಿ, ರಕ್ತದಿಂದ ತೋಯ್ದ ಕರುಳ ಮಾಲೆಯನ್ನು ಧರಿಸಿದ ಕಾರ್ಯದಲ್ಲಿ ಇದು ಪರಿಸಮಾಪ್ತವಾಗುತ್ತದೆ.

## ಚಿರಂತನ ಸಾಹಿತ್ಯ

ಪೋತನ ಕವಿಯ ರಚನೆಗಳು ಹಸುಳೆಯ ಹಸುಗಲ್ಲದಂತಹ ಮೃದುಗುಣದಿಂದ ಕೂಡಿ, ಬೆಳದಿಂಗಳಿನಲ್ಲಿ ಆಡುತ್ತಿರುವ ಕಂದಮ್ಮಗಳ ಒನಪು ವಯ್ಯಾರದಿಂದ ತುಂಬಿ ನಿಂತಿರುವಂತಿದೆ. ಚಂಗುಚಂಗೆಂದು ಹಾರುವ ಮಕ್ಕಳ ಓಟದಂತಿದೆ. ಮಂದಾರ ಮಕರಂದ ಮಾಧುರ್ಯಗಳನ್ನು ಹರಿಸುತ್ತಿದೆ. ನಿರ್ಮಲವಾದ ಮಂದಾಕಿನೀ ತರಂಗಗಳಂತೆ ವಾಚಕರ ಹೃದಯಗಳನ್ನು ಸ್ಪರ್ಶಿಸುತ್ತಿದೆ. ತೆಲುಗು ಭಾಷೆಯಲ್ಲಿ ಅಮೂಲ್ಯವಾದ ಕೃತಿಯೊಂದನ್ನು ರಚಿಸಿ ಅದರ ಮೂಲಕವಾಗಿ ನರಸಿಂಹತತ್ವವನ್ನು ಪ್ರತಿಪಾದನೆ ಮಾಡಿರುವ ಪೋತನ ಕವಿಯು ಎಲ್ಲ ಕಾಲಕ್ಕೆ ಉಳಿಯುವ ಚಿರಂತನ ಸಾಹಿತ್ಯವನ್ನು ನೀಡಿ ಆತನೂ ಚಿರಸ್ಥಾಯಿ ಯಾಗಿ ಉಳಿದಿರುತ್ತಾನೆ.



## ಅಧ್ಯಾಯ - 9

# ಅನ್ನಮಾಚಾರ್ಯ



ಶ್ರೀ ವೆಂಕಟೇಶ್ವರಸ್ವಾಮಿಯ ಅನುಗ್ರಹಕ್ಕೆ ಪಾತ್ರನಾಗಿ ತೆಲುಗುಭಾಷಾ ಸಾಹಿತ್ಯದಲ್ಲಿ 'ಪದಕವಿತಾ ಪಿತಾಮಹ'ನೆಂದು ಶ್ರೇಷ್ಠನಾದ ಅನ್ನಮಯ್ಯನು ಕವಿ ಸಂಕೀರ್ತನಕಾರನಾಗಿ ಪ್ರಸಿದ್ಧಿ ಹೊಂದಿರುತ್ತಾನೆ. ಈತನು ನರಸಿಂಹಸ್ವಾಮಿಯ ಕೃಪೆಗೂ ಪಾತ್ರನಾದ ಭಕ್ತನಾಗಿರುತ್ತಾನೆ. ಈತನ ಕೀರ್ತನ ಸಾಹಿತ್ಯವು ವಿಪುಲವಾಗಿರುವುದಲ್ಲದೆ, ವಿಶಿಷ್ಟವೂ ಆಗಿರುತ್ತದೆ. ಇದು ಅಪಾರ ಜನಮನ್ನಣೆಗೆ ಪಾತ್ರವಾಗಿದೆ.

ವಿಜಯನಗರ ಅರಸರ ಕಾಲದಲ್ಲಿ ಕಾವ್ಯ-ನಾಟಕಗಳು, ಹಿಂದಿನ ಕಾವ್ಯನಾಟಕಗಳ ವ್ಯಾಖ್ಯಾನಗಳು, ಸಂಗೀತಶಾಸ್ತ್ರ ಗ್ರಂಥಗಳು, ನಾಟ್ಯ-ಅಲಂಕಾರ-ಜ್ಯೋತಿಷ್ಯಗ್ರಂಥಗಳೂ ರಚನೆಯಾದವು. ಪ್ರಥಮಾಂಧ್ರ ವಾಗ್ಗೇಯಕಾರನೆಂದು ಪ್ರಸಿದ್ಧನಾದ ಅನ್ನಮಯ್ಯ ಇಲ್ಲವೇ ಅನ್ನಮಾಚಾರ್ಯರು ವಿಜಯನಗರದ ಅರಸರ ಕಾಲಕ್ಕೆ ಸೇರಿವದವನಾಗಿದ್ದಾರೆ. ಹದಿನೈದನೆ ಶತಮಾನದ ಮಧ್ಯಭಾಗಕ್ಕೆ ಸೇರಿದ ಇಮ್ಮಡಿ ದೇವರಾಯನ ವಂಶಸ್ಥರಾದ ನರಸಿಂಹರಾಯರು ತಾಳ್ಳಪಾಕ ಅನ್ನಮಾಚಾರ್ಯನಿಗೆ ಆಶ್ರಯವನ್ನು ನೀಡಿ ಆತನಿಂದ ಸುಮಾರು ಮೂವತ್ತೆರಡು ಸಾವಿರ 'ಶ್ರೀ ವೆಂಕಟೇಶ್ವರಸ್ವಾಮಿ' ಅಂಕಿತದಿಂದ ಕೂಡಿದ ರಚನೆಗಳನ್ನು ಹಾಡಿಸಿದಂತೆ ಇತಿಹಾಸಕಾರರು ವಿಶ್ಲೇಷಿಸುತ್ತಿದ್ದಾರೆ. ತಿರುಪತಿ-ತಿರುಮಲೆ ದೇವಸ್ಥಾನಗಳ ದಾಸಸಾಹಿತ್ಯ ಪ್ರಾಜೆಕ್ಟ್ ಮೂಲಕ ಅನ್ನಮಯ್ಯನವರ ಜೀವನ ಸಾಧನೆಗಳಿಗೊಂದು ನಿಶ್ಚಿತರೂಪ ದೊರೆತಿದೆ. ಅವರ ಸಾಹಿತ್ಯ ಸಂಕೀರ್ತನೆಗಳ ಸಮಾರಾಧನೆಯಾಗುತ್ತಿದೆ.

## ಸಾಗಿದ ದಾರಿ

ಅನ್ನಮಯ್ಯನು ಯಾವ ತೀರ್ಥವನ್ನು ಸೇವಿಸಿದರೂ, ಯಾವ ದೇವರನ್ನು ದರ್ಶಿಸಿದರೂ, ಯಾವ ಹಾಡನ್ನೇ ಹಾಡಿದರೂ ಅವೆಲ್ಲವೂ 'ವೆಂಕಟೇಶಮಯ'ವಾಗಿರುವುದನ್ನು ನಾವಿಂದು ಮನಗಾಣುತ್ತಿದ್ದೇವೆ. ಆ ಸ್ವಾಮಿಯೊಂದಿಗೆ ಈತನ ತಾದಾತ್ಮ್ಯಭಾವವು ಅಷ್ಟೊಂದು ಗಾಢವಾದದ್ದು. ಆದ್ದರಿಂದಲೇ ದಶರಥ, ರಾಮ, ಹನುಮಂತ, ಕೃಷ್ಣ

ಮುಂತಾದ ಎಷ್ಟೋ ದೇವರುಗಳನ್ನು ಸ್ತುತಿಸಿರುವ ಈತನ ಕೀರ್ತನೆಗಳ ಕಡೆಯಲ್ಲಿ ವೆಂಕಟೇಶನೊಂದಿಗೆ ಇವರೆಲ್ಲರೂ ಅಭೇದರಾಗಿದ್ದಾರೆ.

ನರಸಿಂಹಸ್ವಾಮಿಯನ್ನು ಕುರಿತಂತೆ ಸಹ ಅನ್ನಮಯ್ಯನವರು ಕೋನೇಟಿರಾಯನೊಂದಿಗೆ ಅಭೇದ ಕಲ್ಪನೆಯಿಂದ ಹಾಡಿ ಸ್ತೋತ್ರಮಾಡಿ ಹೊಗಳಿರುತ್ತಾರೆ. ನರಸಿಂಹಸ್ವಾಮಿಯ ಬಗ್ಗೆ ಪ್ರತ್ಯೇಕವಾದ ಪ್ರಸಕ್ತಿಗಳನ್ನು ಒಳಗೊಂಡಿರುವ ಕೃತಿಗಳನ್ನು ಗಮನಿಸಬಹುದು. ತಾಳ್ಳಪಾಕ ಪರಂಪರೆಯಲ್ಲಿ ನರಸಿಂಹಸ್ವಾಮಿಗೆ ಅದ್ವಿತೀಯವಾದ ಸ್ಥಾನವಿದೆ. ಈ ವಂಶದಲ್ಲಿ ಬರುವ ಎಲ್ಲ ಮಹನೀಯರಿಗೆ ನರಸಿಂಹನ ವಿಚಾರದಲ್ಲಿ ಅಪಾರ ಶ್ರದ್ಧೆ, ಗೌರವಗಳು, ಆದರಾಭಿಮಾನಗಳಿದ್ದವು. ಅದರಲ್ಲಿಯೂ 'ಅನ್ನಮಯ್ಯನವರು ಏರಿದ ಎತ್ತರ ಅಳೆಯಲಾಗದು' ಎಂಬುದು ಅತಿಶಯೋಕ್ತಿಯೇನಲ್ಲ.

ಅನ್ನಮಯ್ಯನವರು ತಮ್ಮ ವಿವಿಧ ಕೀರ್ತನೆಗಳ ಮೂಲಕ, ಕಥಾಂಶಗಳನ್ನೊಳಗೊಂಡ ರಚನೆಗಳಿಂದ ತೆಲುಗು ಸಾಹಿತ್ಯದಲ್ಲಿ ನರಸಿಂಹನ ಚರಿತ್ರೆಗೆ ಮಹತ್ವವಾದ ಸ್ಥಾನವನ್ನು ನೀಡಿರುವುದು ತಿಳಿದು ಬರುತ್ತದೆ. ಅಹೋಬಿಲದ ನರಸಿಂಹ ಅನ್ನಮಾಚಾರ್ಯರಿಗೆ ಅರಿವಿನ ಗುರುವಾಗಿದ್ದಾನೆ. ಇವರ ಮುಂದೆ ಪ್ರತ್ಯಕ್ಷನಾಗಿ ಇವರಿಗೆ ತ್ರಿದಂಡ ಮತ್ತು ನರಸಿಂಹ ಮಂತ್ರಗಳನ್ನು ಅನುಗ್ರಹಿಸಿದ ಹಾಗೆ ತಿಳಿದುಬರುತ್ತದೆ. ಇವರ ಒಂದು ಪದ್ಯ ದಲ್ಲಿ ಇದರ ವಿವರಗಳಿವೆ. ಅಹೋಬಿಲದ ಪ್ರಕೃತಿ ಮತ್ತು ಅಲ್ಲಿನ ಆಹ್ಲಾದಕರವಾದ ವಾತಾವರಣವು ಅನ್ನಮಯ್ಯನವರಲ್ಲಿ ಉನ್ನತವಾದ ಭಕ್ತಿಯನ್ನು ಪ್ರೇರಣೆಗೊಳಿಸಿತು. ಇವರನ್ನು ರಾಜಮನ್ನಣೆಯು ಕೈಬೀಸಿ ಕರೆದರೂ ಅದರಿಂದ ಆಕರ್ಷಿತರಾಗದೆ, ಅಹೋಬಿಲ ದಲ್ಲಿ ಬಹುಕಾಲ ನೆಲಸಿದರು. ಈ ಅವಧಿಯು ಇವರಿಗೆ ಉತ್ತಮ ಅಭ್ಯಾಸ, ಶಾಸ್ತ್ರಸಾಮರ್ಥ್ಯ ಗಳನ್ನು ತುಂಬಿಕೊಟ್ಟವು. ಇವರ ಬುದ್ಧಿಯು ಮೊನಚಾಗಿ ಇವರಲ್ಲಿ ಗಾಂಭೀರ್ಯ, ಪಾಂಡಿತ್ಯಗಳು ನೆಲೆಸುವಂತಾಯಿತು.

## ತಿರುಮಲೆಯ ಪ್ರಭಾವ

ತಾಳ್ಳಪಾಕ ಕವಿಗಳು ವಿಷ್ಣುವಿನ ಅನನ್ಯ ಭಕ್ತರಾಗಿದ್ದರು. ಶ್ರೀಮನ್ನಾರಾಯಣನ ಸೇವಾದಿಗಳಿಗೆ ಇವರು ತಮ್ಮ ಜೀವನವನ್ನು ಮುಡುಪಾಗಿಟ್ಟಿದ್ದರು. ಅವರಲ್ಲಿನ ವಿಷ್ಣುಭಕ್ತಿಯು ತೀವ್ರವಾಗಲು ತಿರುಪತಿ-ತಿರುಮಲೆಗಳ ಧಾರ್ಮಿಕ ಪ್ರಭಾವವೂ ಕಾರಣವಾಯಿತು. ಶ್ರೀ ವೆಂಕಟೇಶನ ಅನನ್ಯ ಕಿಂಕರತ್ವವನ್ನು ಇವರು ಪಾಲಿಸಿದರು. ಇದರಿಂದ ಅಹೋಬಿಲ ಕ್ಷೇತ್ರದ ಮೇಲಿನ ಅವರ ಭಕ್ತಿಪಾರಾಯಣತೆಗೆ ಕುಂದೇನೂ ಉಂಟಾಗಲಿಲ್ಲ. ಅಹೋಬಿಲ ದಲ್ಲಿ ದೊರೆತಿರುವ ಅವರ ಕಾಲದ ತಾಮ್ರಪಟಗಳು ತಾಳ್ಳಪಾಕ ಕವಿಗಳಿಗೆ ಅಹೋಬಿಲೇಶನ ಭಕ್ತಿಪಾರಮ್ಯತೆಗೆ ಚಾರಿತ್ರಿಕ ದಾಖಲೆಗಳಾಗಿವೆ.

ಅನ್ನಮಾಚಾರ್ಯರು 'ವರಕವಿತಾ ಗುಣಚತುರ'ರಾಗಿದ್ದರು. ಅವರ ಸಂಕೀರ್ತನೆಗಳು ಹರಿಭಕ್ತಿ ವಿಭಾವದ ಸಂಕೇತಗಳು. ಅವುಗಳಲ್ಲಿ ನಮಗೆ ಶಂಖ-ಚಕ್ರಗಳ ಘೋಷಧ್ವನಿ

ಮತ್ತು ಹೊಳಪುಗಳು ಕಂಡುಬರುತ್ತವೆ. ಅವುಗಳಲ್ಲಿ ಗದಾಪ್ರಹಾರದ ಗಟ್ಟಿತನವಿರುವಂತ ಅಭಯ ನೀಡುವ ಸಂವಿಚಾರವಿದೆ. ಸದಸದ್ ಮಾರ್ಗದಲ್ಲಿ ನಡೆಸುವ ಗುಣಗಾಂಭೀರ್ಯವಷ್ಟ ತುಂಬಿದೆ. ಇವರ ಕೀರ್ತನೆಗಳಲ್ಲಿ ಸಮಾಜದಲ್ಲಿ ತುಂಬಿರುವ ಅನಿಷ್ಟ ವಿಚಾರಗಳ ವಿರುದ್ಧವಾದ ಪ್ರತಿಭಟನೆಯಿದೆ. ಅದರಿಂದ ವಿಮುಖರಾಗಿ ಸಮಾಧಾನ ಸಮಚಿತ್ತಬುದ್ಧಿಗಳನ್ನು ಬೆಳೆಸಿಕೊಳ್ಳುವ ಆದರ್ಶದ ರಹದಾರಿಯಿದೆ.

## ನರಸಿಂಹ ವಿಜಯ

ಅನ್ನಮಯ್ಯನವರು ನರಸಿಂಹಾವತಾರದ ಕಥಾಘಟ್ಟಗಳನ್ನು ತಮ್ಮ 'ನರಸಿಂಹ ವಿಜಯ'ವೆಂಬ ಹನ್ನೊಂದು ಚರಣಗಳ ದೊಡ್ಡದಾದ ಹಾಡಿನ ಮೂಲಕವಾಗಿ ಹೇಳಿದ್ದಾರೆ. ಇದು ಪ್ರಚಾರ ಸಾಹಿತ್ಯದ ರೂಪದಲ್ಲಿ ಇರುವಂತೆ ಕಂಡುಬರುತ್ತದೆ. ಇದರಲ್ಲಿ ಹಾಡುವ ಗುಣವಿದೆ. ಅದನ್ನು ಇತರರಿಗೆ ಕೇಳಿಸುವಂತೆ, ಜನಸಮೂಹಕ್ಕೆ ತಲುಪುವಂತೆ ಮಾಡುವಲ್ಲಿನ ಪ್ರಯತ್ನವಿದೆ. ಈ ಗೇಯ, ಗುಣಾತ್ಮಕವಾದ ರಚನೆಯನ್ನು ಜನಪದದಲ್ಲಿ ಭಕ್ತಿಯ ತರಂಗಗಳನ್ನೆಬ್ಬಿಸುವ, ಮೋಕ್ಷಮಾರ್ಗವನ್ನು ಕಲ್ಪಿಸುವ ಸೋಪಾನಮಾರ್ಗವೆಂದು ತಿಳಿಯು ವುದರಲ್ಲಿ ತಪ್ಪೇನಿಲ್ಲ.

*ವಿನರಯ್ಯ ನರಸಿಂಹವಿಜಯಮು ಜನುಲಾಲ*
*ಅನಿಶಮು ಸಂಪದಲುನಾಯುಮನೊಸಂಗುನು*

ದೀರ್ಘವಾದ ರಚನೆಯ ಪಲ್ಲವಿಯಾಗಿರುವ ಮೇಲಿನ ನುಡಿಗಳಲ್ಲಿ ತಿಳಿಸಿರುವ ಹಾಗೆ 'ನರಸಿಂಹ ವಿಜಯವನ್ನು ಕೇಳುವ ಭಕ್ತರಿಗೆ, ಜನಸಮೂಹಕ್ಕೆ ಅಥವಾ ಅದನ್ನು ಪಠಿಸುವವರಿಗೆ ಅತಿಶಯವಾದ ಸಂಪತ್ತು, ಆಯುರಾರೋಗ್ಯಗಳು ಲಭಿಸುತ್ತವೆ'ಯೆಂದು ಹೇಳಬಹುದು. ಪಲ್ಲವಿಯಿಂದ ಮೊದಲಾಗುವ ಹಾಡಿನ ಪ್ರತಿಚರಣದಲ್ಲೂ ನಾಲ್ಕು ನಾಲ್ಕು ಸಾಲುಗಳಿರುತ್ತವೆ. ಆದಿಪ್ರಾಸದ ಸೊಗಸನ್ನು ಇಲ್ಲಿ ಕಾಣಬಹುದು.

'ನರಸಿಂಹ ವಿಜಯ'ದ ಮೊದಲೆರಡು ನುಡಿಗಳು ನರಸಿಂಹಾವತಾರಕ್ಕೆ ಕಾರಣವಾದ ಸನ್ನಿವೇಶವನ್ನು ಸಂಗ್ರಹರೂಪದಲ್ಲಿ ತಿಳಿಸುತ್ತವೆ. ನಂತರ ಹಿರಣ್ಯಕಶಿಪುವಿನ ಒಡ್ಡೋಲಗದಲ್ಲಿ ನಡೆಯುವ ಘಟನೆ. ಪ್ರಹ್ಲಾದನ ವಿದ್ಯಾಭ್ಯಾಸದ ಪರೀಕ್ಷೆ ನಡೆಸುವ ಹಿರಣ್ಯಕಶ್ಯಪನಿಗೆ ನಾರಾಯಣನೇ ದೈವವೆಂಬ ಮಗನ ಮಾತಿನಿಂದ ಅಸಾಧ್ಯ ಕೋಪವುಂಟಾಗುತ್ತದೆ. ಅವನನ್ನು ತನಗೆ ಪ್ರತ್ಯಕ್ಷವಾಗಿ ತೋರಿಸಲು ಮಗನಿಗೆ ಅಪ್ಪಣೆ ಮಾಡುತ್ತಾನೆ. ತಂದೆಯ ಸವಾಲಿಗೆ ಪ್ರತಿಯಾಗಿ ಮಗ ಪ್ರಹ್ಲಾದನು ಭಗವಂತನು ಸರ್ವಾಂತರ್ಯಾಮಿಯೆಂದು ಹೇಳುತ್ತಾನೆ. ಮಗನ ಉತ್ತರಕ್ಕೆ ಪ್ರತಿಯಾಗಿ 'ಇಂದುಲೋ ಜೂಪಮನಿ ಚೆಂತನುನ್ನ ಕಂಬಮು ಚೇತನ್‌ಗೊನಿವೇಸಿ'- ಎಂದರೆ ಆ ದೈತ್ಯನು ಹತ್ತಿರದ ಕಂಭವನ್ನು ಕೈಯಲ್ಲಿ ಗುದ್ದಿದ್ದಾನೆ.

## ಸುಂದರ ರಚನೆ

ಅನ್ನಮಯ್ಯನ ಮುಂದಿನ ಪದ್ಯ ಕಂಭವು ಒಡೆದ ರೀತಿಗೆ ಸಹಜವಾದ ಉದಾಹರಣೆಯಾಗಿದೆ. ಇಲ್ಲಿ ಅನುಕರಣ ಶಬ್ದಗಳ ಮೋಡಿಯಿದೆ -

*ಚಿಟಚಿಟ ಚಿಟಮನಿ ಪಟಿಪಟಿ ಪಟಿಮನಿ*
*ಪಟಪಟ ಮನುಚುನು ಬಗಿಲೆನ್ ಕಂಬಮು.*

- ಶ್ರೀಪಾದರಾಜರ ದಂಡಕದ ಛಾಯೆಯು ಇಲ್ಲಿ ಮೂಡಿರಬಹುದೆನ್ನಿಸುತ್ತದೆ

*ಕುಲಗಿರುಲದರನು ಕುಂಭಿನಿವಡಕನು*
*ತಲನೆಕಿರಿ ದೈತ್ಯುಲು ತಲ್ಲಡಿಲಿ*
*ಕಲನ್‌ಗನು ಜಗಮುಲು ಕಂಪಿಂಚ್ ಜಗಮುಲು*
*ಪ್ರಳಯಕಾಲಗತಿನ್ ಬಾಬಿಲ್ಲೆನಪುಡು*

- ಈ ಎರಡು ದ್ವಿಪದಗಳು ಸುಂದರವಾದ ರಚನೆಗಳಾಗಿವೆ. ಪ್ರಳಯಕಾಲದ ಸನ್ನಿವೇಶವನ್ನು ಅದ್ಭುತವಾಗಿ ವರ್ಣಿಸಿರುವ ಕವಿಯ ವರ್ಣನಾಶೈಲಿಗೆ ಇದು ನಿದರ್ಶನವಾಗಿದೆ. ಇದರ ಭಾವವನ್ನಿಲ್ಲಿ ಹೇಳಬಹುದಾದರೆ, ಕುಲಾಚಲ ಪರ್ವತಗಳು ನಡುಗಿಹೋದವು, ಆಕಾಶವು ಗಂಭೀರವಾಗಿ ಮೊಳಗಿತು, ದೈತ್ಯರು ತಲ್ಲಣಗೊಂಡರು, ಜಗತ್ತೆಲ್ಲ ಭಯಂಕರವಾಗಿ ಕಂಪಿಸಿತು.

ಮಹಿಮಾವಂತನಾದ ನರಸಿಂಹನು ಈ ರೀತಿ ಪ್ರಳಯ ಪ್ರಸಂಗವನ್ನು ಹಬ್ಬಿಸಿದ ಕಂಬದಲ್ಲಿ ಉದ್ಭವವಾಗಿದ್ದಾನೆ. ಆತನ ಸುತ್ತಲೂ ಜ್ವಾಲಾಮಾಲೆಗಳು ವರ್ತುಲಾಕಾರವಾಗಿ ಹಬ್ಬಿಕೊಂಡು ಕಣ್ಣುಗಳು ಕೋರೈಸುವಂತಿರುತ್ತವೆ. ಅವನ ಕೈಗಳಲ್ಲಿ ಶೋಭಿಸುತ್ತಿದ್ದ ಪ್ರಖರ ಆಯುಧ ಕಾಂತಿಗೆ ಹಿರಣ್ಯಕಶಿಪುವಿನ ಎದೆ ನಡುಗಿ ಹೋಗುತ್ತದೆ ಉಗ್ರನರಸಿಂಹನ ಕೋಪಾಗ್ನಿಯ ದಳ್ಳುರಿ ಎಲ್ಲೆಡೆ ಹಬ್ಬಿದೆ.

*ಪಿಡುಗುಲು ದಾಲೀಟಿ ಭೀಕರ ನಖರಮುಲು*
*ಗಡುಸುರಕ್ಕಸುನಿಕಿ ಗಾಲಮುಲೈ ತಾಗುಲ್*

- ಅತ್ಯಂತ ಘೋರವಾದ ಸಿಡಿಲಿನಂತೆ ಆತನ ಕೈಗಳಲ್ಲಿನ ಉಗುರುಗಳು ಗಡಸುತನದಿಂದ ಹಿರಣ್ಯಕಶಿಪುವಿಗೆ ಗಾಳದಂತಾಗಿದೆ ಇದು ಕಾಲಿನ ಹಾಗೆ ಎರಗಿತು ಎಂಬ ಮತ್ತೊಂದು ಅರ್ಥವಿವರಣೆಯೂ ಇರುವುದುಂಟು.

ನರಸಿಂಹನು ಹಿರಣ್ಯಕಶಿಪುವನ್ನು ತನ್ನ ತೊಡೆಗಳ ಮೇಲೆ ಹಾಕಿಕೊಂಡು ಅವನ ಹೊಟ್ಟೆಯನ್ನು ಸೀಳಿದ್ದಾನೆ. ಅವನ ಗರ್ವವು ಅಡಗುತ್ತದೆ.

ಈ ಸಂದರ್ಭವನ್ನು ಎರಡು ಸಾಲಿನ ಪದ್ಯದಲ್ಲಿ ಹೇಳಿದೆ-

*ತೊಡಿಕಿಪಟ್ಟಿ ವಿಷುನ್‌ಡು ತೊಡಮೀದ ವಿಡುಕೊನಿ*
*ವಡಿಲನ್ ಜಲ್ಲುನ ವಾನಿ ವೇಡುನೆತ್ತುರು ನಿಂಗಿಕಿ*

ದೈತ್ಯನ ಬಿಸಿನೆತ್ತರು ಛಿಲ್ಲನೆ ಚಿಮ್ಮಿದ ಪ್ರಸಂಗದ ಚಿತ್ರಣವಿಲ್ಲಿದೆ. ರಕ್ತವನ್ನು ನರಸಿಂಹನು ಗಟಗಟನೆ ಕುಡಿದಿದ್ದಾನೆ. ಅವನ ಮೂಳೆಗಳನ್ನು ಪುಡಿಪುಡಿ ಮಾಡಿ ಕರುಳ ಮಾಲೆಯನ್ನು ಕೊರಳಲ್ಲಿ ಧರಿಸಿದ್ದಾನೆ. ಹಿರಣ್ಯಕಶಿಪುವಿನ ಶರೀರವು ನುಜ್ಜುಗುಜ್ಜಾಗಿ ಹೋಗಿದೆ. ಅವನ ನರಗಳ ಸಮೂಹವನ್ನು, ಕೂದಲುಗಳನ್ನು ಕಿತ್ತು ರಾಶಿರಾಶಿ ಹಾಕಲಾಗಿದೆ.

ಗೋವಿಂದನ ಈ ರೀತಿಯ ಭೀಷಣವಾದ ಕಾರ್ಯವನ್ನು ಅನ್ನಮಯ್ಯನು ಸಾರ್ಥಕವಾದ ಶಬ್ದಪುಂಜಗಳಿಂದ ವರ್ಣಿಸಿದ್ದಾನೆ. ಭೀಭತ್ಸರಸಕ್ಕೆ ಇದು ಹೊಂದಿಕೊಳ್ಳುತ್ತದೆ.

ಹಿರಣ್ಯಕಶಿಪುವಿನ ಪಂಚಪ್ರಾಣಗಳನ್ನು ತೆಗೆದ ನರಸಿಂಹನ ರೌದ್ರಾವತಾರವನ್ನು ಪ್ರಹ್ಲಾದನೇ ಮೊದಲಾದ ಭಕ್ತರೂ, ದೇವತೆಗಳೂ ಜಯಜಯ ಎಂದು ಉದ್ಘೋಷಿಸಿದ್ದಾರೆ. ನರಸಿಂಹನ ಕೋಪವನ್ನು ಶಮನಗೊಳಿಸಿದ ಭಾವವನ್ನು ಈ ಪದ್ಯದಲ್ಲಿ ಕವಿ ವರ್ಣಿಸಿದ್ದಾನೆ-

*ಅಪ್ಪುಡಿಂದಿರಾದೇವಿಯಂಕಮುನ್ ಗೂಚುಂಡ್*
*ಮೊಪ್ಪುಗ ಶಾಂತಮಂದೆನಹೋಬುಲೇಶುಡು*
*ತಪ್ಪಗ ಕೋನೇಟಿವಂಡಸ್‌ದಾನ್ಯೆಯಂದುನಂದು*
*ಚಿಪ್ಪಿಲ ವರಮುಲಿಚ್ಚಿ ಶ್ರೀ ವೇಂಕಟೇಶುಂಡು*

- ಲಕ್ಷ್ಮೀದೇವಿಯು ಆ ಸ್ವಾಮಿಯ ತೊಡೆಯನ್ನೇರಿರಲು ನರಸಿಂಹಸ್ವಾಮಿಯು ಶಾಂತನಾಗುತ್ತಾನೆ. ಅಹೋಬಿಲೇಶನಾದ ಸ್ವಾಮಿಯು ಬೇಡಿದ ವರಗಳನ್ನು ನೀಡುವವ ನಾಗಿದ್ದಾನೆ. ಕೋನೇಟಿ ವೆಂಕಟೇಶನು ಅವನೇ ಆಗಿದ್ದಾನೆಂಬ ಇಲ್ಲಿನ ಅಭೇದ ಕಲ್ಪನೆಯು ನರಸಿಂಹ ವಿಜಯದ ವಿಶಿಷ್ಟತೆಯಾಗಿ ಪರಿಣಮಿಸಿರುವುದು ಗಮನಾರ್ಹವಾಗಿದೆ.

ಶ್ರೀಮನ್ನಾರಾಯಣನು ಭೀಭತ್ಸಮೂರ್ತಿಯಾಗಿ ಈ ರೀತಿ ನರಸಿಂಹಾವತಾರವನ್ನೆತ್ತಿದ ಕೌತುಕದ ವಿಚಾರವನ್ನು ನಮ್ಮ ಪುರಾಣ-ಇತಿಹಾಸಗಳಲ್ಲಿ, ಸಾಹಿತ್ಯದಲ್ಲಿ ಅನೇಕ ವಿಧವಾಗಿ ಬಹು ಸ್ವಾರಸ್ಯವಾಗಿ ತಿಳಿಸಲಾಗಿದೆ. ಸಹಜವಾಗಿಯೇ ಶಾಂತನಾಗಿರುವ ಭಗವಂತನು ರೌದ್ರಾವತಾರವನ್ನು ತಾಳಿರಬೇಕಾದರೆ ಆಗಿನ ಸನ್ನಿವೇಶವು ಅತ್ಯಂತ ಗಂಭೀರವಾದದ್ದಿರಬೇಕು. ಇದರ ಹಿನ್ನೆಲೆಯಲ್ಲಿ ಪ್ರಬಲವಾದ ಮಹತ್ವವಾದ ಕಾರಣವಿದ್ದಿರಬೇಕು. ಭಗವಂತನು ತನ್ನ ಭಕ್ತನಾದ ಪ್ರಹ್ಲಾದನಿಗೆ ರಕ್ಕಸನಿಂದುಂಟಾದ ಹಿಂಸೆಗೆ ಪ್ರತೀಕಾರವನ್ನೆಸಗಲು ಈ ರೀತಿಯ ವಿಭಿನ್ನವಾದ ರೂಪದ ಅಗತ್ಯವನ್ನು ಮನಗಂಡು ಅದನ್ನು ಧರಿಸಿದ್ದಿರಬೇಕು. ಅವನಿಂದ ನಮ್ಮ ಅಭೀಷ್ಟಗಳು ನೆರವೇರಲೆಂಬ ಆಶಯುವನ್ನು ಅನ್ನಮಯ್ಯನ ಕೃತಿಯ ಆಶಯುವನ್ನಾಗಿ ಗಮನಿಸಬಹುದಾಗಿದೆ.

ಅಹೋಬಿಲದ ನರಸಿಂಹನೇ ವೆಂಕಟೇಶನಾಗಿದ್ದಾನೆ ಅಥವಾ ಆತನೂ ಈತನೇ ಆಗಿರಬೇಕೆಂಬುದು ತರ್ಕದ ಮಾತಾಗುತ್ತದೆ. ನಾವು ಭಗವಂತನನ್ನು ಆರಾಧಿಸುತ್ತಿರುವ ಹಿನ್ನೆಲೆಯಲ್ಲಿ ಒಬ್ಬನೇ ಸ್ವಾಮಿಯು ಅನೇಕ ಅವತಾರಗಳನ್ನೆತ್ತಿ ನಮ್ಮನ್ನು ಸಲಹುತ್ತಿದ್ದಾನೆ. ವೆಂಕಟೇಶ್ವರಸ್ವಾಮಿಯನ್ನು ಧರೆಗಿಳಿದ ಒಂದು ಅವತಾರವೇ ಆಗಿ ಭಾವಿಸಿರುವ ಭಕ್ತಕೋಟಿಗಿಂತ ಇದಕ್ಕೆ ನಿದರ್ಶನ ಬೇರೆ ಅಗತ್ಯವಿಲ್ಲ. 'ಕಲೌ ವೆಂಕಟನಾಯಕಃ' ಎಂದು ಕೊನೆಗೊಳ್ಳುವ ಶ್ಲೋಕದ ಅರ್ಥವೂ ಇದನ್ನೇ ಧ್ವನಿಸುತ್ತಿರುವುದಾಗಿದೆ.

ವೆಂಕಟೇಶ್ವರ ಸ್ವಾಮಿಯ ದರ್ಶನಕ್ಕೆ ಹೋದವರಿಗೆ ಅಲ್ಲಿನ ಪ್ರಾಕಾರದಲ್ಲಿರುವ ಯೋಗಾ ನರಸಿಂಹಸ್ವಾಮಿಯ ದರ್ಶನವೂ ಲಭ್ಯವಾಗುತ್ತದೆ. ಅನ್ನಮಯ್ಯನವರ ಹಾಡಿನಲ್ಲಿ ಇದರ ವಿವರಣೆಯಿದೆ.

*ಶ್ರೀ ವೇಂಕಟಾದ್ರಿನೋಬಳಾನ ನಿಲಿಚಿರಿ*
*ಶ್ರೀ ಮಹಾಲಕ್ಷ್ಮಿತೋಡ ನರಸಿಂಹುಡು*

## 'ರಮಾಧವ'ರ ಸರಸ

ವೆಂಕಟಾದ್ರಿ ಮತ್ತು ಅಹೋಬಿಲಗಳಲ್ಲಿ ನೆಲೆಸಿರುವ ಮಹಾಲಕ್ಷ್ಮಿ ಸಮೇತನಾದ ನರಸಿಂಹಸ್ವಾಮಿಯ ಪ್ರೇಮಪ್ರಕರಣ ಸ್ವಾರಸ್ಯವಾಗಿದೆ. ಇದನ್ನು ಅನ್ನಮಯ್ಯನವರು ಸ್ವಾರಸ್ಯ ಕುತೂಹಲಗಳೊಂದಿಗೆ ವಿವರಿಸುತ್ತಾರೆ.

*ಇಂತುಲಾಲ ಚೂಡರಮ್ಮ ಇದ್ದರು ಜಾಣಲೇ ವೀರು*
*ಚೆಂತ ರಮಾದೇವಿಗೂಡೆ ಶ್ರೀ ನರಸಿಂಹುಡು*

- ಎಂಬುದು ಹಾಡಿನ ಪಲ್ಲವಿಯಾಗಿರುತ್ತದೆ. ಮುಂದಿನ ಮೂರು ಚರಣಗಳಲ್ಲಿ ಈ ರಮಾ-ನರಸಿಂಹರು ಬೆಟ್ಟವನ್ನೇರಿ ಸರಸ-ಸಲ್ಲಾಪಗಳಿಂದ ಸಾಗಿಬಂದ ವಿವರಣೆ ಮನೋಹರವಾದ ಪ್ರಸಂಗಗಳನ್ನು ತಿಳಿಸುತ್ತದೆ. ತೆಲುಗು ಭಾಷಾ ಸಾಹಿತ್ಯಗಳಲ್ಲಿನ ಜಾನಪದದ ಸೊಗಡು ಇಲ್ಲಿ ಅರ್ಥಪೂರ್ಣವಾಗಿ ತುಂಬಿಕೊಂಡಿರುವುದು ಇದನ್ನು ಓದಿಕೊಂಡಾಗ ಮನದಟ್ಟಾಗುತ್ತದೆ.

ರಮಾಧವರಿಬ್ಬರೂ ಬೆಟ್ಟ ಗುಡ್ಡಗಳನ್ನೇರಿ ಸರಸವಾಡಿಕೊಳ್ಳುತ್ತ, ಗಿಡಗಂಟೆಗಳಲ್ಲಿ, ಮೂಲೆ ಮೂಲೆಗಳಲ್ಲಿ ವಿಹರಿಸುತ್ತಿದ್ದಾರೆ. ಹೂಚೆಂಡುಗಳಿಂದ ಮೃದುವಾಗಿ ಒಬ್ಬರಿಗೊಬ್ಬರು ಹೊಡೆದುಕೊಳ್ಳುತ್ತಿದ್ದಾರೆ. ಭವನಾಶಿನಿಯಲ್ಲಿ ಜಲಕ್ರೀಡೆಯಲ್ಲಿ ನಿರತರಾಗಿದ್ದಾರೆ. ಕಣ್ಣುಸನ್ನೆ, ಕೈಸನ್ನೆಗಳ ಮೂಲಕ ಸಂಕೇತಿಸುತ್ತಿದ್ದಾರೆ. ಈ ರೀತಿ ವೆಂಕಟಾದ್ರಿ ಮತ್ತು ಓಬಳಾದ್ರಿಗಳಲ್ಲಿ ಮಹಾಲಕ್ಷ್ಮಿಯೊಂದಿಗೆ ನರಸಿಂಹರು ನೆಲೆಸಿರುವರೆಂಬ ವಿಚಾರವನ್ನು ಅನ್ನಮಾಚಾರ್ಯರು ರೋಮಾಂಚನ ರೀತಿಯಲ್ಲಿ ವಿವರಿಸಿರುವ ಭಾವನೆಯನ್ನು ನಾವಿಲ್ಲಿ ಮನಗಾಣಬಹುದು.

## ನವನಾರಸಿಂಹ

ಅಹೋಬಿಲ ಮತ್ತು ತಿರುಪತಿಗಳೆರಡನ್ನೂ ಪ್ರಸಿದ್ಧ ಪುಣ್ಯಕ್ಷೇತ್ರಗಳಾಗಿ ದರ್ಶನ ಮಾಡುತ್ತಿದ್ದೇವೆ. ಈ ಎರಡು ತೀರ್ಥಕ್ಷೇತ್ರಗಳ ವಿವರಣೆಯನ್ನು ವಾದಿರಾಜರ ತೀರ್ಥ ಪ್ರಬಂಧವೂ ಒಳಗೊಂಡಿರುತ್ತದೆ. ಎರಡೂ ಸ್ಥಳಗಳಲ್ಲಿ ಮಲೆಯ ಕೆಳಭಾಗ ಮತ್ತು ಮೇಲ್‌ಭಾಗಗಳು ದಿವ್ಯಸನ್ನಿಧಾನಗಳಾಗಿ ಪ್ರಸಿದ್ಧವಾಗಿವೆ. ಅಹೋಬಿಲವನ್ನು ಕುರಿತು ಅನ್ನಮಯ್ಯನವರು ರಚಿಸಿರುವ ಕೀರ್ತನೆಯೊಂದರಲ್ಲಿ ನವನಾರಸಿಂಹರು ಈ ರೀತಿಯಲ್ಲಿ ತುಂಬಿಕೊಂಡಿದ್ದಾರೆ-

*ನವನಾರಸಿಂಹ ನಮೊ ನಮೊ*
*ಭವನಾಶಿತೀರಯಹೋಬಲ ನಾರಸಿಂಹ*

- ಇದು ಪಲ್ಲವಿ.

ಮುಂದಿನ ಮೂರು ಚರಣಗಳಲ್ಲಿ ನವನಾರಸಿಂಹರನ್ನು ವಿವರವಾಗಿ ಚಿತ್ರಿಸಿಕೊಂಡು ಸಾಗಿರುವ ಅನ್ನಮಯ್ಯನವರ ಕೀರ್ತನೆಯು ಈ ರೀತಿಯಲ್ಲಿ ಸಾಗುತ್ತದೆ.

*ಸತತ ಪ್ರತಾಪ ರೌದ್ರಜ್ವಾಲಾನರಸಿಂಹ*
*ವಿತತ ವೀರಸಿಂಹ ವಿದಾರಣಾ*
*ಅತಿಶಯಕರುಣ ಯೋಗಾನಂದ ನಾರಸಿಂಹ*
*ಮತಿಶಾಂತವು ಕಾನುಗುಮಾನಿ ನಾರಸಿಂಹ*

*ಮರಳಿ ಭೀಭತ್ಸವುಮಟ್ಟೆಮಳ್ಳ ನರಸಿಂಹ*
*ನರಹರಿ ಭಾರ್ಗೋಟಿ ನಾರಸಿಂಹ*
*ಪರಿಪೂರ್ಣ ಶೃಂಗಾರ ಪ್ರಹ್ಲಾದ ನರಸಿಂಹ*
*ಸಿರುಲನದ್ಭುತವು ಲಕ್ಷ್ಮೀನರಸಿಂಹ*

*ವದನ ಭಯಾನಕವು ವರಾಹನರಸಿಂಹ*
*ಚೆದರನಿ ವೈಭವುಲ ಶ್ರೀ ನರಸಿಂಹ*
*ಅದನ ಶ್ರೀ ವೇಂಕಟೇಶ ಅಂದುನಿಂದು ನಿರವ್ಯತಿ*
*ಪದಿವೇಲರೂಪಮುಲ ಬಹುನಾರಸಿಂಹ*

- ಬಹುರೂಪಿ ನರಸಿಂಹನ ಪ್ರಸಕ್ತಿಗೆ ಅನ್ನಮಯ್ಯನವರ ಈ ರಚನೆಯು ವಸ್ತುವನ್ನೊದಗಿಸುತ್ತದೆ. ಪದಿವೇಲು ರೂಪವೆಂಬ ಪದದಲ್ಲಿ ನರಸಿಂಹನ ಅಗಾಧತೆಯನ್ನು ವಿವೇಚಿಸಬೇಕಾಗುತ್ತದೆ. ನರಸಿಂಹರೂಪ ವಿವರಣೆಯನ್ನು ನೀಡುವ ಸಂಹಿತೆಗಳ ಅವಲೋಕನಕ್ಕೆ ಇದು ಅವಕಾಶ ಮಾಡಿಕೊಟ್ಟಿದೆ.

## ನರಸಿಂಹ ಭಕ್ತಿ

ಅನ್ನಮಯ್ಯ ಮತ್ತು ನರಸಿಂಹರ ನಡುವಣ ಸಂಬಂಧವನ್ನು ಅವರ ಮತ್ತೊಂದು ಕೃತಿ 'ನರಸಿಂಹ ಶತಕ'ದಿಂದ ಇನ್ನಷ್ಟು ದೃಢಪಡಿಸಿಕೊಳ್ಳಬಹುದು. ಅನ್ನಮಯ್ಯನವರಿಗೆ ಮಹಾವಿಷ್ಣುವಿನ ವಿವಿಧ ಅರ್ಚಾಮೂರ್ತಿಗಳ ಬಗ್ಗೆ ಶ್ರದ್ಧೆ, ಭಕ್ತಿಗಳಿದ್ದವು. ಇದರಲ್ಲಿ ನರಸಿಂಹನಿಗಿರುವ ಪ್ರತ್ಯೇಕತೆಯು ಅವರ ಕೃತಿಗಳಿಂದ ಮನದಟ್ಟಾಗುವಂತಿದೆ. ಈಗಾಗಲೇ ನೀಡಲಾದ ವಿವರಣೆಗಳಲ್ಲಿ ಅನ್ನಮಯ್ಯನವರು ನರಸಿಂಹನ ಬಗೆಗೆ ತೋರಿದ ಆದರ ಅಭಿಮಾನಗಳು ವ್ಯಕ್ತಪಟ್ಟಿದೆಯಾದರೂ ಪ್ರಸ್ತುತ 'ನರಸಿಂಹ ಶತಕ'ವು ಈ ಬಗೆಗಿನ ವಿಚಾರಕ್ಕೆ ಇನ್ನಷ್ಟು ಹೊಸ ವಿಚಾರಗಳನ್ನು ಸೇರ್ಪಡೆಗೊಳಿಸುವಲ್ಲಿ ನೆರವಾಗುತ್ತದೆ.

'ನರಸಿಂಹ ಶತಕ'ದ ಆಧಾರದ ಮೇಲೆ ಹೇಳಬಹುದಾದರೆ ಆಹೋಬಿಲದ ನರಸಿಂಹ ಮತ್ತು ಭುವನಗಿರಿಯ ನರಸಿಂಹರೊಂದಿಗೆ ಅನ್ನಮಯ್ಯನಿಗೆ ಇದ್ದ ಸಂಬಂಧವು ಅನನ್ಯವಾದದ್ದೆಂದು ವಿವೇಚಿಸಬಹುದು. ಈ ಎರಡು ಸ್ಥಳದ ನರಸಿಂಹರನ್ನು ಕುರಿತಂತೆ ಇವರಲ್ಲಿ ಉನ್ನತ ಭಕ್ತಿ ಚಿಂತನೆಗಳಿದ್ದ ಹಾಗೆ ತಿಳಿದುಬರುತ್ತದೆ. ಅನ್ನಮಯ್ಯನವರ ಸ್ವಂತ ಸ್ಥಳವಾದ ತಾಳ್ಳಪಾಕದಲ್ಲಿ ನರಸಿಂಹ ಆಲಯವಿತ್ತೊ ಇಲ್ಲವೊ ತಿಳಿದುಬರುವುದಿಲ್ಲ. ಇದರ ಬಗ್ಗೆ ಸಮಗ್ರವಾದ ಸಂಶೋಧನೆ ನಡೆದಲ್ಲಿ ಖಚಿತವಾದ ಸಂಗತಿಗಳು ಹೊರಬೀಳಬಹುದಾಗಿದೆ.

ಅನ್ನಮಯ್ಯನವರು ಆರಾಧಿಸಿದ ನರಸಿಂಹ ಕ್ಷೇತ್ರಗಳಲ್ಲಿ ಭುವನಗಿರಿಯು ಒಂದು ಪ್ರಸಿದ್ಧವಾದ ಸ್ಥಳವಾಗಿದೆ. ರಾಜಂಪೇಟೆ ತಾಲೂಕಿಗೆ ಸೇರಿದ ಊಟುಕೂರು ಎಂಬ ಗ್ರಾಮಕ್ಕೆ ಪಶ್ಚಿಮದಲ್ಲಿ ಎರಡು ಕಿ.ಮೀ ದೂರಕ್ಕೆ ಒಂದು ಗುಟ್ಟವಿದೆ. ಗುಟ್ಟದ ಕೆಳಗಡೆ ಒಂದು ಗ್ರಾಮವಿದ್ದು, ಭುವನಗಿರಿಯೆಂದು ಹೆಸರಾದ ಇದಕ್ಕೆ ಇಂದು ಬೋನಿಗಿರಿಪಲ್ಲೆ ಎಂದು ನಾಮಕರಣ ಮಾಡಿರುತ್ತಾರೆ. ಈ ಬೋನಿಗಿರಿಪಲ್ಲೆಯು ಅನ್ನಮಯ್ಯನವರ ಬದುಕಿನಲ್ಲಿ ಪ್ರಮುಖವಾದ ಸ್ಥಾನವನ್ನು ಗಳಿಸಿರುತ್ತದೆ. ಅನ್ನಮಯ್ಯನವರ ತಾತನವರು ತಮ್ಮ ವಿದ್ಯಾಸಾಧನೆಗಾಗಿ ಹಾವಿನ ಹುತ್ತದಲ್ಲಿ ಕೈ ಇಟ್ಟ ಘಟನೆ ಜನಜನಿತವಾದದ್ದು. ಇದೂ ಸಹ ಊಟುಕೂರಿಗೆ ಸಮೀಪದಲ್ಲಿದೆ.

## ಭುವನಗಿರಿಯ ಶ್ರೀಪಾದ

ಭುವನಗಿರಿಯ ಶಿಖರಭಾಗದಲ್ಲಿ ತುಂಬ ಪ್ರಾಚೀನ ಕಾಲದಿಂದ ಪ್ರಖ್ಯಾತಿಯನ್ನು ಗಳಿಸಿರುವ ಸುಮಾರು ಮೂರಡಿಯಷ್ಟಿರುವ ಪಾದವಿದೆ. ಇದು ಬಲಗಾಲಿನ ಪಾದವಾಗಿದೆ. ಇದನ್ನು ನರಸಿಂಹಸ್ವಾಮಿಯ ಶ್ರೀಪಾದವೆಂದು ಅರ್ಚಿಸಲಾಗುತ್ತಿದೆ. ಪ್ರತಿವರ್ಷದ ವೈಶಾಖ ಶುದ್ಧ ಚತುರ್ದಶಿಯಂದು- ನರಸಿಂಹ ಜಯಂತಿಯ ದಿವಸ - ಈ ಶ್ರೀಪಾದಕ್ಕೆ ವಿಶೇಷ ಪೂಜಾದಿಗಳು ನೆರವೇರುತ್ತವೆ.

ಭುವನಗಿರಿಯ ನರಸಿಂಹಸ್ವಾಮಿ ದೇವಾಲಯದ ಅರ್ಚಕರಾದ ಶ್ರೀ ಜಯಂತಿ ಸುಬ್ಬರಾಮಯ್ಯನವರು ಇದರ ಬಗ್ಗೆ ಕೆಲವು ಮಾಹಿತಿ ನೀಡಿದ್ದಾರೆ. ಇವರ ಈ ವಿವರಣೆಯು ಸ್ಥಳಪುರಾಣ ಪ್ರಸಂಗವನ್ನು ಪ್ರತಿಪಾದಿಸುವಂತಿದೆ. ಅರ್ಚಕರ ತಂದೆಯವರ ಕಾಲದಿಂದಲೂ ಅವರು ನರಸಿಂಹನ ಭಕ್ತರಾಗಿದ್ದು ಸ್ವಾಮಿಗೆ ಅರ್ಚನಾದಿಗಳನ್ನು ನೆರವೇರಿಸಿಕೊಂಡು ಬರುತ್ತಿರುತ್ತಾರೆ.

ಅರ್ಚಕರ ಅಭಿಪ್ರಾಯದಂತೆ ಪೂರ್ವಕಾಲದಿಂದಲೂ ಭುವನಗಿರಿಯ ಬೆಟ್ಟದ ಮೇಲೆ ಸ್ವಾಮಿಯ ಶ್ರೀಪಾದವಿದ್ದು, ಇದರ ಮತ್ತೊಂದು ಪಾದವು ನೆಲ್ಲೂರು ಜಿಲ್ಲೆ ರಾಪೂರು ಸಮೀಪದ ಪೆಂಚಲಕೋನದಲ್ಲಿದೆ. ಸುಮಾರು ಒಂದುನೂರು ವರುಷಗಳ ಹಿಂದೆ ಅರ್ಚಕರು ವಾಸ ಮಾಡುವ ರಾಜಂಪೇಟೆಯಲ್ಲಿನ ಆರ್ಯವೈಶ್ಯ ಅಮ್ಮವಾರಿಶಾಲೆಯ ಪುನರ್ನಿರ್ಮಾಣ ನಡೆದಿರುತ್ತದೆ. ಆ ಸಮಯದಲ್ಲಿ ಇದರ ಕಾರ್ಯದಲ್ಲಿ ಭಾಗಿಯಾಗಿದ್ದ ಒಬ್ಬ ಶಿಲ್ಪಿಗೆ ಭುವನಗಿರಿ ನರಸಿಂಹಸ್ವಾಮಿಯು ಕನಸಿನಲ್ಲಿ ಪ್ರತ್ಯಕ್ಷನಾಗಿ ತನ್ನ ಶಿಲಾಮಯ ಮೂರ್ತಿಯೊಂದನ್ನು ಮಾಡಲು ತಿಳಿಸಿದನಂತೆ. ಸ್ವಾಮಿಯ ಅನುಗ್ರಹದಿಂದ ಶಿಲ್ಪಿಯು ಒಳ್ಳೆಯ ಶಿಲೆಯೊಂದನ್ನು ಹುಡುಕಿ ಒಂದೇ ದಿನದಲ್ಲಿ ಮೂರ್ತಿಯನ್ನು ಕಡೆಯುತ್ತಾನೆ. ನರಸಿಂಹಸ್ವಾಮಿಯ ಶಿಲ್ಪವನ್ನು ನಿರ್ಮಿಸಲಾಯಿತಾದರೂ ಅದಾವ ಕಾರಣದಿಂದಲೋ ಇದರ ಪ್ರತಿಷ್ಠಾಪನಾ ಕಾರ್ಯವು ನೆರವೇರಲಿಲ್ಲ. ಅಲ್ಲಿಗೆ ಒಂದು ದಿನ ಸ್ಥಾನಿಕ ಭಕ್ತರಾದ ಅಂಬಾಲಪ್ಪ ಪೆಂಚಲಯ್ಯ ಎಂಬುವರು ಕಾರ್ಯನಿಮಿತ್ತವಾಗಿ ಆಗಮಿಸಿ ಇದನ್ನು ನೋಡುತ್ತಾರೆ.

ನರಸಿಂಹಸ್ವಾಮಿಯ ದಿವ್ಯಮಂಗಳ ವಿಗ್ರಹಕ್ಕೆ ಪೂಜೆಯಿಲ್ಲದ ವಿಚಾರದ ಬಗ್ಗೆ ಅವರಿಗೆ ಕೆಲವೊಂದು ವಿಚಾರಗಳು ತಿಳಿದುಬರುತ್ತವೆ. ಅವರ ಮನಸ್ಸಿನಲ್ಲಿ ಮೂರ್ತಿಯ ಪ್ರತಿಷ್ಠಾಪನಾ ಕಾರ್ಯವು ರೂಪ ಪಡೆಯುತ್ತದೆ. ದಿವ್ಯಮೂರ್ತಿಯ ಬಗ್ಗೆ ಅಪಾರ ಶ್ರದ್ಧೆಭಕ್ತಿಗಳಿಂದ ಕೂಡಿದ ಅವರು ಭುವನಗಿರಿಯಲ್ಲಿ ನರಸಿಂಹಸ್ವಾಮಿಯ ಪ್ರತಿಷ್ಠೆ ಮಾಡಿಸುತ್ತಾರೆ. ಧಾರ್ಮಿಕ ಕಾರ್ಯಗಳು ನಡೆಯುವಲ್ಲಿ ಅದರ ಹಿಂದಿನ ಪ್ರೇರಣೆಯೊಂದು ಇರುವುದು ಸಾಮಾನ್ಯ ಸಂಗತಿಯಾಗಿರುತ್ತದೆ. ಹಾಗೆಯೇ ಪೆಂಚಲಯ್ಯನವರ ಗುರುಗಳಾದ ಬ್ರಹ್ಮಶ್ರೀ ಗಣನಿ ಪಿಚ್ಚಯ್ಯನವರು ಮುಂದೆ ನಿಂತು ಈ ಕಾರ್ಯಗಳನ್ನು ಮಾಡಿಸಿದ್ದಾರೆ. ಗುರುಗಳಿಂದ ಶ್ರೀ ಲಕ್ಷ್ಮೀನರಸಿಂಹ ಯಂತ್ರಸ್ಥಾಪನೆ ನೆರವೇರಿದೆ. ಅನಂತರದ ಕಾಲದಲ್ಲಿ ದೇವಾಲಯ ನಿರ್ಮಾಣವಾಗಿದೆ.

ಭುವನಗಿರಿಯಲ್ಲಿನ ನರಸಿಂಹ ದೇವಾಲಯದಲ್ಲಿ ಇಂದು ನಡೆದುಕೊಂಡು ಬರುತ್ತಿರುವ ಪೂಜಾದಿ ಉತ್ಸವಗಳಿಗೆ ಇದೇ ಕಾರಣವಾಗಿದೆ. ಆದರೆ ಇಲ್ಲಿನ ಸ್ವಾಮಿಯ ಪಾದವನ್ನು ಮುಚ್ಚಲಾಗಿದ್ದು ಅದನ್ನು ಪೀಠವಾಗಿ ಪರಿವರ್ತಿಸಲಾಗಿದೆಯೆಂದು ಹೇಳುವರು. ಪಾದದ ಉದ್ದಗಲವು ಎರಡೂವರೆ ಅಡಿಗಳಿಗೆ ಸ್ವಲ್ಪ ಹೆಚ್ಚಾದದ್ದು. ಇದನ್ನು ಅನ್ನಮಯ್ಯ ಅವರು ವಿಶೇಷವಾಗಿ ಕಂಡಿದ್ದು ತಮ್ಮ ಕೀರ್ತನೆಗಳ ಮೂಲಕ ನಮಗೆ ಕಾಣಿಸಿದ್ದಾರೆ.

## 'ನರಸಿಂಹ ಶತಕ'

'ನರಸಿಂಹ ಶತಕ'ವನ್ನು ವಿಶ್ಲೇಷಿಸುವುದಾದರೆ ಇದರಲ್ಲಿರುವ ಪದ್ಯಗಳು ಮೇಲು ನೋಟಕ್ಕೆ ಅಹೋಬಿಲ ನರಸಿಂಹನನ್ನು ಕುರಿತು ಹಾಡಿರುವ ಹಾಗೆ ಕಂಡುಬರುತ್ತವೆ. ಆದರೆ ಇದರ ಅಂತರ್ಯದಲ್ಲಿನ ವಿಚಾರಗಳು ಭುವನಗಿರಿ ನರಸಿಂಹನ ಬಗೆಗಿರುವುದು ಸುಸ್ಪಷ್ಟ. ಪಾದಪ್ರಶಂಸೆಯನ್ನು ಒಳಗೊಂಡಿರುವುದು ಇದಕ್ಕೆ ಮುಖ್ಯ ಕಾರಣವಾದದ್ದು. ಇದರ ಹೊರಮೈಯಲ್ಲಿ 'ಅಹೋಬಿಲ ನರಸಿಂಹಸ್ವಾಮಿ ಪದ್ಯಗಳು' ಎಂದಿದೆ. 'ಶಿಖಿ ನರಸಿಂಹ' ಎಂಬ ಶೀರ್ಷಿಕೆಯಲ್ಲಿ ಉಟ್ಕೂರಪುರಭವನ ಪ್ರಸ್ತಾಪವಿದೆ. ಇದರ ಬರವಣಿಗೆ ಸ್ಪಷ್ಟವಾಗಿದೆ. ನಾಲ್ಕು ಕಂದಪದ್ಯಗಳು ಪೂರ್ವಕವಿಗಳಾದ ಶೇಷಪ್ಪಕವಿ, ಕೂರ್ಮನಾಥಕವಿಗಳು ಬರೆದಿರುವ ನೃಸಿಂಹ ಶತಕ, ಸಿಂಹಾದ್ರಿ ನಾರಸಿಂಹ ಶತಕಗಳ ಪ್ರಸ್ತಾಪವಾಗಿವೆ. ಶಿಖಿನರಸಿಂಹ ನೆಂಬ ಕಂದಶತಕವು ಶಕುನ ಶಾಸ್ತ್ರದಂತೆ ಕಾಣುತ್ತದೆ. ಅಹೋಬಿಲದ ಬೆಟ್ಟದಲ್ಲಿರುವ ನರಸಿಂಹನನ್ನೆ ಶಿಖಿನರಸಿಂಹನೆಂದು ಕರೆಯಲಾಗಿದೆಯೋ ಅಥವಾ ಮತ್ತಾವುದಾದರೂ ಬೇರೆ ನರಸಿಂಹನಿಗೆ ಇದು ಅನ್ವಯವಾಗುತ್ತಿದೆಯೋ ಖಚಿತವಾಗಿ ಹೇಳಲಾಗದು.

ಇಲ್ಲಿರುವ ಕಂದಪದ್ಯಗಳನ್ನು ವಿಶೇಷವಾಗಿ ಅಧ್ಯಯನ ಮಾಡಿರುವುದು ಹಲವು ಸಂಗತಿಗಳನ್ನು ಸ್ಪಷ್ಟಗೊಳಿಸಿಕೊಳ್ಳಲು ನೆರವಾಗುತ್ತದೆ-

*ಪಾರಮಲೇನಟ್ಟಿ ದಯಾ*
*ನೀರಧವನಿ ಭವಭಯಮುಲು ನೆಟ್ಟಿಂಪಗನ್*
*ಶೌರಿವಿ ನೀವನಿ ನೀದರಿ*
*ಚೇರಿತಿನಹೋಬಲ ಶ್ರೀನೃಸಿಂಹ*

- ಈ ಕಂದಪದದಲ್ಲಿರುವ ಕಡೆಯ ಪಾದವು ದೋಷಪೂರಿತವಾದದ್ದು. ಇದನ್ನು ಸರಿಪಡಿಸಿಕೊಂಡು 'ಚೇರಿತಿನಹೋಬಲ ಗಿರಿಹರಿ ಶ್ರೀನರಸಿಂಹ'- ಎಂದೋದಿಕೊಂಡಲ್ಲಿ ಇದರ ಛಂದಸ್ಸು, ಅರ್ಥವಿಶೇಷಗಳು ಸರಿಹೋಗುತ್ತವೆ.

*ಎಂತೊ ಅವತಾರಂಬುಲು*
*ಸಂತುಲುಪಟ್ಟಿನ (ವಿ) ಧಮುನ ಚಾಲುಗು ಚೂಪನ್*
*ಸುಂತ ವಿಮಬ್ಬೆನು ಮಾಕುನ್। ಸುಂತೋಮಬ್ಬೆನು ಮಾಕುನು*
*ಚಿಂತಿಪ ಅಹೋಬಲಹರಿ ಶ್ರೀ ನರಸಿಂಹ*

- ಈ ಪದ್ಯದಲ್ಲಿ ಸಂತುಲುಪೆಟ್ಟು ಎಂಬುದು ಪ್ರಾಂತೀಯ ವಾಚಕವಾಗಿದೆ. ಸಂತೆಯಲ್ಲಿ ಸರಕುಗಳನ್ನು ಬಿಚ್ಚಿಟ್ಟಂತೆ ಎಂಬುದಾಗಿ ಇದರ ಭಾವವನ್ನು ಪರಿಗ್ರಹಿಸ ಬೇಕಾಗುತ್ತದೆ. ಮೂರನೆಯ ಪಾದವನ್ನು ವ್ಯತ್ಯಸ್ಥಗೊಳಿಸಿ ಇದರ ಅರ್ಥವನ್ನು ಮತ್ತಷ್ಟು ಸ್ಫುಟಗೊಳ್ಳುವಂತೆ ಓದಿಕೊಳ್ಳಬೇಕು.

ಮೂರನೆಯ ಪದ್ಯದ ಕಡೆಯ ಪಾದದಲ್ಲಿ ಭುವನಗಿರಿ ಶ್ರೀನರಸಿಂಹ ಎಂದಿರುವುದು ಮೇಲಿನೆರಡು ಪದ್ಯಗಳಿಗಿಂತ ವಿಭಿನ್ನವಾದ ಸಂಗತಿಯನ್ನು ಹೇಳುವಂತಿದೆ. ಇತಿಹಾಸಕ್ಕೆ ಹತ್ತಿರವಾಗಿದೆ. ಛಂದಸ್ಸಿನ ದೃಷ್ಟಿಯಿಂದಲೂ ಪೂರ್ವಾರ್ಧ ಉತ್ತರಾರ್ಧಗಳಲ್ಲಿ ವಿಭಿನ್ನ ಪ್ರಾಸವಿದೆ.

*ತಾತಲು ತಂಡ್ರುಲು ಮ್ರೊಕ್ಕಿರಿ*
*ನೇತಲು ನೀ ಪಾದಮೆಪುಡು ನಿಲ್ಪಿರಿ ಮರಿ (ವಿ) ಲೋ*
*ಬ್ರಾತಿಗ ಊಟ್ಕುರು ಪುರಭವು*
*ಚೆತಃ ಪ್ರೀತಿಗ ಹರಿವನಿ ಶಿಖಿನರಸಿಂಹ*

- ಈ ಪದ್ಯವು ಮೂರನೆ ಪದಾಂಶವನ್ನು ನಿರ್ಧರಿಸುವಂತೆ ಕಾಣುತ್ತದೆ. ಆದರೆ (ಮುಕುಟ) ಶಿರೋನಾಮೆಯು ಶಿಖಿನರಸಿಂಹ ಎಂದಿರುವುದು ಸಂದೇಹಕ್ಕೆಡೆ ಮಾಡಿ ಕೊಡುವಂತಿದೆ. 'ಶಿಖಿನರಸಿಂಹ'ವೆಂಬ ಶಿರೋನಾಮೆಯಿಂದ ಕೂಡಿದ ಶಕುನಶಾಸ್ತ್ರಕ್ಕೆ ಸಂಬಂಧಿಸಿದ ಶತಕವೊಂದಿದ್ದು ಅನ್ನಮಯ್ಯನವರ ಈ ಕೃತಿಯೊಂದಿಗಿನ ಅದರ ಸಂಬಂಧ ಏನೆಂಬುದು ನಿರ್ಧಾರವಾಗಬೇಕಾಗಿರುತ್ತದೆ.

ಇಲ್ಲಿನ ಪದ್ಯದಲ್ಲಿ ಬರುವ ಊಟುಕೂರು ಶಿವ ದೇವಾಲಯಕ್ಕೆ ಪ್ರಸಿದ್ಧಿ ಪಡೆದಿದ್ದು. ಭುವನಗಿರಿಯಲ್ಲಿರುವುದು ನರಸಿಂಹ ದೇವಾಲಯ. ಅನ್ನಮಯ್ಯ ಮತ್ತು ಆತನ ಜ್ಞಾತಿಗಳು ಅದ್ವೈತಿಗಳಾಗಿ ಹರಿ-ಹರದಲ್ಲಿ ಅಭೇದದೃಷ್ಟಿಯನ್ನು ಹೊಂದಿದ್ದಿರಬೇಕು. ನರಸಿಂಹ ಶತಕದಲ್ಲಿ ಉಕ್ತವಾಗಿರುವಂತೆ ಅನ್ನಮಯ್ಯನವರ ಜೀವನವು ಊಟುಕೂರಿಗೂ ಬೆಸೆದುಕೊಂಡಿರುವುದು ಉಲ್ಲೇಖನೀಯ. ಇವರ ತಂದೆಯವರು ವಾಸಿಸುತ್ತಿದ್ದ ಊಟುಕೂರಿನಲ್ಲಿ ಇವರ ಜ್ಞಾತಿಗಳಾದವರು ಇದ್ದಿರಬೇಕು. ಇಲ್ಲಿಗೆ ಸಮೀಪದ ಭುವನಗಿರಿಯಲ್ಲಿರುವ ಶ್ರೀಪಾದವು ನರಸಿಂಹನದ್ದೆ ಆಗಿರುವ ವಿಚಾರದಲ್ಲಿ ಹಿಂದಿನ ಕಾಲದಿಂದ ಬೆಳೆದುಕೊಂಡು ಬಂದಿರುವ ನಂಬಿಕೆ ದೃಢವಾದದ್ದಾಗಿದೆ.

ಅನ್ನಮಯ್ಯನು ಮೊದಲು ಭುವನಗಿರಿಯಲ್ಲಿರುವ ಪಾದದರ್ಶನ ಮಾಡಿ ಅನಂತರ ಅಹೋಬಿಲದ ನರಸಿಂಹನ ದರ್ಶನ ಸೇವೆಗಳಿಂದ ಪುನೀತನಾಗಿದ್ದಿರಬೇಕು. ಅಹೋಬಿಲದ ನರಸಿಂಹನೂ ತಿರುಮಲೆಯ ವೆಂಕಟೇಶನಂತೆ ಹಿರಿಮೆಯಿಂದ ಕೂಡಿದ ದೈವವಾಗಿರುವುದು ವೇದ್ಯವಾಗಿದೆ. ಅಹೋಬಿಲದ ಜೀಯರ್‌ಗಳೊಂದಿಗೆ ತಿರುಮಲೆಯ ಸಂಬಂಧ ಶಾಸ್ತ್ರನಿಷ್ಠವಾದದ್ದಾಗಿದೆ.

ಶ್ರೀವೈಷ್ಣವರಿಗೆ ತಿರುಮಲೆ ಮತ್ತು ಅಹೋಬಿಲಗಳೆರಡೂ ಪವಿತ್ರ ಯಾತ್ರಾಸ್ಥಳಗಳಾಗಿವೆ. ಅಹೋಬಿಲ ಸಂದರ್ಶನಕ್ಕೆ ಹಿನ್ನೆಲೆಯಾಗಿ ಅನ್ನಮಯ್ಯನವರಿಗೆ ಭುವನಗಿರಿಯ ಶ್ರೀಪಾದವು ದೈವಿಕ ಶಕ್ತಿಯನ್ನು ದಯಪಾಲಿಸಿರಬೇಕೆನ್ನಬಹುದು. ಅವರ ಜೀವನದಲ್ಲಿ ಅಹೋಬಿಲದ ನರಸಿಂಹನ ಪಾತ್ರ ಅವಿಸ್ಮರಣೀಯವಾದುದು.

## ಅಳಿಪ್ರುಳಿ ಸಿಂಗ

ತಿರುಮಲೆಯ ಬೆಟ್ಟವನ್ನೇರುವ ಸಮಯದಲ್ಲಿ ಮಾರ್ಗದ ಮೆಟ್ಟಲುಗಳಿಗೆ ಹೊಂದಿಕೊಂಡಿರುವ 'ಅಳಿಪುಳಿಸಿಂಗ'ನನ್ನು ಕಂಡು ಆತನನ್ನು ಅರ್ಚಿಸಿರುವ ವಿವರವೂ ಅನ್ನಮಾಚಾರ್ಯರ ಕೀರ್ತನೆಯಲ್ಲಿದೆ-

*ಯುಕ್ತಿವೇಂಕಟಗಿರಿಯೊದ್ದನುನ್ನಟ್ಟಿ*
*ಪಲ್ಲೆಲೊ ಗೊಲ್ಲಲಪಾಲಿಟ ಶಕ್ತಿ*
*ಯಲ್ಲಾರುನನ್ನಿ ಮನುಲನಿಶಂಬು ಬೊಗಡ*
*ಗಮನುಪಟ್ಟುನಟ್ಟಿಯಾ ಗ್ರಾಮಂಪು ಶಕ್ತಿ*
*ಗನುಗೊನಿ ಬಹುನಮಸ್ಕಾರಮುಲ್ ಚೇಸಿ*
*ಅಳಿಪುಳಿಸಿಂಗನರ್ಚಿಂಚಿ ಮ್ರೊಕ್ಕಿ*
*ತಲಿ (ಲ) ಯೆರಗುಂಡು ಸಂದರ್ಶಿಂಚಿ ಕದಲಿ*

- ಈ ಸಾಲುಗಳಲ್ಲಿ ಅಳಿಪುಳಿಸಿಂಗನನ್ನು ಅರ್ಚಿಸಿದ ವಿಧಾನವಿದೆ.

ಅಲಿಪಿರಿಯ ನರಸಿಂಹದೇವಾಲಯದ ಬಗ್ಗೆ ಪ್ರತ್ಯೇಕವಾಗಿ ಪರಿಶೀಲನೆ ನಡೆಸಬಹುದಾಗಿದ್ದು, ಅನ್ನಮಯ್ಯ ಅವರು ಈ ನರಸಿಂಹನ ಬಗೆಗೆ ತಾವು ಹೊಂದಿದ್ದ ಅತಿಶಯವಾದ ಭಕ್ತಿಯನ್ನು ಅವರ ಕೀರ್ತನೆಯ ಮೂಲಕ ಮನದಟ್ಟು ಮಾಡಿಕೊಳ್ಳಬಹುದು.

ಅನ್ನಮಯ್ಯನವರು ತಮ್ಮ ಚಿಕ್ಕಂದಿನಲ್ಲಿ ತಮ್ಮ ತಾತ-ತಂದೆಯರ ಹಾಗೆ ತಾವೂ ಸಹ ನರಸಿಂಹನಲ್ಲಿ ಯಥಾವತ್ತಾದ ಭಕ್ತಿಯನ್ನು ಹೊಂದಿದವರಾಗಿದ್ದಾರೆ. ತಮ್ಮ ಜೀವನ-ಸಾಧನೆಗಳ ಮೂಲಕವಾಗಿ ಮಾತ್ರವಲ್ಲದೆ, ಸಾಹಿತ್ಯಾತ್ಮಕವಾಗಿಯೂ ಶ್ರೇಷ್ಠವಾದ ಅಭಿವ್ಯಕ್ತಿಯನ್ನು ನೀಡಿದ್ದಾರೆ. ಅವರ ಕೀರ್ತನೆಗಳು, ಹಾಡುಗಳು, ಮತ್ತಿತರ ಕೃತಿಗಳಲ್ಲಿ ನಿಚ್ಚಳವಾದ ಭಕ್ತಿಯು ತೋರ್ಪಟ್ಟಿದೆ. ಈ ಮಾರ್ಗದಲ್ಲಿ ನಡೆಯಲು ದಿಟ್ಟವಾದ ಮನೋಭೂಮಿಕೆಯೊಂದು ಸಿದ್ಧವಾಗಿದೆಯೆನ್ನಬಹುದು.

## ಸರ್ವವ್ಯಾಪಿ ನರಸಿಂಹ

ಭಗವಂತನು ಯಾವ ಊರಿನವನಾದರೇನು? ಯಾವ ತತ್ತ್ವಕ್ಕೆ ಸೇರಿದವನಾದರೇನು? ಆತನು ಎಲ್ಲರ ಭಕ್ತಿ-ವಿರಕ್ತಿಗಳಿಗೆ ಒಳಪಟ್ಟವನಾಗಿದ್ದಾನೆ. ನರಸಿಂಹನನ್ನು ಸಹ ಒಂದು ಸ್ಥಳ ಒಂದು ತತ್ತ್ವಕ್ಕೆ ಬದ್ಧನಾದವನೆಂದು ಪರಿಗಣಿಸದೆ ಆತನನ್ನು ತಾಳ್ಳಪಾಕ ವಂಶದವರೆಲ್ಲರೂ ಆರಾಧಿಸಿಕೊಂಡು ಬಂದಿರುತ್ತಾರೆ. ಅನ್ನಮಯ್ಯನವರಿಗೆ ನರಸಿಂಹಸ್ವಾಮಿಯು ಕಂಡಿರುವ ರೀತಿ-ನೀತಿಗಳನ್ನು ಅವರ ಕೀರ್ತನೆಗಳ ಸವಿನುಡಿಗಳ ಮೂಲಕ ಕಂಡುಕೊಳ್ಳಬಹುದಾಗಿದೆ.



## ಅಧ್ಯಾಯ - 10

# ಇತರ ತೆಲುಗು ಸಾಹಿತ್ಯ

## ಕೃಷ್ಣಮಾಚಾರ್ಯನ ಸಿಂಹಗಿರಿ ವಚನಗಳು

ತೆಲುಗು ಸಾಹಿತ್ಯದಲ್ಲಿ ಕೃಷ್ಣಮಾಚಾರ್ಯನ ಹೆಸರು ತುಂಬ ಖ್ಯಾತವಾದದ್ದು. ತೆಲುಗಿನ ಮೊದಲ ವಚನ ರಚನೆಯ ಕೀರ್ತಿ ಈತನದು. ಹದಿಮೂರನೆಯ ಶತಮಾನದ ಕೊನೆಯಿಂದ ಹದಿನಾಲ್ಕನೆಯ ಶತಮಾನದ ಮಧ್ಯಭಾಗದವರೆಗೆ ಇದ್ದಿರಬಹುದಾದ ಕೃಷ್ಣಮಾಚಾರ್ಯ ನಾಲ್ಕು ಲಕ್ಷ ಗ್ರಂಥದಷ್ಟು ವಚನ ರಚನೆಯನ್ನು ಮಾಡಿದ್ದಾನೆಂದು ಹೆಸರಾಗಿದ್ದರೂ ಇಪ್ಪತ್ತನೆಯ ಶತಮಾನದ ಕೊನೆಯ ಹೊತ್ತಿಗೆ ದೊರೆತಿರುವುದು ನಾಲ್ಕುನೂರಿನ ನಾಲ್ಕನೇ ಒಂದುಭಾಗವನ್ನೂ ಮುಟ್ಟಿಲ್ಲವೆಂದು ಹೇಳಲೇಬೇಕು.

ಕೃಷ್ಣಮಾಚಾರ್ಯ 'ಸಿಂಹಗಿರಿ ವಚನ'ಗಳನ್ನು ಬರೆದಿದ್ದಾನೆ. ಸಿಂಹಗಿರಿಯೆಂದರೆ ಇಂದಿನ ವಿಶಾಖಪಟ್ಟಣ ಬಳಿಯ ಜಗದ್ವಿಖ್ಯಾತ ಸಿಂಹಾಚಲ. ಇಲ್ಲಿನ ದೇವರು ವರಾಹ ನರಸಿಂಹ-ಚಂದನ ಚೂರ್ಣಾವೃತಮೂರ್ತಿ. ಶತಕಗಳು, ಪದ್ಯಗದ್ಯಗಳು ಪುರಾಣ ವಿವರಗಳು ಇರುವುದಾದರೂ ವಚನಗಳು ಮಾತ್ರ ಕೃಷ್ಣಮಾಚಾರ್ಯನವೇ ಮೊದಲೆಂದೇ ಹೇಳಬೇಕು. ತೆಲುಗು ಸಾಹಿತ್ಯದಲ್ಲಿ ಬಹುಕಾಲಾನಂತರ- ನನ್ನಯ ಭಾರತವನ್ನೂ (ಆದಿಪರ್ವ, ಸಭಾ ಪರ್ವ, ಅರಣ್ಯಪರ್ವ ಭಾಗ)ವ್ಯಾಕರಣವನ್ನೂ ಬರೆದು ಎರಡು ಶತಮಾನಗಳಾದ ನಂತರ- ಬಂದದ್ದು. ವಚನದ ಬಳಕೆಯಿದ್ದರೂ, ನನ್ನಯನ ಕಾಲದಿಂದಲೇ ವಚನ ಎರಡು ಪದ್ಯ ಗಳ ನಡುವಣ ಕೊಂಡಿಯಂತೆ, ಪ್ರಕೃತಿ ವರ್ಣನೆಯ ವಾಹಕದಂತೆ ಕೆಲಸ ಮಾಡುತ್ತ ಚಂಪೂಕಾವ್ಯದ ಅಂಗವಾಗಿ (ನನ್ನಯ ಕಾವ್ಯದಲ್ಲಿ ವಚನ ಕಥಾಪ್ರವಾಹದ ಅಂಗವಾಗಿಯೂ ಸಮರ್ಥವಾಗಿ ಕೆಲಸ ಮಾಡಿದೆ) ಮಾತ್ರನೇ ಪರಿಚಯವಾಗಿ ಪ್ರಚಲಿತವಾಗಿ ನಡೆಯುತ್ತಿತ್ತು ಅಂತಹ ವಚನಗಳು ಕೃಷ್ಣಮಾಚಾರ್ಯನಲ್ಲಿ ಹೊಸ ಸ್ವರದಲ್ಲಿ ಹೊಳೆಯುವಂತಾಗಿ ತೆಲುಗು ವಚನಸಾಹಿತ್ಯದಲ್ಲಿ ಸಿಂಹಗಿರಿವಚನಗಳಿಗೆ ಸಬಲವಾದ ಸ್ಥಾನವೇ ಸಿಕ್ಕುವಂತಾಯಿತು.

# ಹಾಡುಗಬ್ಬವಾದ ವಚನಗಳು

ಕನ್ನಡಕ್ಕೆ ವಚನಗಳು ಶಿವಶರಣರಿಂದ ಪ್ರಾಪ್ತವಾಯಿತಾದರೂ ತೆಲುಗಿನಲ್ಲಿ ಈ ಪ್ರಭಾವದಿಂದ ಹರಿಪರ ಸಾಹಿತ್ಯವೂ ಸೃಷ್ಟಿಯಾಯಿತು. ಸಂಸ್ಕೃತದಲ್ಲಿ ರಾಮಾನುಜರ ಗದ್ಯತ್ರಯ ಈ ವೇಳೆಗಾಗಲೇ ಪ್ರಖ್ಯಾತವಾಗಿದ್ದಿತು ಎಂಬುದು ಸ್ಪಷ್ಟ, ಶ್ರೀರಂಗ ಗದ್ಯ ವೈಕುಂಠ ಗದ್ಯ ಶರಣಾಗತಿ ಗದ್ಯಗಳು ಶಿವಶರಣರ ವಚನಗಳು ಒಂದು ರೀತಿಯ ಪದ ಗಳೇ ಎಂದರೂ ನಡೆದೀತು. ಇವುಗಳನ್ನು ಯಾವ ಹೊತ್ತಿನಲ್ಲಿಯಾದರೂ ಗುಣು ಗುಣಿಸಬಹುದು. ಇವು ನೆನಪಿನಲ್ಲಿಡಲು ಅನುಕೂಲವಾದ ಲಯದಿಂದ ಕೂಡಿದ ಪದಮೈತ್ರಿ ಇರುವಂತೆ ಕೂಡಿರುವ ರಚನೆಗಳು. ರಾಮಾನುಜರಿಗಿಂತಲೂ ಹಿಂದಿನ ವೈಷ್ಣವ ಆಳ್ವಾರುಗಳು ಹಾಡಿದ್ದು ದಿವ್ಯ ಪ್ರಬಂಧಗಳನ್ನು, ನಾಲಾಯಿರ ಪ್ರಬಂಧಗಳು ಹೆಚ್ಚು ಭಾಗದಲ್ಲಿ ಗದ್ಯ ರಚನೆಗಳೇ ಎಂದರೂ ಆದೀತು. ಇದೊಂದು ಸ್ಥೂಲವಾದ ಲಕ್ಷಣವಷ್ಟೆ, ಶಿವಶರಣರ ಕನ್ನಡದ ವಚನಗಳನ್ನು ರಾಗ, ತಾಳ, ಲಯಗಳೊಂದಿಗೆ ವಾದ್ಯವಿಶೇಷಗಳೊಂದಿಗೆ ಹಾಡ ಬಹುದು ಎಂಬುದನ್ನು 'ಶಿವದಾಸ ಗೀತಾಂಜಲಿ'ಯಲ್ಲಿ ಡಾ. ಎಲ್. ಬಸವರಾಜು ಅವರು ಸಂಶೋಧಿಸಿ ನೀಡಿದ್ದಾರೆ. ಇದರ ಜೊತೆಗೆ ತಮಿಳು ಪ್ರಬಂಧಗಳನ್ನು 'ಪಾಶುರ'ಗಳೆಂದು ಹೆಸರಿಸಿ ಹಾಡುವ ಸಂಪ್ರದಾಯವೂ ಇದೆಯೆಂಬುದು ಸ್ಪಷ್ಟ, ಹೀಗಾಗಿ ವಚನಗಳು ಹಾಡುಗಬ್ಬಗಳೂ ಹೌದೆನ್ನಲು ಅಡ್ಡಿಯಿಲ್ಲ.

ಪದ, ವಚನ, ಭಾವಗೀತೆ, ಕೀರ್ತನೆಗಳಲ್ಲಿ ಶತಕದೊಡನೆಯೇ ಬಿಡಿಬಿಡಿಯಾಗಿ ಸ್ವತಂತ್ರಭಾವಗಳನ್ನು ಬಿಂಬಿಸುವಂತಹವು. ಇನ್ನೊಂದು ಪದ, ವಚನ, ಗೀತೆ, ಕೀರ್ತನೆಯ - ಅವಲಂಬನೆಯಿಲ್ಲದಂತೆ ಮುಂದುವರಿಯುವಂತಹವು. ಭಾವಗೀತೆ ಎಂಬುವ ಈಚಿನ ಪ್ರಕ್ರಿಯೆಯು ಇಡೀ ಪಟ್ಟಿಯಲ್ಲಿನ ಒಳಅರ್ಥ ಎಂದರೂ ನಡೆದೀತು. ಮಿಕ್ಕಂತೆ ಎಲ್ಲವೂ ರಚನೆಗಾರರ ಅಂಕಿತವನ್ನು ಹೊಂದಿಯೇ ಸಾಮಾನ್ಯವಾಗಿ ನಡೆಯುವಂತಹವು. ಸರ್ವಜ್ಞನ ರಚನೆಯನ್ನು ವಚನವೆಂದರೂ ಅದು ಛಂದೋಬದ್ಧ ಕಾವ್ಯವೇ. ವೇಮನನ ವಾಕ್ಕು ಕೂಡಾ ಪದಗಳೆಂದು ಪ್ರಸಿದ್ಧ. ಅಲ್ಲಿಯೂ ಛಂದಸ್ಸು ನಿಯತ. ಇಂತಲ್ಲಿ ಸಿಂಹಗಿರಿ ವಚನಗಳೆಂದು ಕರೆಯುವ ಕೃಷ್ಣಮಾಚಾರ್ಯನ ರಚನೆಗಳನ್ನು ದಂಡಕಕ್ಕೆ ಹತ್ತಿರವಾದವು ಎಂದು ಹೇಳಲಡ್ಡಿಯಿಲ್ಲ. ಕೃಷ್ಣಮಾಚಾರ್ಯನ ನಂತರ ಮೂರು ಶತಮಾನಗಳ ಈಚೆಗೆ ಬಂದ ತಾಳ್ಳಪಾಕ ಚಿನ್ನನ್ನ ತನ್ನ 'ಸಂಕೀರ್ತನ ಲಕ್ಷಣಂ' - ಕೃತಿಯಲ್ಲಿ ಕೃಷ್ಣಾಚಾರ್ಯಾದಿಕ ಪರಿಕಲ್ಪಿತ ಪದಗಳೆಂದು ಇವುಗಳನ್ನು ಗುರುತಿಸಿದ್ದಾನೆ. ಮಾತ್ರ ಈ ಪದಗಳು ಛಂದೋಗಣಗಳ ನಿಯತಿಯನ್ನು ಹೊಂದದೆ ಇರುವಂತಹ ಗದ್ಯವೇ ಹೊರತು ಬೇರೆಯಲ್ಲ.

ಕೃಷ್ಣಮಾಚಾರ್ಯನ ಜೀವನವನ್ನು ಕುರಿತು ಈ ಸಿಂಹಗಿರಿ ವಚನಗಳಲ್ಲಿಯೂ ಹಲವು ಅಂಶಗಳು ಪ್ರಸ್ತಾವಿತವಾಗಿವೆ. ಅದರ ಜೊತೆಗೇ ಪ್ರತಾಪ ರುದ್ರದೇವನ ಚರಿತ್ರೆ ಯನ್ನು ಬರೆದ ಏಕಾಮ್ರನಾಥನು ತನ್ನ ಕಥಾನಾಯಕ ಚರಿತ್ರೆಯನ್ನು ವಿವರಿಸುತ್ತ ಪ್ರಾಸಂಗಿಕ ವಾಗಿ ಕೃಷ್ಣಮಾಚಾರ್ಯನ ಜೀವನ ವಿಶೇಷಗಳನ್ನು ತಿಳಿಸಿಕೊಡುತ್ತಾನೆ. ಕಾಕತೀಯ

ರಾಜ ಪ್ರತಾಪರುದ್ರನಿಂದ ಸನ್ಮಾನಿತನಾದವನು ಕೃಷ್ಣಮಾಚಾರ್ಯ. ಪ್ರತಾಪರುದ್ರನು ಈತನಿಗೆ ಐವತ್ತು ಗ್ರಾಮಗಳ ಆಡಳಿತವನ್ನು ವಹಿಸಿಕೊಟ್ಟಂತೆ ಕಂಡು ಬರುತ್ತದೆ. ಈ ಗ್ರಾಮಗಳಿಂದ ಸರಕು ತರಿಸಿ ಕೃಷ್ಣಮಾಚಾರ್ಯನು ತಾನು ರಚಿಸಿದ ನಾಲ್ಕು ಲಕ್ಷ ಗ್ರಂಥಗಳ 'ಸಿಂಹಗಿರಿ ವಚನ'ಗಳನ್ನು ತಾಮ್ರಫಲಕಗಳ ಮೇಲೆ ಕೆತ್ತಿಸಿ ಖ್ಯಾತ ಶ್ರೀವೈಷ್ಣವ ಕ್ಷೇತ್ರವಾದ ಶ್ರೀರಂಗಕ್ಕೆ ಬಂಡಿಗಳಲ್ಲಿ ತುಂಬಿಕೊಂಡು ಹೋಗಬೇಕೆಂದಿರುವಾಗ ಕಾಕತೀಯ ಪ್ರಭುವಿಗೆ ದೂರು ಹೋಯಿತು. ಕೃಷ್ಣಮಾಚಾರ್ಯ ಯಾವುದೋ ಅನುಚಿತವಾದ ರಾಜದ್ರೋಹ ಮಾಡುತ್ತಿದ್ದಾನೆ ಎಂಬುದಾಗಿ.

ಪ್ರತಾಪರುದ್ರನು ಕೃಷ್ಣಮಾಚಾರ್ಯನ ನೈಜವನ್ನು ವ್ಯಕ್ತಿತ್ವವನ್ನು ತಿಳಿದಿದ್ದವನು. ಅವನಿಗೆ ಯಾವುದೇ ಶಂಕೆ, ಅನುಮಾನಗಳು ಉಂಟಾಗಲಿಲ್ಲ. ಕೃಷ್ಣಮಾಚಾರ್ಯನಿಗೆ ಯಾವುದು ಇಷ್ಟವೋ ತನಗೂ ಅದೇ ಸಮ್ಮತವಾದದ್ದು. ಆತ ಮಹಾಭಕ್ತನೂ ಮಹಿಮಾನ್ವಿತನೂ ಆದವನು ಎಂದುಬಿಟ್ಟು ವಿಚಾರಿಸಲಿಕ್ಕೂ ಹೋಗಲಿಲ್ಲ. ಕೃಷ್ಣಮಾಚಾರ್ಯ ಇದರಿಂದ ಸಂತಸಪಟ್ಟು ರಾಜಧಾನಿ ಏಕಶಿಲಾನಗರದಲ್ಲಿ ಕನಕವೃಷ್ಟಿ ಬರುವಂತೆ ಪವಾಡ ಮಾಡಿದ. ರಾಜನೂ, ಪ್ರಜೆಗಳೂ ಆಚಾರ್ಯನನ್ನು ಪ್ರೀತ್ಯಾದರಗಳಿಂದ ಶ್ರೀರಂಗಕ್ಕೆ ಕಳುಹಿಸಿಕೊಟ್ಟರು ಎಂದು 'ಪ್ರತಾಪರುದ್ರ ಚರಿತ್ರೆ' ನಮಗೆ ತಿಳಿಸುತ್ತದೆ.

## ನರಸಿಂಹನಿತ್ತ ದೃಷ್ಟಿ

ಕೃಷ್ಣಮಾಚಾರ್ಯ ಮಹಬೂಬ್ ನಗರದಲ್ಲಿ ಸಂತಪೂರು ಗ್ರಾಮದಲ್ಲಿ (ಸಂತೂರು) ಹುಟ್ಟಿದನೆಂದು ಹೇಳಲಾಗುತ್ತದೆ. ಜಾತ್ಯಂಧನಾದ ಈ ಮಗುವನ್ನು ತಾಯ್ತಂದೆಯರಿಂದ ದೂರವಾದ ಮೇಲೆ ಒಬ್ಬ ಗುರು ಸಿಂಹಾಚಲಕ್ಕೆ ಕರೆತಂದ. ನರಸಿಂಹ ಸ್ವಾಮಿಯ ಅನುಗ್ರಹದಿಂದ ಬಾಲಕನಿಗೆ ದೃಷ್ಟಿ ಲಾಭವಾಯಿತು. ಸ್ವಾಮಿ ಕನಸಿನಲ್ಲಿ ಬಂದು ಚಾತುರ್ಲಕ್ಷ ವಾಕ್‌ಪೂಜೆ ಮಾಡಬೇಕೆಂದು ಹೇಳಿದ. ಅದರಂತೆ ಕೃಷ್ಣಮಾಚಾರ್ಯ ಚಾತುರ್ಲಕ್ಷ ಗ್ರಂಥಗಳ ಸಿಂಹಗಿರಿ ವಚನಗಳನ್ನು ರಚಿಸಿ ತಾಮ್ರಪತ್ರಗಳಲ್ಲಿ ಕೆತ್ತಿಸಿ ಶ್ರೀರಂಗಕ್ಕೆ ತೆಗೆದು ಕೊಂಡುಬಂದ. ಅಲ್ಲಿಯೇ ಅಂತ್ಯ ಹೊಂದಿರಬೇಕು ಎಂಬುದು ಇತಿಹಾಸಕಾರರ ಅನಿಸಿಕೆ ಯಾಗಿದೆ.

ಈ ಮಧ್ಯೆ ಆತ ಮದುವೆಯಾದದ್ದು, ದಾರಿ ತಪ್ಪಿದ್ದು, ಹಿರಿಯರ ಅನುಗ್ರಹದಿಂದ ಮೋಕ್ಷ ಮಾರ್ಗದಲ್ಲಿ ಮರಳಿ ಬಂದದ್ದು, ಎಲ್ಲವೂ ಗುರುಲಘು ವಿವರವಾಗಿ ಆತನ ವಚನಗಳಲ್ಲಿಯೇ ಸ್ಪಷ್ಟವಾಗಿ ಮೂಡಿವೆ. ಜೊತೆಗೇ ಈತನ ಜೀವಿತಕಾಲದಲ್ಲಿ ಸಂಭವಿಸಿದ ಹಲವಾರು ಪವಾಡಗಳೂ ಸೂಚಿತವಾಗಿವೆ. ಅದರಿಂದ ಪ್ರತಾಪರುದ್ರನ ಅನುಗ್ರಹ, ಸ್ನೇಹ, ಆದರಗಳಿಗೆ ಪಾತ್ರನಾದದ್ದು, ಗ್ರಾಮಾಧಿಕಾರಿಯಾಗಿ ನಿಯಮಿತನಾದದ್ದು, ಎಲ್ಲವೂ ಸಮಾಸ ವಿವರವಾಗಿರುವುದನ್ನು ಏಕಾಮ್ರನಾಥನ 'ಪ್ರತಾಪರುಚ್ರ ಚರಿತ್ರೆ'ಯಲ್ಲಿಯೂ ಕಾಣಬಹುದು.

ಸಿಂಹಗಿರಿ ವಚನಗಳಲ್ಲಿ "ಶ್ರೀಕೃಷ್ಣ ಕುವ್ವಾರಸ್ವಾಮಿ ಸಿಂಹಗಿರಿ ನರಹರಿ, ನಮೋ ನಮೋ ದಯಾನಿಧೇ" ಎಂಬ ಅಂಕಿತವಿರುವುದನ್ನು ಕಾಣಬಹುದು. ಕುವರ ಎಂಬ ಪದ ಕನ್ನಡಿಗರಿಗೆ ಪರಿಚಿತವಾದದ್ದೇ. ಅದನ್ನು ಲಯಬದ್ಧವಾಗಿ ಎಳೆದು ಹಾಡುಗಬ್ಬದಲ್ಲಿ ಬಳಸಿದಾಗ ಕುವ್ವಾರು ಆಗಿರುವುದು ಸಹಜ. ಕುಮಾರಸ್ವಾಮಿ ಎಂಬುವವ ಕೃಷ್ಣಮಾಚಾರ್ಯ ನನ್ನು ಸಿಂಹಗಿರಿಗೆ ಕರೆತಂದು ಸಿಂಹಾಚಲಸ್ವಾಮಿಯ ಪಾದದರ್ಶನ ಮಾಡಿಸಿದ ಗುರು. ಆದ್ದರಿಂದಲೇ ಆತನ ಪ್ರಸಕ್ತಿ ಇಲ್ಲಿ ಬಂದಿದೆ. ಮಿಕ್ಕದ್ದು ಸ್ಪಷ್ಟವೇ ಇದೆ. ಇಂತು ಅಂಕಿತ ವನ್ನು ಪಡೆದ ವಚನಗಳು ಬಹುತೇಕ ಭಕ್ತಿ ಪ್ರಪತ್ತಿಯನ್ನು ಬಿಂಬಿಸುವ ಪದಗಳಿಂದಲೇ ತುಂಬಿವೆ.

ಕೃಷ್ಣಮಾಚಾರ್ಯನ ವೈಷ್ಣವ ಪಂಥ, ಪುರಾಣ ಕಥಾಪ್ರಸಂಗ, ನೀತಿ, ವೇದಾಂತ ಎಂಬುದಾಗಿ ನಾಲ್ಕು ಭಾಗಗಳಲ್ಲಿ ಸ್ಥೂಲವಾಗಿ ವಿಂಗಡಿಸಬಹುದು. ಭಗವತ್ ಸ್ತುತಿ ರೂಪದ ವಚನಗಳೂ ಉಂಟು. ಅವುಗಳಲ್ಲಿ ರಾಮಾಯಣವನ್ನು ಸಂಗ್ರಹವಾಗಿ ವಿವರಿಸುವ ವಚನ ಪಡೆಯುವುದು ಹೀಗೆ-

"ದೇವಾ, ಶ್ರೀಮನ್ನಾರಾಯಣಾ, ಪರಬ್ರಹ್ಮ ಸ್ವರೂಪಾ, ಅಖಿಲಾಂಡ ಕೋಟಿ ಬ್ರಹ್ಮಾಂಡ ನಾಯಕಾ, ವೇದ ವೇದಾಂತ ವೇದ್ಯಾ, ಪುರಾಣ ಪುರುಷೋತ್ತಮಾ, ಪುರಂದರ ವಂದ್ಯಾ, ಕಪಟನಾಟಕ ಸೂತ್ರಧಾರೀ, ಮಾಯಾ ವಿನೋದಾ, ಅಗಣಿತ ಮಹಿಮಾವತಾರಾ, ಸಕಲ ಕಲ್ಯಾಣಗುಣೋನ್ನತ, ಸಕಲ ಜಗದಂತರ್ಯಾಮಿ, ಆಶ್ರಿತಕಲ್ಪಭೂಜ, ಶ್ರೀಮದಯೋಧ್ಯಾ ಪುರ ವರಾಧೀಶ್ವರ, ದಶರಥ ರಾಜನಂದನಾ, ಕೌಸಲ್ಯಾ ಗರ್ಭ ರತ್ನಾಕರಾ ... ಸೌಮಿತ್ರಿ ಮಿತ್ರಾ, ಶತ್ರುಘ್ನ ವಶೀಕರಾ, ಶರಣಾಗತ ವಜ್ರಪಂಜರಾ, ಕಾರುಣ್ಯವಾರಾನ್ನಿಧಿ, ಭಕ್ತಿ-ಮುಕ್ತಿ ಫಲಪ್ರದಾಯಕಾ, ಶಂಖ-ಚಕ್ರ-ಗದಾಧರಾ, ಕೋದಂಡ ದೀಕ್ಷಾಗುರು, ತಾರಾಸೇವಿತಾ, ಭಕ್ತ ಪರಾಧೀನಾ, ಇಕ್ಷ್ವಾಕು ಕುಲತಿಲಕಾ, ಪಕ್ಷೀಂದ್ರವಾಹನಾ, ದೇವಾಧಿದೇವಾ, ತಾಟಕಾ ಪ್ರಾಣಾಪಹಾರ, ವಿಶ್ವಾಮಿತ್ರ ಯಜ್ಞ ಪರಿಪಾಲಕಾ, ಯಜ್ಞ ಕರ್ತಾ, ಯಜ್ಞ ಸ್ವರೂಪಾ, ಯಜ್ಞಭೋಕ್ತಾ, ಸರ್ವಂ ವಿಷ್ಣುಮಯಂ ಜಗತ್ ಎಂಬ ಶ್ರುತಿನಿಕರ ಪರಿವೇಷ್ಟಿತಾ, ಪುರಹರಚಾಪಖಂಡನಾ, ಸೀತಾ ಮನೋಹರಾ, ಪರಶುರಾಮ ಬಾಹುಬಲ ಪರಾಕ್ರಮ ಹರಣಾ, ಅಯೋಧ್ಯಾ ಪ್ರವೇಶಾ, ಕೈಕೇಯೀ (ವಿಘ್ನ) ಕಲ್ಪಿತ ಪಿತೃವಾಕ್ಯ ಪರಿಪಾಲಕಾ, ಚಿತ್ರಕೂಟಾದಿ ನಿಲಯಾ, ಕಾಕಾಸುರ ವಿದಳನಾ, ದಂಡಕಾರಣ್ಯ ಪ್ರವೇಶಾ, ವಿರಾಧ ದೈತ್ಯ ಹರಣಾ, ಸುಗ್ರೀವಾನುಗ್ರಹಾ, ವಾಲಿನಿಗ್ರಹಾ, ಮಾಲ್ಯವಂತ ಪ್ರವೇಶಾ, ಲವಣಾಬ್ಧಿ ಗರ್ವ ಹಲ್ಲಕಲ್ಲೋಲ, ವಿಭೀಷಣಾ ಸ್ಥಾಪನಾಚಾರ್ಯ, ದಕ್ಷಿಣಸಿಂಧು ರಾಜ ಬಂಧನಾ, ಸುವೇಲಾದ್ರಿ ಪ್ರವೇಶಾ, ರಾವಣ-ಸುಗ್ರೀವ ಮಲ್ಲಯುದ್ಧ ವೀಕ್ಷಣ ಪ್ರಮೋದಾ, ಮಹೋದರ, ಮಹಾಪಾರ್ಶ್ವ, ಕಂಪನ ವಜ್ರದಂಷ್ಟ್ರ, ವಜ್ರಮಸ್ತಕ ಶೂಲಾ, ಕುಂಭ ನಿಕುಂಭ ಕುಂಭಕರ್ಣ ಕಂಠರಣ ಶಿರಃ ಖಂಡನಾ, ಮಕರಾಕ್ಷ, ಧೂಮ್ರಾಕ್ಷ, ವಿರೂಪಾಕ್ಷಾತಿಕಾಯ ಮಹಾಕಾಯ ಚಂಡ ಮದಗರ್ವ ಸಂಹಾರಾ, ಇಂದ್ರಜಿತ್ತು ತಲೆಗುಂಡು, ಗುಂಡಾ

# ಶೇಷಪ್ಪ ಕವಿಯ ನರಸಿಂಹ ಶತಕ

ನರಸಿಂಹಸ್ವಾಮಿಯನ್ನು ಮತ, ಪಂಥ, ಭಾಷೆ, ಪ್ರಾಂತ ಭೇದಗಳಿಲ್ಲದೆ ಎಲ್ಲ ಪಂಗಡಗಳವರೂ ಆರಾಧಿಸುತ್ತಿದ್ದಾರೆ. ದೇವಾಲಯಗಳನ್ನು ನಿರ್ಮಿಸಿ ಪೂಜಾರ್ಚನೆಗಳಿಂದ, ಹಬ್ಬ-ಹರಿದಿನ, ಉತ್ಸವ-ಜಾತ್ರೆ ಮಾತ್ರವಲ್ಲದೆ ಸ್ತೋತ್ರಸಾಹಿತ್ಯಗಳಿಂದ, ಭಜನೆ-ಸಂಕೀರ್ತನೆಗಳಿಂದ ಈತನನ್ನು ಪ್ರಾರ್ಥಿಸುತ್ತಿದ್ದಾರೆ. ಈ ರೀತಿಯ ನಿವೇದನೆಗೆ ಶತಕಸಾಹಿತ್ಯವು ಸೇರುತ್ತದೆ. ಪ್ರಸ್ತುತ ತೆಲುಗಿನಲ್ಲಿರುವ ಕೃತಿಯ ವಿವೇಚನೆಯನ್ನು ಇಲ್ಲಿ ಗಮನಿಸಬಹುದು.

ತೆಲುಗು ಭಾಷೆಯ ಶತಕ ಪ್ರಕಾರದಲ್ಲಿ ಸುಮಾರು ಒಂದು ನೂರಕ್ಕೂ ಹೆಚ್ಚಾದ ರಚನೆಗಳಿವೆ. ನೀತಿಮಾರ್ಗವನ್ನು ಬೋಧಿಸುವ ಈ ಮಾರ್ಗದಲ್ಲಿ ಸುಮತಿ, ಭಾಸ್ಕರ ಮೊದಲಾದವರ ಹೆಸರುಗಳು ಚಿರಸ್ಥಾಯಿಯಾಗಿ ಉಳಿದಿವೆ. ತೆಲುಗು ಸಾಹಿತ್ಯದಲ್ಲಿನ ಶತಕ ವಾಙ್ಮಯವನ್ನು ಪ್ರತ್ಯೇಕ ಘಟ್ಟವೆಂದು ಹೇಳಬಹುದು. ಶತಕಗಳಲ್ಲಿ ಕಾಣಲಾರದ ವಿಷಯಗಳೇ ಯಾವುದೂ ಇಲ್ಲ. ನಾಡಿನ ಮೂಲೆ ಮೂಲೆಗಳಲ್ಲಿರುವ ಯಾವ ಜನಪದರಿಗೆ ವಿದ್ಯಾಭ್ಯಾಸವಿಲ್ಲವೋ, ಅಕ್ಷರ ಪರಿಚಯವೂ ಇಲ್ಲವೋ ಅಂತಹವರು ಕೇವಲ ಶ್ರವಣ ಮಾತ್ರದಿಂದಲೇ ಶತಕಗ್ರಂಥಗಳ ಪರಿಚಯವನ್ನು ಹೊಂದಿದವರಾಗಿದ್ದಾರೆ. ಅವುಗಳನ್ನು ಕಂಠಸ್ಥ ಮಾಡಿಕೊಂಡು ತಮ್ಮ ಪ್ರಶಾಂತ ಬದುಕಿನ ಮೂಲಕ ಸತ್ಯಾನ್ವೇಷಣೆಯನ್ನು ಕಂಡುಕೊಂಡಿದ್ದಾರೆ. ಶತಕಗಳಲ್ಲಿನ ಜ್ಞಾನಸಂಪತ್ತಿನಿಂದ ಉನ್ನತಿ ಹೊಂದಿದ್ದಾರೆ.

'ನರಸಿಂಹ ಶತಕ'ವನ್ನು ಆಕರ್ಷಕವಾದ ಶೈಲಿಯಲ್ಲಿ, ಮೃದು ಮಧುರವಾದ ಭಾಷೆಯಲ್ಲಿ ಸರ್ವರಿಗೂ ಅರ್ಥವಾಗುವ ರೀತಿಯಲ್ಲಿ ಶೇಷಪ್ಪ ಕವಿಯು ರಚಿಸಿದ್ದಾನೆ. ಕವಿಯ ಕೃತಿಯಲ್ಲಿ ಒಂದು ನೂರು ಪದ್ಯಗಳಿವೆ. ಇದು ಕವಿಯ ಭಕ್ತಿ ನಿವೇದನೆಗೆ ನಿದರ್ಶನವಾಗಿದೆ. ಪ್ರತಿಯೊಂದು ಪದ್ಯದಲ್ಲಿಯೂ ಎರಡು ಭಾಗಗಳಿವೆ. ಮೊದಲ ಭಾಗದಲ್ಲಿ ಎಂಟು ಸಾಲುಗಳಿದ್ದರೆ, ಎರಡನೆ ಭಾಗದಲ್ಲಿ ಎರಡು ಪಾದಗಳಿರುತ್ತವೆ. ಪದ್ಯಭಾಗದ ಕಡೆಯಲ್ಲಿ ಎರಡು ಸಾಲಿನ ಪಲ್ಲವಿಯನ್ನು ಹೇಳಿಕೊಂಡು ಪದ್ಯವನ್ನು ಮುಗಿಸುವುದರಿಂದ ಇದಕ್ಕೊಂದು ಅರ್ಥವಿಶೇಷತೆ ಉಂಟಾಗುತ್ತದೆ. ಈ ಪಲ್ಲವಿಯು ಹೀಗಿದೆ-

*ಭೂಷಣ ವಿಕಾಸ ಶ್ರೀಧರ್ಮಪುರ ನಿವಾಸ*
*ದುಷ್ಟಸಂಹಾರ ನರಸಿಂಹ ದುರಿತದೂರ*

ಈ 'ದ್ವಿಪದ'ವು ಇಡೀ ಪದ್ಯದ ಬೆಲೆಯನ್ನು ಅಧಿಕಗೊಳಿಸುವಂತಿದೆ. 'ನರಸಿಂಹ ಶತಕ' ಎಂಬ ಹೆಸರಿನ ಆಧಾರದಿಂದ ಇದು ನರಸಿಂಹನ ಕತೆಯನ್ನು ಒಳಗೊಂಡಿರಬಹುದಾದ ಕೃತಿಯೆಂದು ಭಾವಿಸುವುದು ತಪ್ಪಾದೀತು. ಇದರ ರಚನೆಯ ಉದ್ದೇಶ ಮತ್ತು ಕವಿಯ ಅಭಿಪ್ರಾಯಗಳು ಬೇರೆಯೇ ಆಗಿವೆ. ಇಲ್ಲಿನ ಪದ್ಯಗಳಲ್ಲಿ ನರಸಿಂಹನನ್ನು ಕುರಿತ ಸಂಬೋಧನೆಯಿದೆ. ಭಗವಂತನ ಸಾಕ್ಷಾತ್ಕಾರವನ್ನು ಯಾಚನೆ ಮಾರ್ಗದಿಂದ ಪಡೆದುಕೊಳ್ಳುವ ಸಫಲತೆಯಿದೆ. ಕೆಲವು ಭಾವಗರ್ಭಿತ ಪದ್ಯಗಳ ಮೂಲಕ ಇದರ ಉತ್ಕೃಷ್ಟತೆಯನ್ನು ಅರಿಯಬಹುದು.

ನರಸಿಂಹನ ದಿವ್ಯನಾಮ ಪಠಿಸುವುದರ ಮೂಲಕ ದುರಿತಜಾಲಗಳು ದೂರವಾಗುತ್ತದೆ. ಆತನ ದಿವ್ಯಮಂತ್ರವನ್ನು ಹೇಳಿಕೊಂಡರೆ ಬಲವಾದ ವ್ಯಾಧಿಗಳು ನಿವಾರಣೆಯಾಗುತ್ತವೆ. ಆತನ ದಿವ್ಯಸ್ಮರಣೆಯಿಂದ ಶತ್ರುಸೈನ್ಯವು ಸಂಹಾರವಾಗುತ್ತದೆ. ನರಸಿಂಹನ ನಾಮಸಂಕೀರ್ತನೆ ಯಿಂದ ಯಮಭಟರು ದೂರವುಳಿದರೆ, ಆತನ ಮಹಾಮಂತ್ರ ಬಲವು ವೈಕುಂಠ ಪದವಿ ದೊರಕಿಸಿಕೊಡುತ್ತದೆ. ಭಗವಂತನ ಕೊಂಡಾಟವನ್ನು ಈ ಸುಂದರವಾದ ಪದ್ಯವು ಮನದಟ್ಟು ಮಾಡಿಕೊಡುತ್ತದೆ. ಭಗವಂತನಲ್ಲಿ ಮಾಡಿಕೊಂಡ ಬೇಡಿಕೆಯವಿಧಾನವು ವಿನೂತನ ರೀತಿ ಯಲ್ಲಿ ಇರುವುದನ್ನು ಇದರಲ್ಲಿನ ಪದ್ಯವೊಂದು ತಿಳಿಸುತ್ತದೆ. ಈ ಪದ್ಯದಲ್ಲಿ ನನ್ನೇಲು, ಕಾವು, ದಯಯುಂಚು, ರಕ್ಷಿಂಚು, ಮನ್ನಿಂಚು- ಮೊದಲಾದ ತೆಲುಗುಪದ ಪ್ರತ್ಯಯಗಳನ್ನು ದ್ವಿರುಕ್ತಿಯಾಗಿ ಬಳಸಿ ಕವಿಯು ಅರ್ಥಪೂರ್ಣತೆಯನ್ನು ಸಾಧಿಸುವ ಪ್ರಯತ್ನ ಮಾಡಿದ್ದಾನೆ.

ತಂದೆಯ ಸ್ವರೂಪನಾದ ನರಸಿಂಹನು ಕಾಮಿತಾರ್ಥಗಳ ದಯಪಾಲಿಸಿ ಸಲಹ ಬೇಕಾದವನೆಂದಿದ್ದಾನೆ. ದೈತ್ಯಸಂಹಾರ ಮಾಡಿದವನು ದಯಮಾಡಿಸಿ ರಕ್ಷಿಸಲೆಂದು ಬೇಡಿದ್ದಾನೆ. ದೀನಪೋಷಕನು ರತ್ನಭೂಷಿತನಾದ ಆವನಲ್ಲದೆ ಬೇರೆ ದಿಕ್ಕಿಲ್ಲವೆಂಬ ನಂಬಿಕೆ ಕವಿಯಲ್ಲಿದೆ. ಮಾರಕೋಟಿ ಸ್ವರೂಪ, ಪದ್ಮಲೋಚನನೆ ಮೊದಲಾದ ವಿಶೇಷಣಗಳನ್ನು ಭಗವಂತನಿಗೆ ಬಳಸಲಾಗಿದೆ. ಭಕ್ತನ ಮೊರೆಯನ್ನೂ ಅವನ ದೀನವಾದ ದನಿಯನ್ನೂ ಕೇಳಿ ಸಲಹಬೇಕಾದ ಹೊಣೆಗಾರಿಕೆ ಪರಮಾತ್ಮನ ಮೇಲಿದೆಯೆಂದು ಕವಿಯು ಹೇಳಿರುವುದು ಸಮಂಜಸವಾಗಿದೆ.

ಶೇಷಪ್ಪ ಕವಿಯ ಇನ್ನೊಂದು ಪದ್ಯವು ಸಂಪೂರ್ಣವಾಗಿ ಮಹಾವಿಷ್ಣುವಿನ ರೂಪವಿಶೇಷಗಳು, ಆಯುಧ ಪ್ರಕಾರಗಳ ಸ್ತುತಿಗೆ ಮೀಸಲಾಗಿದೆ. ಇಲ್ಲಿ ಕವಿಯು ತನ್ನ ಮಾತೃಭಾಷೆಯಾದ ತೆಲುಗನ್ನು ಬಳಸದೆ ಸಂಸ್ಕೃತಭಾಷೆಯನ್ನು ಬಳಸಿ ಅದರ ಬಗ್ಗೆ ಅಭಿಮಾನವನ್ನು ವ್ಯಕ್ತಪಡಿಸಿದ್ದಾನೆ. ಇದು ಕವಿಯ ಸಾಮರ್ಥ್ಯಕ್ಕೊಂದು ಉದಾಹರಣೆಯಾಗಿದೆ.

ದಶಾವತಾರಗಳಲ್ಲಿ ಐದನ್ನು ತಮ್ಮ ಎರಡು ಪದ್ಯಗಳಲ್ಲಿ ಕವಿಯು ನಿರೂಪಿಸಿರು ವುದನ್ನು ಸ್ವಲ್ಪ ವಿವರವಾಗಿ ಈ ಸಂದರ್ಭದಲ್ಲಿ ಗಮನಿಸಬೇಕು -

*ಮತ್ಸ್ಯಾವತಾರಮ್ಮೈ ಮಡುಗುಲೋಪಲಜೊಚ್ಚಿ*
*ಸೋಮಕಾಸುರುದ್ರುಂಚಿ ಚೋದ್ಯಮಗನು*
*ದೆಚ್ಚಿ ವೇದಮುಲಲ್ಲ ದೇವ ಭೂಸುರಲುಕು*
*ಮೆಚ್ಚಿಯಿಚ್ಚಿತಿ ನೀವು ಮೇಲುನೊಂದ*
*ನಾ ವೇದಮುಲನಿಯ್ಯನಾಚಾರ ನಿಷ್ಠಲ*
*ನನುಭವಿಂಚುಚು ನುಂದುರವನಿಸುರುಲು*
*ಸಕಲ ಪಾಪಂಬುಲು ಶಮಸಿಪೋವುನಟಂಚು*
*ಮನುಜಲಂದುರು ನೀದು ಮಹಿಮದಲಿಸಿ*

*ಮುಂದುರಿಟುವಂಟಿದಾರುನೀಯುನಿಕಿ ದಲಿಯು*
*ವಾರಲುಕು ವೇಗ ಮೋಕ್ಷಂಬುವಚ್ಚುನನಘ*

ಈ ಪದ್ಯದ ಭಾವಾರ್ಥವನ್ನು ನೋಡುವುದಾದರೆ, 'ಮತ್ಸ್ಯಾವತಾರದಿಂದ ಸಾಗರದ ಒಳಹೊಕ್ಕು ಸೋಮಕಾಸುರನನ್ನು ಹಿಡಿದು ಕೊಂದು ಹಾಕಿರುವೆ. ದೇವಲೋಕದ ಭೂಸುರರಿಗೆ ಅವರು ಮೆಚ್ಚಿಕೊಳ್ಳುವ ಹಾಗೆ ವೇದಗಳನ್ನು ತಂದುಕೊಟ್ಟಿರುವೆ. ಜಗತ್ತು ತಲೆದೂಗುವ ಹಾಗೆ ಮೇಲ್ತರದ ಕಾರ್ಯವನ್ನು ನಿರ್ವಹಿಸಿರುವೆ. ನೀನು ತಂದುಕೊಟ್ಟ ವೇದಗಳನ್ನು ವಿಪ್ರರು ಅರಿತು, ಆಚರಿಸುವಂತೆ ಮಾಡಿರುವೆ. ಎಲೈ ಅಸುರಾಂತಕನೆ, ನಿನ್ನ ಮಹಿಮೆಯಿಂದ ಸಕಲ ಪಾಪಗಳು ದೂರವಾಗುವುದೆಂದು ಹೇಳುವರು. ಅರವಿಂದ ನಯನನೆ, ನಿನ್ನ ಅರಿತವರಿಗೆ ಈ ಜಗತ್ತಿನಲ್ಲಿ ಬೇಗ ಮೋಕ್ಷಪ್ರಾಪ್ತವಾಗುತ್ತದೆ.'

*ಕೂರ್ಮಾವತಾರವೈಕುಧರಂಬು ಕ್ರಿಂದನು*
*ಕೋರ್ಕೆ ತೋನುಂಡವಾಕೂಮರು ಮಿಗುಲ*
*ವಾರಾಹರೂಪವ್ಯೆ ವನಭೂಮುಲನು ಜೊಚ್ಚಿ*
*ಶಿಕ್ಷಿಂಪವು ಹಿರಣ್ಯಾಕ್ಷುನವುಡು*
*ನರಸಿಂಹಮೂರ್ತಿವ್ಯೆ ನರಬೋಜನು ಹಿರಣ್ಯ*
*ಕಶಿಪುನಿ ದ್ರುಂಪವಾಕಾಂತಿಮೀರ*
*ವಾಮನರೂಪಿವ್ಯೆವಸುಧಲೋ ಬಲಿಚಕ್ರ*
*ವರ್ತಿನಣಂಚವಾ ವ್ಯೆರಮುಡಿಗಿ*

*ಯಿಟ್ಟು ಪನುಲೆಲ್ಲ ಜೇಯಗಾನೆವ್ವರಿಕಿನಿ*
*ವಗುನು ನರಸಿಂಹ ನೀಕೇ ಪಾತಗುನುಗಾಳ*

ಈ ಪದ್ಯದ ಭಾವವೇನೆಂದರೆ, 'ಕೂರ್ಮಾವತಾರವನ್ನೆತ್ತಿ ನಿನ್ನ ಬೆನ್ನಿನ ಮೇಲೆ ನೀನು ಹಗುರವಾಗಿ ಬೆಟ್ಟವನ್ನೆತ್ತಿಟ್ಟೆಯಲ್ಲವೆ? ವರಾಹಾವತಾರದಿಂದ ವನಭೂಮಿಯಲಿ ಬಂದು ಹಿರಣ್ಯಾಕ್ಷನನ್ನು ನೀನು ಶಿಕ್ಷಿಸಿದೆಯಲ್ಲವೆ? ಮತ್ತೊಮ್ಮೆ ನರಸಿಂಹರೂಪದಲಿ ಸ್ತಂಭದಿಂದುದಯಿಸಿ ನಿನ್ನ ಮಹಿಮೆಯಿಂದ ಹಿರಣ್ಯಕಶಿಪುವನ್ನು ಸಂಹಾರ ಮಾಡಿದೆಯಲ್ಲವೇ. ಈ ವಸುಧೆಯಲಿ ಇನ್ನೊಂದು ಬಾರಿ ವಾಮನ ರೂಪದಿಂದ ಬಂದಿಳಿದೆ. ಬಲಿ ಚಕ್ರವರ್ತಿಯನ್ನು ವ್ಯೆರದಿಂದ ತುಳಿದು ಪಾತಾಳಕಟ್ಟಿದೆ. ಇಂತಹ ನಿನ್ನ ಕಾರ್ಯಗಳು ಇತರರಿಗೆ ಅಸದಳವಾದದ್ದು. ಇದು ನಿನಗೊಬ್ಬನಿಗೆ ಮಾತ್ರ ಸಾಧ್ಯವಾಗಿದೆ.'

ನರಸಿಂಹಸ್ವಾಮಿಯನ್ನೆ ನೇರವಾಗಿ ಗಮನದಲ್ಲಿಟ್ಟುಕೊಂಡು ಶೇಷಪ್ಪ ಕವಿಯು ತನ್ನ ಶತಕದ ಮೂಲಕವಾಗಿ ವ್ಯೆರಾಗ್ಯ-ನೀತಿಗಳನ್ನು ಬೋಧಿಸುತ್ತಿರುವುದು ಇಲ್ಲಿನ ಪದ್ಯಗಳ ಮೂಲಕ ಅರಿತುಕೊಳ್ಳಬಹುದಾದ ವಿಚಾರವಾಗಿದೆ. ಕವಿಯೇ ಹೇಳಿಕೊಂಡಿರುವ ಹಾಗೆ ಈ ರೀತಿಯ ಪ್ರತಿಭೆಯು ಯಾವ ಶಾಸ್ತ್ರಗ್ರಂಥಗಳ ಅಭ್ಯಾಸದಿಂದಾಗಲಿ, ಅಮರಕಾಂಡಗಳ ಅಧ್ಯಯನದಿಂದಾಗಲಿ ದೊರಕೊಂಡಂತೆ ಕಾಣುವುದಿಲ್ಲ. ಭಗವಂತನ ಕಟಾಕ್ಷದಿಂದ ಈ ರೀತಿಯ ಸಾಮರ್ಥ್ಯವು ದೊರೆಯಬಹುದಲ್ಲದೆ ಅದು ಪ್ರಜ್ಞೆಯ ಅಳವಲ್ಲ ಎಂದಿರುವ ಕವಿವಾಣಿಯನ್ನು ಉಲ್ಲೇಖಿಸಬಹುದಾಗಿದೆ.



## ಅಧ್ಯಾಯ - 11

# ಕನ್ನಡ ಭಾಗವತ ಕವಿಗಳು

ಕುಮಾರವ್ಯಾಸನನ್ನು ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಯುಗಪ್ರವರ್ತಕನೆಂಬುದಾಗಿ ಗುರುತಿಸಲಾಗಿದೆ. ಹದಿನೈದನೆ ಶತಮಾನದಿಂದ ಆಧುನಿಕ ಕಾಲದವರೆಗೆ ಹರಡಿರುವ ಈ ಕಾಲಘಟ್ಟದಲ್ಲಿ ದೇಶೀಪ್ರಚುರತೆ ಪ್ರಧಾನವಾದದ್ದೆಂದು ಹೇಳಬಹುದು. ಷಟ್ಪದಿ, ಸಾಂಗತ್ಯ ತ್ರಿಪದಿ, ಕೀರ್ತನೆ ಇವುಗಳ ಪ್ರಸಾರವು ಈ ಯುಗದಲ್ಲಿ ಹೆಚ್ಚಾಗಿದೆ. ವಿಜಯನಗರದ ರಾಯರ ಮತ್ತು ಮೈಸೂರು ಒಡೆಯರ ವಿಶಾಲವಾದ ಛತ್ರದಲ್ಲಿ ಬೇರೆ ಬೇರೆ ಮಾಂಡಳಿಕರ ಆಶ್ರಯದಲ್ಲಿ ಕುಮಾರವ್ಯಾಸ ಯುಗದ ವಾಙ್ಮಯವು ಬೆಳೆದು ಬಂದಿದೆ. ಈ ಯುಗದ ಪ್ರಾರಂಭ ಕಾಲದ ಮಹಾಕವಿಯಾದ ಕುಮಾರವ್ಯಾಸನು ಮುಂದಿನ ಕವಿಗಳ ಮೇಲೆ ತನ್ನ ದರ್ಶನದ ಮತ್ತು ದೇಸಿನಿಷ್ಠತೆಯ ಪ್ರಭಾವವನ್ನು ಬೀರಿದ್ದಾನೆ.

ಭಾಗವತ ವಾಙ್ಮಯವು ವಿಪುಲವಾಗಿ ಬೆಳೆದದ್ದು ಕುಮಾರವ್ಯಾಸ ಯುಗದಲ್ಲಿಯೇ ಎಂದು ಹೇಳಬೇಕು. ಕುಮಾರವ್ಯಾಸನೇ ತನ್ನ ಭಾರತದಲ್ಲಿ ಅದಕ್ಕೆ ದೃಷ್ಟಾಂತವನ್ನು ಒದಗಿಸಿರುವುದನ್ನು ಕಾಣಬಹುದಾಗಿದೆ. ಅವನ ಪ್ರತ್ಯಕ್ಷ-ಅಪ್ರತ್ಯಕ್ಷ ಪ್ರಭಾವದಿಂದ ಅನೇಕ ಭಾಗವತ ಕವಿಗಳು ಮುಂಬರಿದು ರಾಮಾಯಣ, ಭಾರತ, ಭಾಗವತ ಪುರಾಣಗಳನ್ನು ಇವನ್ನು ಕನ್ನಡಕ್ಕೆ ತಂದು ತಮ್ಮ ದರ್ಶನಕ್ಕೆ ಮೂರ್ತಸ್ವರೂಪ ಕೊಟ್ಟರು. ಭಾಗವತ ಸಾಹಿತ್ಯದ ಒಂದು ವಿಶಿಷ್ಟಶಾಖೆಯಾಗಿ ಹಿಂದಿನ ಯುಗದಲ್ಲಿ ಮೊಳೆತ ದಾಸವಾಙ್ಮಯವು ಈ ಯುಗದಲ್ಲಿ ಸಮೃದ್ಧವಾಗಿ ಬೆಳೆಯಿತು.

ಕುಮಾರವ್ಯಾಸನು ಕನ್ನಡಕ್ಕೆ ತಲೆಮಣಿಯಾದ ಕವಿಗಳಲ್ಲಿ ಒಬ್ಬನಾಗಿದ್ದಾನೆ. ಅವನ ಚರಿತ್ರೆ ಬಹುಶಃ ಕಣ್ಮರೆಯಾಗಿದ್ದರೂ ಅವನ ಕೃತಿ ನಮ್ಮ ಕಣ್ಣಮುಂದಿದೆ. ಅದೇ ಹತ್ತು ಪರ್ವಗಳಲ್ಲಿರುವ 'ಕನ್ನಡ ಭಾರತ' ಇಲ್ಲವೆ 'ಗದುಗಿನ ಭಾರತ'. ಹತ್ತು ಪರ್ವಗಳ ಈ ಕೃತಿ ಹತ್ತು ದಿಕ್ಕುಗಳಲ್ಲಿ ಹರಡಿದಂತೆ ವಿಶಿಷ್ಟವಾಗಿದೆ, ವಿಶಾಲವೂ ಆಗಿದೆ. ಸಮಗ್ರಭಾರತವನ್ನು ಆದಿ ಪಂಪನ ತರುವಾಯ ಸಮರ್ಥ ರೀತಿಯಲ್ಲಿ ನಿರೂಪಿಸಿದವನೆಂದರೆ ಕುಮಾರವ್ಯಾಸನೆಂದೇ ಹೇಳಬಹುದಾಗಿದೆ.

ಕುಮಾರವ್ಯಾಸನು ತನ್ನ ಕೃತೀಯಾದ ಸತ್ಕರ್ಣಾಟಕ ಭಾರತ ಕಥಾಮಂಜರಿಯಲ್ಲಿ ಕೃಷ್ಣ ಕಥೆಯನ್ನು ಸುಲಭವಾದ ಭಾಮಿನೀ ಷಟ್ಪದಿಯಲ್ಲಿ, ಸುಲಲಿತವಾದ ರೀತಿಯಲ್ಲಿ ನೀಡಿರುತ್ತಾನೆ. ಈತನ ಈ ಕೃತಿಯ ರೀತಿನೀತಿಗಳನ್ನು ಉಳಿದ ಕವಿಗಳು ಅನುಸರಿಸಿ ಕುಮಾರವ್ಯಾಸವನ್ನು ಈ ಯುಗದ ತಲೆಮಣಿ ಮಹಾಕವಿಯಾಗಿ ಪರಿಗಣಿಸಿದ್ದಾರೆ.

ಕುಮಾರವ್ಯಾಸನ ಪ್ರೇರಣೆಯಿಂದ ತಲೆದೋರಿದ ಮತ್ತೊಬ್ಬ ಕವಿಯೇ ಕುಮಾರ ವಾಲ್ಮೀಕಿ ಎಂದು ಹೆಸರಾಗಿರುವ ತೊರವೆ ನರಹರಿ. ಈತನ ಕಾಲವನ್ನು ಕುಮಾರವ್ಯಾಸ ಕಾಲದ ನಂತರವೆಂದು ಹೇಳಬಹುದಾಗಿದೆ. ಬಿಜಾಪುರದ ಬಳಿಯಿರುವ ತೊರವೆ ಎಂಬ ಗ್ರಾಮವು ಈತನು ಜೀವಿಸಿದ್ದ ಸ್ಥಳವಾಗಿದೆ. ಇಲ್ಲಿನ ತೊರವೆ ನರಸಿಂಹನು ಈತನ ಆರಾಧ್ಯ ದೈವವಾಗಿದ್ದಾನೆ.

ಸ್ಮಾರ್ತ ಭಾಗವತ ಕವಿಯಾದ ತೊರವೆ ನರಹರಿಯು 'ತೊರವೆ ರಾಮಾಯಣ'ವೆಂಬ ಐದು ಸಾವಿರ ಭಾಮಿನೀ ಷಟ್ಪದಿ ಪದ್ಯಗಳುಳ್ಳ ಕಾವ್ಯವನ್ನು ರಚಿಸಿರುತ್ತಾನೆ. ವಾಲ್ಮೀಕಿ ರಾಮಾಯಣದ ಎಲ್ಲ ಕಾಂಡಗಳನ್ನು ಮೊದಲ ಸಲ ಅನುವಾದಿಸಿದ ಕನ್ನಡ ಕಾವ್ಯವೆಂಬ ಹಿರಿಮೆ ಈ ಕಾವ್ಯಕ್ಕೆ ಇರುವುದಾಗಿದೆ. ಕುಮಾರವ್ಯಾಸನಂತೆ ಭಾರತೀಯ ಪರಂಪರೆಯಲ್ಲಿ ಪರಮಪೂಜ್ಯವಾದ ಗ್ರಂಥವನ್ನು ಕುಮಾರವಾಲ್ಮೀಕಿ ಅನುವಾದಕ್ಕೆಂದು ಆರಿಸಿದನು. ಅವನ ಹಾಗೆ ಭಾಗವತದೃಷ್ಟಿಯನ್ನು ಬೆಳೆಸಿಕೊಂಡನು. ಈತನ ಭಾಷೆ ಮತ್ತು ಭಾಮಿನೀಷಟ್ಪದಿಯ ನುಡಿಗಳಲ್ಲಿ ಮಿಗಿಲಾದ ಶಕ್ತಿ ಆಕರ್ಷಣೆಗಳನ್ನು ಕಾಣಬಹುದಾಗಿದೆ. ರಾಮನನ್ನು ವಿಷ್ಣುವಿನ ಅವತಾರವೆಂದು ಕಾಣಲಾಗಿರುವ ಕೃತಿಯಲ್ಲಿ ನರಸಿಂಹನ ಮನವಿದೆ.

ಕನ್ನಡ ಸಾಹಿತ್ಯದಲ್ಲಿ ಭಾಗವತ ಪಂಥವನ್ನು ಕುಮಾರವ್ಯಾಸ ಮತ್ತು ಕುಮಾರ ವಾಲ್ಮೀಕಿಗಳ ನಂತರ ಅವರ ಮಾರ್ಗದಲ್ಲಿಯೇ ಪ್ರವರ್ಧಮಾನಕ್ಕೆ ತಂದ ಮತ್ತೊಬ್ಬ ಹಿರಿಯ ಕವಿಯೆಂಬ ಹೆಗ್ಗಳಿಕೆಯನ್ನು ಲಕ್ಷ್ಮೀಶ ಪಡೆದುಕೊಂಡಿದ್ದಾನೆ. ಕವಿಚೂತವನ ಚೈತ್ರ ಎಂಬ ಬಿರುದು ಹೊಂದಿದ್ದ ಲಕ್ಷ್ಮೀಶ ದೇವನೂರು ಗ್ರಾಮದವನು. ರಾಮಾಯಣ, ಮಹಾಭಾರತಗಳು ಎರಡನ್ನೂ ಒಂದೇ ಕಡೆ ಸಂಗ್ರಹಿಸಿ ಲಕ್ಷ್ಮೀಶನು ನೀಡಿರುವ 'ಜೈಮಿನಿ ಭಾರತ'ವೆಂಬ ಹೆಸರಿನ ಕೃತಿಯು ಪ್ರಕೃತಿ ವರ್ಣನೆಗಳ ಪ್ರಶಂಸೆಗಳೊಂದಿಗೆ ಇಂದಿಗೂ ಪ್ರಸ್ತುತವಾಗುಳಿದಿದೆ.

ಕನ್ನಡ ಸಾಹಿತ್ಯದಲ್ಲಿ ಕುಮಾರವ್ಯಾಸ, ಕುಮಾರ ವಾಲ್ಮೀಕಿ, ಲಕ್ಷ್ಮೀಶರ ಪರಂಪರೆಯನ್ನು ಹಲವಾರು ಹಿರಿಕಿರಿಯ ಕವಿಗಳು ಮುಂದುವರೆಸಿಕೊಂಡು ಹೋಗಿರಬಹುದಾದರೂ ಭಾಗವತ ಪಂಥರ ಕಾವು ಮತ್ತು ಪ್ರಖರತೆಗಳನ್ನು ಸಾಹಿತ್ಯದ ಮೂಲಕವಾಗಿ ಸವಿಯ ಬೇಕಾದರೆ ಮೇಲ್ಕಂಡ ಮೂವರು ಕವಿಗಳ ಕೃತಿಗಳಿಗೆ ನಾವು ಶರಣು ಹೋಗಬೇಕಾದುದು ಅನಿವಾರ್ಯವಾಗಿದೆ. ಇವರು ನರಸಿಂಹ ಪ್ರಸಂಗವನ್ನು ತಮ್ಮ ಕೃತಿಗಳಲ್ಲಿ ಪ್ರಾಸಂಗಿಕವಾಗಿ ತೆಗೆದುಕೊಂಡಿರುವ ಭಾಗವನ್ನು ಮುಂದೆ ನಿರೂಪಿಸಲು ಯತ್ನಿಸಲಾಗಿದೆ.

# ಕುಮಾರ ವ್ಯಾಸ

ಭಾಗವತ ಪಂಥದ ಸುಪ್ರಸಿದ್ಧ ಕವಿಯಾದ ಕುಮಾರವ್ಯಾಸನು ಕಲಿಯುಗವನ್ನು ದ್ವಾಪರವನ್ನಾಗಿ ಮಾಡಿದ್ದಾನೆ. ಹದಿನೈದನೆ ಶತಮಾನದಲ್ಲಿ ಜೀವಿಸಿದ್ದ ಈತನು ರಚಿಸಿದ ಕರ್ಣಾಟಕ ಭಾರತ ಕಥಾಮಂಜರಿ ಅಥವಾ ಗದುಗಿನ ಭಾರತದಲ್ಲಿ ಶ್ರೀಕೃಷ್ಣನ ಮಹಿಮೆಯನ್ನು ಉಜ್ವಲಗೊಳಿಸಲಾಗಿದೆ. ದಶಾವತಾರದ ಎಂಟನೆಯ ಅವತಾರವಾಗಿರುವ ಶ್ರೀಕೃಷ್ಣನ ಕತೆಯಾದ ಕುಮಾರವ್ಯಾಸ ಭಾರತವು ಒಂದು ಇತಿಹಾಸ ಕಾವ್ಯ. ಇದರ ನಾಯಕ ನಾಯಕಿಯರು ಯಾರೇ ಆದರೂ ನರ ನಾಟಕವ ನಟಿಸಿ ತೋರಿದ ಕೃಷ್ಣನಿಗೆ ಇದರಲ್ಲಿ ಅಗ್ರಪೂಜೆ ಸಂದಿದೆ.

'ಕುಮಾರವ್ಯಾಸ ಭಾರತ'ದಲ್ಲಿ ನರಸಿಂಹನ ಪ್ರಸಕ್ತಿಯನ್ನು ತಿಳಿಸುವ ಮೂರು ಪದ್ಯಗಳು ಇಲ್ಲಿವೆ -

*ಆ ಹಿರಣ್ಯಾಕ್ಷನ ಸಹೋದರ*
*ನೀ ಹರಿಯನವಗಡಿಸಿ ಧೈವ*
*ದ್ರೋಹಿ ಬಹುವಿಧ ವ್ಯಥೆಗಳಲಿ ಬೇಸರಿಸಿದನು ಮಗನ*
*ಆಹವದಲಚ್ಯುತ ಮುಕುಂದಮ*
*ಹಾಹಿತಲ್ಪಮಹೇಂದ್ರ ಮಧ್ವ*
*ತ್ರಾಹಿಯೆಂದನವರತ ತುತಿಸಿದನು ಪ್ರಹ್ಲಾದ*

*ಕಾವುದೀತನ ನಾಮವಾ ಪ್ರ*
*ಹ್ಲಾದನಾಸುರು ಬೇಸರನು ಬಳಿ*
*ಕೀ ದಯಾಂಬುಧಿ ದನುಜಪತಿ ದಿಟ್ಟಿಸಿದ ಕಂಬದಲಿ*
*ಆದುದಾವಿರ್ಭಾವ ಸಿಡಿಲಿನ*
*ಸೋದರದ ಕಣ್ಣುಗಳ ಭಾಳದ*
*ಬೀದಿಗಿಚ್ಚಿನ ರೌದ್ರದಲಿ ನರಸಿಂಹ ರೂಪಾಗಿ*

*ಉಗುರೊಳಸುರನ ಕರುಳದಂಡೆಯು*
*ನುಗಿದು ಕೊರಳಲಿ ಹಾಯ್ಕಿದೈತ್ಯನ*
*ಮಗನ ಪತಿಕರಿಸಿದನು ತತ್ಕ್ರೋಧಾಗ್ನಿ ಪಲ್ಲವಿಸಿ*
*ಭುಗಿಭುಗಿಲ್ ಭುಗಿಲೆಂದು ಕಟ್ಬೊಗೆ*
*ನೆಗೆದುಲುರಿ ಹೊಡೆದವುಬುಜಜಾಡಂ*
*ಬಗರಗೆಯು ಭೇದಿಸಿತು ಈತನ ಕೆಣಕಬೇಡೆಂದ*

ಸಭಾಪರ್ವದಲ್ಲಿ ಬಂದಿರುವ ಈ ಮೂರು ಪದ್ಯಗಳು ಮೇಲುನೋಟಕ್ಕೆ ಸ್ಪಷ್ಟಗೊಳ್ಳುತ್ತಿವೆ. ನರಸಿಂಹಾವತಾರದ ಸನ್ನಿವೇಶವನ್ನು ಸೊಗಸಾಗಿ ತಿಳಿಸುತ್ತವೆ. ಭಾಗವತದ ನರಸಿಂಹಾವತಾರದ ಭಾಗಕ್ಕೆ ಸಂವಾದಿಯಾಗಿವೆ. ಇಲ್ಲಿ ಉಕ್ತವಾಗಿರುವ ಈ ಮೂರು ಪದ್ಯಗಳ ಸ್ವಾರಸ್ಯವನ್ನು ಸ್ಥೂಲವಾಗಿ ಗಮನಿಸಿದಾಗ ಕವಿಯ ಮನದ ಅಂತರಾಳವು ಹೊರಹೊಮ್ಮುತ್ತದೆ.

ಮೊದಲನೆಯ ಪದ್ಯದಲ್ಲಿ ಹಿರಣ್ಯಕಶಿಪು ತನ್ನ ಮಗನಿಗೆ ನೀಡಿದ ಹಿಂಸೆಗೆ ಪ್ರತಿಯಾಗಿ ಪ್ರಹ್ಲಾದನು ತನ್ನನ್ನು ಕಷ್ಟಗಳಿಂದ ಪಾರುಗೊಳಿಸಬೇಕೆಂದು ಬೇಡುವ ವಿಧಾನವಿದೆ. ಎರಡನೆಯ ಪದ್ಯದಲ್ಲಿ ಕಂಭದಿಂದ ಆವಿರ್ಭವಿಸಿದ ನರಸಿಂಹನ ರೌದ್ರಾವೇಶದಿಂದ ಕೂಡಿದ ರೂಪದ ವರ್ಣನೆಯಿದೆ. ಆತನು ಸಿಡಿಲಿನ ಸೋದರ ಕಣ್ಣುಗಳನ್ನು ಹೊಂದಿದ್ದನೆಂಬ ಮಾತುಗಳಲ್ಲಿ ರೂಪಕಾಲಂಕಾರದ ಬಳಕೆಯಿದೆ. ಮೂರನೆಯ ಪದ್ಯದಲ್ಲಿ ತಿಳಿಸುವಂತೆ ನರಸಿಂಹನು ತನ್ನ ನಖಗಳಿಂದ ಅಸುರನ ಕರುಳದಂಡೆಯನುಗಿದು ಕೊರಳಲಿ ಧರಿಸಿದ ವಿಧಾನವಿದೆ. ಇಲ್ಲಿನ ಅನುಕರಣ ಶಬ್ದಗಳ ಬಳಕೆ ಸದ್ಯದ ಪ್ರಸಂಗದ ತೀವ್ರ ಪರಿಣಾಮವನ್ನು ಸಮರ್ಥವಾಗಿ ನಿರೂಪಿಸುತ್ತದೆ.

'ಕುಮಾರವ್ಯಾಸ ಭಾರತ'ವು ಕೌರವ ಪಾಂಡವರ ಕಥೆಯನ್ನೊಳಗೊಂಡ ವೀರಕಾವ್ಯವಾಗಿದೆ. ಇದರಲ್ಲಿ ಬರುವ ಕೃಷ್ಣನ ಪ್ರಸಂಗಗಳಲ್ಲಿ ಭಾಗವತ ಮನೋಭಾವದ ಕವಿಯು ಉತ್ಕಟವಾದ ಭಕ್ತಿಯನ್ನು ತೋರ್ಪಡಿಸಿದ್ದಾನೆ. ತನ್ನ ಕಾಲದ ಸಾಮಾಜಿಕ ಕಳಕಳಿಯ ಜೊತೆ ಧಾರ್ಮಿಕ ಪುನರುಜ್ಜೀವನವನ್ನು ಇದರಲ್ಲಿ ತಂದಿದ್ದಾನೆ.

ಕೃಷ್ಣನ ಮಹಿಮೆಯನ್ನು ತಿಳಿಸುವ ಹಿನ್ನೆಲೆಯಲ್ಲಿ ಪ್ರಸ್ತುತ ನರಸಿಂಹ ಪ್ರಸಂಗವನ್ನು ಕ್ವಚಿತ್ತಾಗಿ ನೋಡಬಹುದಾದರೂ ಮಹಾಕವಿಯೊಬ್ಬ ನರಸಿಂಹಾವತಾರವನ್ನು ಕಂಡ ರಮ್ಯ ಚಿತ್ರಣವನ್ನು ಇದು ಒಳಗೊಂಡಿದೆ.

ಭಕ್ತಿಭಾವವನ್ನು ಸಾಹಿತ್ಯ ಕೃತಿಯ ಮೂಲಕವಾಗಿ ಉತ್ಕಟವಾಗಿ ಸಾಮಾನ್ಯರಿಗೂ ಮನಮುಟ್ಟುವಂತೆ ನಿರೂಪಿಸಲಾಗಿರುವ ಈ ಮಹಾಕವಿಯ ಕಾವ್ಯದಲ್ಲಿ ಎಲ್ಲ ರಸಗಳ ಸಮ್ಮಿಲನವಿದೆ. ಮಹಾಭಾರತದ ರಸಘಟ್ಟಗಳನ್ನು ಭಾಮಿನೀ ಷಟ್ಪದಿಯ ಪ್ರಕಾರದಲ್ಲಿ ಮನೋಜ್ಞವಾಗಿ ರಚಿಸಿ ಕರ್ನಾಟಕ ಜನತೆಗೆ ನೀಡಿರುವ ಈತನು ಜನತೆಯ ಗೌರವಕ್ಕೆ ಪಾತ್ರನಾಗಿದ್ದಾನೆ. ಆಗಸದೆತ್ತರಕ್ಕೆ ಸಾಹಿತ್ಯದ ಪತಾಕೆಯನ್ನು ಕೊಂಡೊಯ್ದಿದ್ದಾನೆ. ಆದ್ದರಿಂದಲೇ ಈತನನ್ನು ಕುರಿತು ಕನ್ನಡದ ವಿಶ್ವಕವಿ ಕುವೆಂಪು ಅವರು 'ಕುಮಾರವ್ಯಾಸನು ಹಾಡಿದನೆಂದರೆ ಕಲಿಯುಗ ದ್ವಾಪರವಾಗುವುದು. ಭಾರತ ಕಣ್ಣಲಿ ಕುಣಿಯುವುದು' ಎಂದು ನುಡಿದಿರುವ ಮಾತುಗಳಿಗೆ ಸಾರ್ವಕಾಲಿಕವಾದ ಮೌಲ್ಯವುಂಟಾಗಿರುವುದೆಂದು ಹೇಳುವುದು ಖಂಡಿತಾ ಯಥೋಚಿತವಾದ ಮಾತಲ್ಲದೆ, ಅತಿಶಯೋಕ್ತಿಯ ನುಡಿಗಳಂತೂ ಅಲ್ಲವೆನ್ನಬಹುದು.

# ಕುಮಾರ ವಾಲ್ಮೀಕಿ

ಗದುಗಿನ ಭಾರತದಂತೆ ಕನ್ನಡ ಸಾಹಿತ್ಯದಲ್ಲಿ ತೊರವೆ ರಾಮಾಯಣವೂ ಪ್ರಸಿದ್ಧ ವಾದದ್ದು. ಇದೂ ಸಹ ಭಾಮಿನೀ ಷಟ್ಪದಿಯ ರಚನೆಯಾಗಿದ್ದು ಇದನ್ನು ಕುಮಾರ ವಾಲ್ಮೀಕಿಯು ರಚಿಸಿರುತ್ತಾನೆ. ತೊರವೆಯ ನರಹರಿಯೆಂಬ ನಿಜನಾಮಧೇಯವನ್ನು ಹೊಂದಿದ ಕವಿಗೆ ಇದ್ದ ಬಿರುದು 'ಕುಮಾರ ವಾಲ್ಮೀಕಿ'. ಸಂಸ್ಕೃತ ಕೃತಿಯಾದ 'ವ್ಯಾಸಭಾರತ' ವನ್ನು ಕುಮಾರವ್ಯಾಸನು ಕನ್ನಡಭಾಷಾ ಸಾಹಿತ್ಯಕಟ್ಟಡದೊಳಗೆ ಅಳವಡಿಸಿದ್ದರೆ, ಆದಿಕಾವ್ಯವಾದ 'ವಾಲ್ಮೀಕಿ ರಾಮಾಯಣ'ವನ್ನು ಕುಮಾರ ವಾಲ್ಮೀಕಿಯು ಕನ್ನಡ ಭಾಷೆ, ಸಾಹಿತ್ಯಗಳ ಚೌಕಟ್ಟಿನಲ್ಲಿಟ್ಟಿರುತ್ತಾನೆ.

ರಾಮಾಯಣವನ್ನು ನಮ್ಮ ರಾಷ್ಟ್ರದ ಅನೇಕ ಭಾಷೆಗಳಲ್ಲಿ ಕಾಣಬಹುದು. ಇದರ ಮಹತ್ವವು ಬಾನೆತ್ತರಕ್ಕೆ ಮುಟ್ಟಿದೆ. ದೇಶದ ಅವಿಭಾಜ್ಯ ಅಂಗದಂತೆ ಈ ಕಾವ್ಯ ಕೂಡಾ ಪ್ರಸಿದ್ಧವಾಗಿದೆ. ಅಮರಕೃತಿಯ ಸ್ಥಾನಕ್ಕೇರಿ ಮಾನವ ಸಂಬಂಧದಲ್ಲಿ ನೂತನವಾದ ವೀರ ಮತ್ತು ದೈವೀ ಸಂಪತ್ತನ್ನು ತುಂಬುವ ಅದ್ವಿತೀಯ ಕಾವ್ಯವಾಗಿ ಭಾರತದ ಎಲ್ಲೆಡೆ ಚಿರಸ್ಥಾಯಿಯಾಗಿ ಉಳಿದಿದೆ. 'ರಾಮಾಯಣದ ಕವಿಗಳ ಭಾರದಿಂದ ಆದಿಶೇಷನೂ ಸಹ ತಿಣುಕಾಡಿದ'ನೆಂಬ ಕವಿವಾಣಿಯು ಇದರ ಸಮೃದ್ಧತೆ ಮತ್ತು ವ್ಯಾಪಕತೆಗಳಿಗೆ ಹಿಡಿದ ಕೈಗನ್ನಡಿಯಾಗಿದೆ.

'ತೊರವೆ ರಾಮಾಯಣ'ದಲ್ಲಿ ಸುಮಾರು ಐದು ಸಾವಿರ ಪದ್ಯಗಳಿವೆ. ಆರು ಕಾಂಡಗಳಲ್ಲಿ ವಿಂಗಡಣೆಗೊಂಡಿರುವ ಈ ಕೃತಿಯು ನೂರ ಹನ್ನೆರಡು ಸಂಧಿಗಳಿಂದ ಕೂಡಿದೆ. ತನ್ನ ಕಾವ್ಯಕ್ಕೆ ತೊರವೆಯ ಅಧಿಪತಿಯಾದ ನರಸಿಂಹನೇ ನಾಯಕನೆಂದು ಹೇಳುವ ಕವಿಯು ತನ್ನ ಈ ಪರಮ ಕೃತಿಯಲ್ಲಿ ಮಾಧ್ವಮತದ ತತ್ತ್ವಸಾರವನ್ನು ಪ್ರಜ್ವಲಗೊಳಿಸಿದ್ದಾನೆ.

ತೊರವೆ ನರಹರಿಯ ಕಾಲವನ್ನು ನಿರ್ದಿಷ್ಟವಾಗಿ ಹೇಳಲಾಗದಿದ್ದರೂ ಕುಮಾರವ್ಯಾಸನ ನಂತರ ಸುಮಾರು ಹದಿನಾರನೇ ಶತಮಾನದ ಆದಿಭಾಗದಲ್ಲಿ ಈತನು ಆದಿಲ್‌ಶಾಹಿ ಮನೆತನದವರ ಕಾಲದಲ್ಲಿ ವಿಜಾಪುರದ ಸಮೀಪದ ತೊರವೆಯಲ್ಲಿ ಜೀವಿಸಿದ್ದನು. ತೊರವೆಯ ನರಸಿಂಹನ ಭಕ್ತನಾದ ಕವಿಯು ಆತನ ಸೇವೆಯಲ್ಲಿ ನಿರತರನಾಗಿದ್ದನು. ತೊರವೆ ನರಹರಿಯ ಕಾವ್ಯವನ್ನು ಸಹ ನರಸಿಂಹನ ಸಾವಿರಾರು ಭಕ್ತರು ಶ್ರದ್ಧಾಭಕ್ತಿಯಿಂದ ಗೌರವಿಸಿ ಅದನ್ನು ಪುರಸ್ಕರಿಸಿದರು. ನರಸಿಂಹನಷ್ಟೇ ಸ್ಥಾನವನ್ನು ನರಹರಿಯ ಕಾವ್ಯವೂ ಗಳಿಸಿಕೊಂಡಿತು. ತೊರವೆಯಲ್ಲಿ ಇಂದಿಗೂ ಸಹ ಕವಿಯ ಕಾವ್ಯವನ್ನು ಪೂಜನೀಯವಾದ ಭಾವನೆಯಿಂದ ಪಠಣ ಮಾಡುವ, ಕವಿಯ ಸಾಹಿತ್ಯದ ಆಶಯಗಳನ್ನು ಪ್ರತಿಬಿಂಬಿಸುವ ರೀತಿಯಲ್ಲಿ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಬರುತ್ತಿರುವುದು ಸ್ವಾಗತಾರ್ಹ ಅಂಶ ವಾಗಿದೆ.

*ಶ್ರೀಜನಕಜಾರಮಣ ವಿಮಲಸ*
*ರೋಜ ಸಂಭವ ಜನಕನನುಪಮ*
*ರಾಜಶೇಖರವಿನುತ ನಿಖಿಳಾಮರಕಿರೀಟ ಜಯ*
*ರಾಜಿತಾವಲ ಲಲಿತ ಪದಪಂ*
*ಕೇಜನಾನತಜನ ದಯಾಸುರ*
*ಭುಜ ತೊರವೆಯರಾಯ ನರಹರಿ ಪಾಲಿಸುಗೆ ಜಗವ*

ತೊರವೆ ರಾಮಾಯಣದ ಮೊದಲನೆ ಪದ್ಯವಾಗಿರುವ ಇದರಲ್ಲಿ ನರಸಿಂಹನ ಸ್ತುತಿಯಿದೆ.

ವಿಷ್ಣುವಿನ ಪಾದಕಮಲಗಳಿಗೆ ವಂದಿಸುತ್ತಿರುವ ಕವಿಯ ಮನೋಭಾವವು ಅಂತರಂಗದಲ್ಲಿ ಆತನು ತೊರವೆಯ ನರಸಿಂಹನೇ ಆಗಿರುವನೆಂಬುದನ್ನು ನಿಚ್ಚಳವಾಗಿ ಪ್ರಕಟಪಡಿಸುವಂತಿದೆ.

ನರಸಿಂಹನ ಪ್ರಸಂಗವಿರುವ ಮತ್ತೊಂದು ಪದ್ಯವು ಹೀಗಿದೆ -

*ಕೆಣಕು ಹೊಂಗಾದಡ ವಿಚಾರವ*
*ನೆಣಿಸದಿರಿ ಭೈರವನ ಮೇಲಣ*
*ರಣದ ಭಾರವು ನಮ್ಮದಂಜಿಕೆಬೇಡ ನಿಮಗೆನುತ*
*ಪ್ರಣತಜನ ಸುರಧೇನು ಸಮನೋ*
*ಗಣ ಮಹಾರಿಪುವೀರ ತೊರವೆಯ*
*ಗುಣಭರಿತ ನರಸಿಂಹನಭಯುವನಿತ್ತವನಿಜಂಗೆ*

ನರಸಿಂಹನು ನಂಬಿದವರನ್ನು ಕೈಬಿಡಲಾರನೆಂಬ ಆತನ ರಕ್ಷಕ ಗುಣವನ್ನು ಈ ಪದ್ಯವು ಸಮರ್ಪಕವಾದ ರೀತಿಯಲ್ಲಿ ವ್ಯಕ್ತಪಡಿಸುತ್ತದೆ. ಯುದ್ಧ ಪ್ರಸಂಗಗಳಲ್ಲಿ, ಮತ್ತು ಭಯ ನಿವಾರಣ ಸಂದರ್ಭಗಳಲ್ಲಿ ಆತನ ಪಾತ್ರ ಇದ್ದೇ ಇರುತ್ತದೆ ಎಂಬ ಆತನ ಅಭಯಗುಣವನ್ನು ಸಹ ಇಲ್ಲಿ ಸ್ಪಷ್ಟವಾಗಿ ತಿಳಿಸಿಕೊಡಲಾಗಿದೆ. ವೀರಗುಣ ಪ್ರತಿಪಾದನೆಗೆ ಕೂಡಾ ಕವಿ ಇಲ್ಲಿ ಅವಕಾಶ ಕಲ್ಪಿಸಿಕೊಂಡಿದ್ದಾನೆ.

ತೊರವೆಯ ನರಸಿಂಹ ದೇವಾಲಯದಲ್ಲಿ ಕವಿಯ ಓಲೆಗರಿಗಳನ್ನು ರಕ್ಷಿಸಿಟ್ಟಿರುವ ಪವಿತ್ರವಾದ ಸ್ಥಳವಿದೆ. ಕವಿಯ ದೊಡ್ಡ ಭಾವಚಿತ್ರವನ್ನು ನರಸಿಂಹನ ದರ್ಶನಕ್ಕೆ ಹೋಗುವ ಮಾರ್ಗದಲ್ಲಿ ಸುರಕ್ಷಿತವಾದ ಜಾಗದಲ್ಲಿ ತೂಗುಹಾಕಿದ್ದಾರೆ. ವೈಭವವಿದ್ದ ಕಡೆ ವೈರಾಗ್ಯವೂ ಇರುವುದೆಂಬ, ಆಧ್ಯಾತ್ಮಿಕ ಹೊಳೆಯೂ ಹರಿಯುತ್ತಿರುತ್ತದೆಯೆಂಬ ತತ್ವಕ್ಕೆ ಅನುಗುಣವಾಗಿ ತೊರವೆ ನರಹರಿಯ ಕಾವ್ಯ ಮತ್ತು ನರಸಿಂಹ ದೇವಾಲಯಗಳು ಇಂದಿಗೂ ತೊರವೆ ಗ್ರಾಮದಲ್ಲಿ ಉಜ್ವಲವಾಗಿ ಸಾಹಿತ್ಯ ಹಾಗೂ ಸಾಮಾಜಿಕ ಜೀವನವನ್ನು ಬೆಸೆದಿದೆ.

# ಲಕ್ಷ್ಮೀಶ

ಕನ್ನಡದ ಶ್ರೇಷ್ಠಕವಿಯಾಗಿ ಪ್ರಖ್ಯಾತನಾದ ಲಕ್ಷ್ಮೀಶನು 'ಜೈಮಿನಿ ಭಾರತ'ದ ಕರ್ತೃವಾಗಿದ್ದಾನೆ. ಈತನು ಪರಮ ಭಾಗವಂತನೂ ಹೌದು. ಇವನ ಕಾವ್ಯದಲ್ಲಿ ಬರುವ ಒಂದು ಭಾಗ 'ಸುಧನ್ವ ಕಾಳಗ ಪ್ರಸಂಗ'. ಇದರ ತುಂಬ ಕೃಷ್ಣನ ವರ್ಣನೆ, ಅವನ ಹಿರಿಮೆ ಸ್ತೋತ್ರಗಳು ತುಂಬಿಬಂದಿವೆ. ಆದರೆ ಇದರ ಮುಕ್ತಾಯವು ಕೃಷ್ಣ ಸಂಬಂಧವಾಗಿರದೆ ಅದು ನರಸಿಂಹನ ಪರವಾಗಿರುವುದು ಕಂಡುಬಂದಿದೆ. ಇಲ್ಲಿನ ಕೃಷ್ಣನು ಯುದ್ಧಸನ್ನದ್ಧನಾದ ನರಸಿಂಹನಾಗಿ ಕವಿಗೆ ಕಂಡಿರುವುದು ಆಶ್ಚರ್ಯವೇನಲ್ಲವೆನ್ನಬಹುದು.

*ಹಿಂದೆ ಪ್ರಹ್ಲಾದನಂ ಪಾಲಿಸಿದೆ ಗಡ ದ್ರುಪದ*
*ನಂದನೆಯ ಮಾನಮಂ ಕಾಯ್ದೆಗಡ ಭಕ್ತರ್ಗೆ*
*ಬಂದಡರಸಾವಗಂ ಪರಿಹರಿಪೆಗಡ ದೇವ ನಿನ್ನಂ ಪಸುರ್ಗೊಂಡಡೀ*
*ಇಂದು ಮೊರೆವೊಗುಮೊಡಾರಂ ಕಾಣೆನಕಟ ಗೋ*
*ವಿಂದ ನೀನಲ್ಲದೆ ವಿಚಾರಿಸುವರಿಲ್ಲ ಸಲ*
*ಹೆಂದವಂ ಚಿತ್ತದೊಳುಕೃಷ್ಣನಂ ಧ್ಯಾನಿಸುತ ನಿರ್ಭಯದೊಳಿರುತಿರ್ದನು*

ಈ ಪದ್ಯವು ನರಸಿಂಹನ ಪ್ರಹ್ಲಾದಪರಿಪಾಲನಾ ರೀತಿಯಿಂದ ಆರಂಭಗೊಂಡಿದ್ದರೂ ಅಂತ್ಯದಲ್ಲಿ ಕೃಷ್ಣನ ಧ್ಯಾನದಿಂದ ಮುಕ್ತಾಯಗೊಂಡಿದೆ. ಕವಿಯು ಕಸಿವಿಸಿಗೊಂಡಂತೆ ಮೇಲುನೋಟಕ್ಕೆ ಕಾಣಬರುತ್ತದೆಯಾದರೂ ಮುಂದಿನ ಪದ್ಯದಲ್ಲಿ ಇದನ್ನು ಸರಿಪಡಿಸಿಕೊಂಡಿರುವುದು ಸ್ಪಷ್ಟವಾಗುತ್ತದೆ.

*ಜಯಜಯ ಜನಾರ್ದನ ಮುಕುಂದ ಮುರಮರ್ದನ ವಿ*
*ಜಯ ಮಿತ್ರಗೋವಿಂದ ಪಕ್ಷಿವಾಹನ ಕಮಲ*
*ನಯನ ಪೀತಾಂಬರ ಘನಶ್ಯಾಮ ಹರಿಕೃಷ್ಣವೈಕುಂಠ ನಾರಾಯಣ*
*ಕ್ಷಯರಹಿತರಾಮ ಲಕ್ಷ್ಮೀರಮಣ ನತಸುರಾ*
*ಲಯಧೇನು ಭಕ್ತವತ್ಸಲ ಕೃಪಾಕರ ಮಹಾ*
*ಭಯ ನಿವಾರಣ ನೃಸಿಂಹ ತ್ರಾಹಿ....*

ಜನಾರ್ದನ, ಮುಕುಂದ, ಮುರಮರ್ದನ, ಗೋವಿಂದ, ಹರಿಕೃಷ್ಣ, ವೈಕುಂಠ ನಾರಾಯಣ - ಎಂಬೆಲ್ಲ ರೂಪಗಳೂ ಮಹಾವಿಷ್ಣುವಿಗೆ ಸಂಬಂಧಪಟ್ಟವಾಗಿವೆ. ಇವು ಪ್ರಸಿದ್ಧವಾಗಿವೆ. ಭಗವಂತನ ಧೇನುವಿನಂತಹ ಗುಣವನ್ನು ಆತನ ಭಕ್ತವತ್ಸಲ ಸ್ವಭಾವವನ್ನು ಪ್ರತಿಬಿಂಬಿಸುತ್ತಿವೆ. ಕೃಪಾಕರನಾದ ಆತನು ಮಹಾಭಯನಿವಾರಣನಾಗಿದ್ದಾನೆ. ನೃಸಿಂಹ ತ್ರಾಹಿ ಎಂಬ ಪದ ವಿಶೇಷದಲ್ಲಿ ನನ್ನನ್ನು ಕಾಪಾಡು ಎಂದು ಕೇಳಲಾಗಿದೆ. ನರಸಿಂಹಾರಾಧನೆ ಹಿನ್ನೆಲೆಯಲ್ಲಿ ಭಯ-ಸಂಕಟಗಳಿಂದ ವಿಮುಕ್ತರಾಗುವ ಹಂಬಲವನ್ನು ಇಲ್ಲಿ ಕಾಣಬಹುದಾಗಿದೆ

# ಚೆನ್ನಿಗ

ಕವಿ ಚೆನ್ನಿಗನು ಹದಿನೆಂಟನೇ ಶತಮಾನಕ್ಕೆ ಸೇರಿದವನಾಗಿದ್ದಾನೆ. ಈತನ ಸ್ಥಳ ಉತ್ತರ ಕನ್ನಡ ಜಿಲ್ಲೆಯ ಸಿದ್ದಾಪುರ ತಾಲೂಕಿನಲ್ಲಿರುವ ಹುಕ್ಕಳ. ಇದಕ್ಕೆ ಹೊಕ್ಕುಳಿಕೆ ಪುರವೆಂಬ ಮತ್ತೊಂದು ಹೆಸರು. ಹೆಗ್ಗರಣಿ ಗ್ರಾಮಕ್ಕೆ ಸಮೀಪದಲ್ಲಿರುವ ಈ ಗ್ರಾಮದ ನೆಲಮಾವು ಮಠ ದಲ್ಲಿರುವ ನರಸಿಂಹ ದೇವರು ಪ್ರಸಿದ್ಧಿ ಹೊಂದಿದ್ದಾನೆ. ಕವಿಯು ಸ್ತೋತ್ರ ಮಾಡಿರುವ ವಿಧಾನವನ್ನು ಆತನ ಒಂದು ಕೃತಿಯಲ್ಲಿ ಗಮನಿಸಬಹುದಾಗಿದೆ. ಇದರಿಂದ ತನ್ನ ಕುಲದೈವವಾದ ನರಸಿಂಹನ ಬಗೆಗಿನ ಕವಿಯ ಭಕ್ತಿ-ಭಾವುಕತೆಗಳು ವ್ಯಕ್ತಗೊಂಡಿದೆ. ಹಿಂದಿನ ಭಾಗವತ ಕವಿಗಳ ಮಾರ್ಗದರ್ಶನವು ಕವಿಗೆ ಲಭ್ಯವಾಗಿರುವ ವಿಧಿ-ವಿಧಾನಗಳು ಇದರಿಂದ ಬೆಳಕಿಗೆ ಬಂದಿರುತ್ತವೆ.

ನಾರಸಿಂಹನ ನೆನೆ । ನಾರಸಿಂಹನ ನೆನೆ ।
ನಾರಸಿಂಹನ ನೆನೆ ಮನವೆ ॥
ಶ್ರೀನರಸಿಂಹ ಭಕುತಿಜನವತ್ಸಲ।
ದಾನವಕುಲ ಭಂಜಕನೆ ॥
ಅನವರತಪಾಲಕ ಸುರವಂದ್ಯನೆ ।
ಜ್ಞಾನವನೆನಗೆ ಪಾಲಿಪುದು ॥
ಕರುಣಿಸು ದನುಜಮರ್ದನ ವೀರನರಹರಿ ।
ಕರುಣಿಸು ಕಮಲಜಪಿತನೆ ।
ಕರುಣಿಸು ಸಕಲಾಗಮವಂದ್ಯಗುಣನಿಧಿ ।
ಕರುಣಿಸೆಂದುದು ಸುರನಿಕರ ॥

- ಈ ರೀತಿಯಲ್ಲಿ ನರಸಿಂಹನ ಗುಣಗಣವನ್ನು ಸ್ತುತಿಸುತ್ತ ಕವಿಯು ಮುಂದಿನ ಸಾಲುಗಳಲ್ಲಿ ಭಗವಂತನು ಎಸಗಿದ ಅಸುರ ಸಂಹಾರಕ್ರಿಯೆಯನ್ನು ಸರಳ ಸುಂದರವಾದ ಮಾತುಗಳಲ್ಲಿ ತಿಳಿಸಿಕೊಟ್ಟಿದ್ದಾನೆ.

ಜಯಜಯ ಚೋರಕ ಶಿಕ್ಷನರಹರಿ ।
ಜಯ ಜಯ ಜಲಾಧಿಶಯನ ॥
ಜಯ ಜಯ ಮುನಿಮನ ನಿಲುಕದಪ್ರತಿಮನೆ ।
ಜಯ ಜಯವೆಂದರು ಸುರರು ॥
ಜಯ ಜಯ ಪ್ರಹ್ಲಾದ ಪಾಲಕ ನರಹರಿ ।
ಜಯ ಜಯವೆಂದಮರರು ।
ವರಹೊಸ್ತಿಲೆಡೆಯಲ್ಲಿ ಕೆಡಹಿ ತೊಡೆಯಲಿಟ್ಟು
ಕಡುಕೋಪದಲಿ ಬೇಗ ಖಳನ ।
ಪೊಡಲ ಪೆಳ್ಳುಗುರದಿಂದ ಸೀಳಲು ।
ದಿನಕರ ಪಡುವನಾದ್ರಿಯ ಮರೆಗೊಂಡ ॥

- ದುಷ್ಟನ ಸಂಹಾರಕಾರ್ಯದೊಂದಿಗೆ ದಿನಮಣಿಯೂ ಮರೆಯಾದ ನಿಸರ್ಗದ ಚಿತ್ರಣ ಪೂರ್ಣವನ್ನು ಕವಿ ಚೆನ್ನಿಗನು ಇಲ್ಲಿ ನೀಡಿರುವ ವಿಧಾನವು ಮನಮುಟ್ಟುವಂತಿದೆ.

# ಮಲ್ಲರಸ ಕವಿಯ ದಶಾವತಾರ ಚರಿತೆ

ಭಾಗವತ ಸಂಪ್ರದಾಯಕ್ಕೆ-ಸೇರಿದವನಾಗಿ 'ದಶಾವತಾರ ಚರಿತೆ'ಯನ್ನು ಬರೆದ ಕನ್ನಡದ ಕವಿ ಮಲ್ಲರಸ. ಈತನು ತನ್ನ ಕಾವ್ಯವನ್ನು 'ಚಂಪೂ ಸಂಪ್ರದಾಯ'ದಲ್ಲಿ ಬರೆದಿರುತ್ತಾನೆ. ಶ್ರೀವತ್ಸ ಗೋತ್ರದವನಾದ, ಕಮ್ಮೆ ವಂಶಕ್ಕೆ ಸೇರಿದ ಇವನ ತಂದೆ-ತಾಯಿಗಳು ತಿಮ್ಮರಸ ಮಂತ್ರಿ ಮತ್ತು ತಿಪ್ಪಾಂಬಿಕೆ. ಸದಾನಂದರನ್ನು ಗುರುವಾಗಿ ಹೊಂದಿದ್ದ ಮಲ್ಲರಸ ಕವಿಯು ತುಮಕೂರು ಜಿಲ್ಲೆ ಚೆಳ್ಳಾವಿ ತಾಲೂಕಿಗೆ ಸೇರಿದ ನಾರಮಂಗಲ ಗ್ರಾಮದವನು. ಈತನ ಕಾಲವನ್ನು ಕವಿಚರಿತೆಕಾರರು ಹದಿನೇಳನೇ ಶತಮಾನದ ಅಂತ್ಯವಿರಬೇಕೆಂದು ಊಹಿಸಿರುತ್ತಾರೆ. ಕನ್ನಡ ಭಾಷೆಯಲ್ಲಿ ದಶಾವತಾರಗಳನ್ನು ವಿವರಿಸುವ ಇಡೀ ಕೃತಿಯಾಗಿ ಮಹತ್ವವನ್ನು ಪಡೆದಿರುವುದು 'ಮಲ್ಲರಸನ ದಶಾವತಾರ ಚರಿತೆ'. ಪ್ರಾಚೀನ ಕವಿಮಾರ್ಗ ಪರಂಪರೆಗೆ ಸಂದ ಗೌರವವೆಂಬುದಾಗಿ ಈತನ ಈ ಕೃತಿಯನ್ನು ಪರಿಶೀಲಿಸುವುದು ಸಂದರ್ಭೋಚಿತವಾದದ್ದು.

'ದಶಾವತಾರ ಚರಿತೆ' ಯಲ್ಲಿ ಹನ್ನೊಂದು ಆಶ್ವಾಸಗಳಿವೆ. ಮೊದಲನೆಯ ಆಶ್ವಾಸವನ್ನು 'ಲೋಕಾಕಾರ ವರ್ಣನ'ವೆಂದು ಕರೆಯಲಾಗಿದ್ದು ಇದರಲ್ಲಿ ದೇವತಾಸ್ತುತಿ, ಪೂರ್ವಕವಿ ಪರಂಪರೆ, ಕವಿತಾ ಸಾಮರ್ಥ್ಯಗಳ ಹೆಗ್ಗಳಿಕೆಯನ್ನು ಕಾಣಬಹುದು. ಉಳಿದ ಹತ್ತು ಆಶ್ವಾಸಗಳು ಹರಿಯ ದಶಾವತಾರಗಳ ವರ್ಣನೆಯಿಂದ ಕೂಡಿರುವುದು. ಅವತಾರಗಳಲ್ಲಿ ನಾಲ್ಕನೆಯದಾದ ನರಸಿಂಹಾವತಾರ ವನ್ನು ಪಂಚಮ ಆಶ್ವಾಸದಲ್ಲಿ ವರ್ಣಿಸಲಾಗಿದೆ. ಇದರಲ್ಲಿ ೧೭೧ ಕಂದ, ವೃತ್ತಗಳನ್ನೊಳಗೊಂಡ ಪದ್ಯಗಳೂ ಮತ್ತು ಅಲ್ಲಲ್ಲಿ ನಾಲ್ಕೈದು ಸಾಲಿನ ವಚನಗಳ ಮೂಲಕ ವಿವರಿಸಲಾಗಿದೆ. ಆಶ್ವಾಸದ ಕಡೆಯಲ್ಲಿರುವ ಗದ್ಯಭಾಗದಲ್ಲಿ ಇಡೀ ಆಶ್ವಾಸದ ಮುಖ್ಯಾಂಶಗಳನ್ನು ಕವಿಯು ನೀಡಿರುತ್ತಾನೆ. ಕೃತಿಕಾರನ ಸ್ವವಿಚಾರವೂ ಇದರಲ್ಲಿದೆ.

ನರಸಿಂಹಾವತಾರದ ಕತೆಯನ್ನು ಸರಳವಾಗಿ ಸಂಗ್ರಹಿಸಿ ಹೇಳುವುದಾದರೆ ವಿಷ್ಣುವಿನ ದ್ವಾರಪಾಲಕರಾದ ಜಯ-ವಿಜಯರಿಗೆ ಸನಕ-ಸನಂದರಿಂದ ರಾಕ್ಷಸತ್ವವು ಪ್ರಾಪ್ತವಾಗಲೆಂಬ ಶಾಪ ಪ್ರಾಪ್ತವಾಗುತ್ತದೆ. ಅವರು ಭೂಮಿಯಲ್ಲಿ ಹಿರಣ್ಯಕ-ಹಿರಣ್ಯಾಕ್ಷರಾಗಿ ಜನಿಸುತ್ತಾರೆ. ತಪಸ್ಸನ್ನಾಚರಿಸಿ ಬ್ರಹ್ಮನನ್ನು ಮೆಚ್ಚಿಸಿ ತಾವು ಯಾರಿಂದಲೂ ಸಾಯದ ವರವನ್ನು ಪಡೆದುಕೊಳ್ಳುತ್ತಾರೆ. ತಮಗೆ ಇನ್ನಾರೂ ಸಾಟಿಯಿಲ್ಲವೆಂಬ ಗರ್ವದಿಂದ ಉನ್ಮತ್ತರಾಗಿ ವಿಷ್ಣುವನ್ನೇ ಗೆಲ್ಲಬೇಕೆಂದು ಹೊರಡುತ್ತಾರೆ. ಹಿರಣ್ಯಾಕ್ಷನು ಭೂಮಿಯನ್ನು ಪಾತಾಳಕ್ಕೆ ತೆಗೆದುಕೊಂಡು ಹೋಗುತ್ತಾನೆ. ವಿಷ್ಣು ಭೂಮಿಯನ್ನು ಬಿಡಿಸಿಕೊಂಡು ಬರಲು ವರಾಹಾವತಾರವನ್ನು ತಾಳಿ ಹೋಗುತ್ತಾನೆ. ತನ್ನ ಕೋರೆಹಲ್ಲುಗಳಿಂದ ಹಿರಣ್ಯಾಕ್ಷನನ್ನು ತುಂಡು ತುಂಡಾಗಿ ಮಾಡಿ ಕೊಲ್ಲುತ್ತಾನೆ.

ಸೋದರನ ವಧೆಯನ್ನು ಸಹಿಸದ ಹಿರಣ್ಯಕನು ರತ್ನಾನಗರದಲ್ಲಿ ವಾಸಿಸುತ್ತಿದ್ದು ಇದರ ವರ್ಣನೆಯನ್ನು ಕವಿಯು ವಿಸ್ತಾರವಾಗಿ ನೀಡಿದ್ದಾನೆ. ಇದು ಹರಿಹರ ಕವಿಯ 'ಗಿರಿಜಾ ಕಲ್ಯಾಣ' ದಲ್ಲಿ ಬರುವ ಗಿರಿರಾಜ ದೇಶದ ವರ್ಣನೆ ಹೋಲುತ್ತದೆ. ಮಲ್ಲರಸನು ಅನೇಕ ಶ್ರೇಷ್ಠಕಾವ್ಯಗಳನ್ನು ಚೆನ್ನಾಗಿ ಓದಿಕೊಂಡಿದ್ದನೆಂಬುದಕ್ಕೆ ಇದು ಸಾಕ್ಷಿ. ವೈಭವದಲ್ಲಿ ಜೀವಿಸುತ್ತಿದ್ದ ಹಿರಣ್ಯಕನು ತನ್ನ ತಮ್ಮನನ್ನು ಕೊಂದ ವಿಷ್ಣುವನ್ನು ತಾನು ಕೊಲ್ಲುವ ಬಗ್ಗೆ ಯೋಚಿಸುತ್ತಿರುತ್ತಾನೆ. ಇಷ್ಟರಲ್ಲಿ ಈತನ ಪತ್ನಿ ರೂಪವತಿಯ ಗರ್ಭದಲ್ಲಿ ಪ್ರಹ್ಲಾದನು ಜನಿಸುತ್ತಾನೆ. ಮಗನ ಮೇಲಿನ ಮಮತೆಯಿಂದ ತನ್ನ ವೈರಿಯ ಮೇಲಿನ ಕೋಪವನ್ನು ತಾತ್ಕಾಲಿಕವಾಗಿ ಮರೆತಿರುತ್ತಾನೆ.

ಆದರೆ ಪ್ರಹ್ಲಾದನು ಮಾತ್ರ ಬಾಲ್ಯದಿಂದಲೇ ಹರಿಯ ಭಕ್ತನಾಗಿರುತ್ತಾನೆ. ಪ್ರಹ್ಲಾದನಿಗೆ ಏಳು ವರ್ಷವಾದಾಗ ವಿದ್ಯಾಭ್ಯಾಸಕ್ಕಾಗಿ ಆಚಾರ್ಯರ ಬಳಿಗೆ ಕಳುಹಿಸಲಾಗುತ್ತದೆ. ಗುರುಗಳು ಅಸುರನ ಗುಣಗಾನ ಮಾಡುವ ಬೋಧನೆ ನೀಡಿದರೆ, ಬಾಲಕನು ವಿಷ್ಣುವೇ ದೈವವೆನ್ನುತ್ತಾನೆ. ಗುರುಗಳು ಎಷ್ಟೋ ಬೋಧಿಸಿದರೂ ಅವನು ವಿಷ್ಣುವನ್ನು ಮರೆಯದವನಾಗುತ್ತಾನೆ. ಹಿರಣ್ಯಕನೂ ಸಹ ತನ್ನ ಮಗನಿಗೆ ವಿಷ್ಣುವಿನ ನೆನಪನ್ನು ಮಾಡಕೂಡದೆಂದು ಹೇಳುತ್ತಾನೆ. ಆದರೆ ಪ್ರಹ್ಲಾದನು ಮತ್ತಷ್ಟು ಖಚಿತವಾಗಿ ಭಗವಂತನ ಬಗ್ಗೆ ಭಕ್ತಿವಿಶ್ವಾಸ ತಳೆದವನಾಗುತ್ತಾನೆ. ಬೇರೆ ಉಪಾಯವನ್ನು ಕಾಣದೆ ಮಗನನ್ನು ಕೊಲ್ಲುವ ಮಾರ್ಗವನ್ನು ತಂದೆ ಯೋಚಿಸುತ್ತಾನೆ.

ಪ್ರಹ್ಲಾದನನ್ನು ಕೊಲ್ಲಲು ದೂತರು ನಾನಾ ಬಗೆಯಾಗಿ ಹಿಂಸಿಸುತ್ತಾರೆ. ಆನೆಯಿಂದ ತುಳಿಸುತ್ತಾರೆ. ಬೆಟ್ಟದಿಂದ ಉರುಳಿಸುತ್ತಾರೆ. ಸಮುದ್ರದೊಳಕ್ಕೆ ನೂಕುತ್ತಾರೆ. ಅಗ್ನಿಗೆ ಆಹುತಿ ನೀಡುತ್ತಾರೆ. ವಿಷಾನ್ನವನ್ನು ಉಣಿಸುತ್ತಾರೆ. ಆದರೂ ಪ್ರಹ್ಲಾದನನ್ನು ಕೊಲ್ಲಲಾಗಲಿಲ್ಲ. ಹಿರಣ್ಯನು ತನ್ನ ಮಗನಿಗೆ ನಿನ್ನ ದೇವರನ್ನು ಅಲ್ಲಿರುವ ವಜ್ರಮಾಣಿಕ್ಯದ ಕಂಭದಲ್ಲಿ ತೋರಿಸೆಂದು ಹೇಳಿದಾಗ ಪ್ರಹ್ಲಾದನು ಹಿರಣ್ಯಕಾಸುರ ಮರ್ದನ ಬಾರೆಂದು ಕರೆಯುತ್ತಾನೆ. ಕಂಭದಿಂದ ನರಸಿಂಹರೂಪದಲ್ಲಿ ಬಂದ ವಿಷ್ಣುವಿನ ಮೇಲೆ ಹಿರಣ್ಯಕನ ಸೈನ್ಯ ಸಮೂಹವು ನುಗ್ಗಿ ಬಂದಾಗ ಅದನ್ನೆಲ್ಲ ನಾಶಗೊಳಿಸಿ ಹಿರಣ್ಯಕನನ್ನು ಸೀಳಿ, ರಕ್ತಪಾನ ಮಾಡಿ, ರಾಕ್ಷಸನ ಕರುಳಮಾಲೆಯನ್ನು ಕೊರಳಲ್ಲಿ ಧರಿಸುತ್ತಾನೆ. ಈ ಸಂದರ್ಭದಲ್ಲಿ ನರಸಿಂಹನ ಉಗ್ರಕೋಪಕ್ಕೆ ಹೆದರಿದ ದೇವತೆಗಳು ಲಕ್ಷ್ಮೀದೇವಿಯನ್ನು ಆಶ್ರಯಿಸಿದಾಗ ಆಕೆಯು ಅವರಿಗೆ ಅವರೆಲ್ಲರೂ ಸಿಂಹಮುಖ ಧರಿಸುವಂತೆ ಹೇಳುತ್ತಾಳೆ. ದೇವತೆಗಳು ಹಾಗೆಯೇ ಮಾಡುತ್ತಾರೆ. ಇದರಿಂದ ನರಸಿಂಹನ ಕೋಪದ ಉಪಶಮನವಾಗುತ್ತದೆ.

'ದಶಾವತಾರ ಚರಿತೆ' ಭಕ್ತಕಾವ್ಯವಾಗಿದ್ದು, ಭಕ್ತಿಕವಿಯಾದ ಮಲ್ಲರಸನಿಗೆ 'ಸರ್ವಂ ವಿಷ್ಣುಮಯಂ ಜಗತ್' ಆಗಿ ಕಾಣುತ್ತದೆ. ಸಂದರ್ಭ ಸಿಕ್ಕೆಡೆಯಲೆಲ್ಲ ಕವಿಯು ಹರಿಸ್ತುತಿಯನ್ನು ಮಾಡಿರುತ್ತಾನೆ. ಕಾವ್ಯದ ಕಡೆಯ ಭಾಗದ ರಗಳೆಯಲ್ಲಿಯೂ ಇದನ್ನು ಕಾಣಬಹುದು. ಅನೇಕ ಅಲಂಕಾರಗಳ ಮೂಲಕ ತನ್ನ ಕಾವ್ಯಹೃದಯವನ್ನು ತೋರ್ಪಡಿಸಿದ್ದಾನೆ. ಎಲ್ಲೆಲ್ಲಿಯೂ ವಿಷ್ಣುವೇ ಅಡಕವಾಗಿದ್ದಾನೆಂಬುದಕ್ಕೆ ಒಂದು ಪದ್ಯ ನಿದರ್ಶನ ಇಲ್ಲಿದೆ-

*ಧರಿಯೊಳ್ ವ್ಯೋಮದೊಳಬ್ಧಿಯೊಳ್ ದೆಸೆಗಳೊಳ್ ಕಾಂತಾರದೊಳ್ ಕಾಷ್ಠದೊಳ್*
*ಧರಿಯೊಳ್ ವೃಕ್ಷಸುಗುಲ್ಮದೊಳ್ ಲತೆಗಳೊಳ್ ಪಕ್ಷೀ ಮೃಗೌಘಂಗಳೊಳ್*
*ಪರಮಾ(ಣೊಳ್) ತೃಣರೇಣುಗಳ್ ಸಕಲದೊಳ್ ತೋಱಂಬನೋ ಎಂದು ಶ್ರೀ*
*ಹರಿ ವಿಶ್ವಾತ್ಮಕನಾಗಿ ವಿಷ್ಣುಮಯಮುಂ ತಾನಾದನೆಲ್ಲೆಲ್ಲಿಯುಂ*

ದಶಾವತಾರವನ್ನು ಸಮಗ್ರ ಕಾವ್ಯಕ್ಕೆ ವಸ್ತುವನ್ನಾಗಿ ಹೊಂದಿ ಕೃತಿರಚನೆ ಮಾಡಿದ ಕೀರ್ತಿ ಮಲ್ಲರಸನಿಗೆ ಸಲ್ಲುತ್ತದೆ. ಕವಿಯ ಈ ಕೃತಿಯು ಸರಳ ನಿರೂಪಣೆಯಿಂದ ಕೂಡಿದ್ದು, ವಿವಿಧ ಛಂದಸ್ಸುಗಳನ್ನೊಳಗೊಂಡಿದೆ. 'ವಿಶಿಷ್ಟವಾದ ಚಂಪೂಕೃತಿ'ಯೆಂಬ ಸಾರ್ಥಕ ಅಭಿದಾನ ಹೊಂದಿದೆ. ಮಲ್ಲರಸನು ಗಮನಾರ್ಹ ಕವಿಯಾಗಿ ನರಸಿಂಹಾವತಾರಕ್ಕೆ ತನ್ನ ಕೃತಿಯ ಮೂಲಕ ಗೌರವ ಸಲ್ಲಿಸಿದವನಾಗಿದ್ದಾನೆ. ಜಯದೇವ ಕವಿಯು ತನ್ನ ಪದ್ಯದಲ್ಲಿ ನಿರೂಪಿಸಿದಂತೆ 'ದೈತ್ಯನನ್ನು ವಿದಾರಣ' ಗೊಳಿಸಿದ 'ಕಾವ್ಯ ಚಿತ್ರಣ' ವೊಂದನ್ನು ಮಲ್ಲರಸನ 'ದಶಾವತಾರದ ಚರಿತೆ'ಯ ಮೂಲಕ ಕಂಡಂತಾಗಿದೆ.



# ಅಧ್ಯಾಯ - 12

# ತಿರುಮಂಗೈ ಆಳ್ವಾರ್



ಆಳ್ವಾರರು ಹನ್ನೆರಡು ಮಂದಿ. ಇವರು ಜೀವಿಸಿದ ಕಾಲವು ಚರ್ಚಾಸ್ಪದವಾದದ್ದಾಗಿದೆ. ಸುಮಾರಾಗಿ ಕ್ರಿಸ್ತ ಶಕ ಆರರಿಂದ ಒಂಬತ್ತನೆಯ ಶತಮಾನದ ಕಾಲಾವಧಿಯಲ್ಲಿ ಇವರು ಬಾಳಿ ಬದುಕಿದ್ದರೆಂದು ಹೇಳಬಹುದು. ತಮಿಳುನಾಡಿಗೆ ಸೇರಿದ ಈ ವೈಷ್ಣವ ಭಕ್ತರು ಬೋಧಿಸಿದ ಭಾಗವತ ಧರ್ಮವು ಎಲ್ಲೆಡೆ ಪ್ರಸಾರವಾಯಿತು. ವಿಶೇಷವಾಗಿ ತಮಿಳುನಾಡಿನ ಮೇಲೆ ಇವರ ಗಾಢ ಪ್ರಭಾವವುಂಟಾಗಿದೆ. ಇದಕ್ಕೆ ನಿದರ್ಶನವಾಗಿ ಇವರು ರಚಿಸಿರುವ 'ನಾಲ್ಕು ಸಾವಿರ ಪ್ರಬಂಧಗಳು' ಇಂದು ನಮ್ಮ ಮುಂದಿವೆ. ಇದನ್ನು 'ನಾಲಾಯಿರ ಪ್ರಬಂಧ'ಗಳೆಂದು ಕರೆಯುತ್ತಾರೆ. ಚೆಂದಮಿಳ್‌ನಲ್ಲಿರುವ ಇವರ ಈ ರಚನೆಗಳು ಉತ್ತಮೋತ್ತಮವಾದ ಭಕ್ತಿಗೀತೆಗಳಾಗಿಯೂ ಪ್ರಸಿದ್ಧವಾಗಿವೆ. ತಮಿಳು ಭಾಷೆಯಲ್ಲಿ ಮಾತ್ರವಲ್ಲದೆ ಇತರ ಪ್ರಮುಖ ಭಾಷೆಗಳಿಗೂ ಅನುವಾದಗೊಂಡಿರುವ ಆಳ್ವಾರರ ಸಾಹಿತ್ಯದ ಸವಿಯು ಉತ್ಕೃಷ್ಟವಾದದ್ದಾಗಿದೆ.

ಆಳ್ವಾರರು ಮುಖ್ಯವಾದ ಪುರಾಣಗಳನ್ನು ಬಲ್ಲವರಾಗಿದ್ದರು. ಇವರಿಗೆ ವೈದಿಕ ಸಾಹಿತ್ಯದ ಬಗೆಗೂ ಅಪಾರ ಗೌರವವಿತ್ತು. ದೇವರ ನಾಮ ಸಂಕೀರ್ತನೆ, ಆತನ ವಿವಿಧ ರೂಪಗಳ ಧ್ಯಾನದಲ್ಲಿ ಇವರು ನಿರತರಾಗಿದ್ದರು. ತಮ್ಮನ್ನು ಅನುಸರಿಸಿದ ಭಕ್ತರಿಗೂ ಇದನ್ನು ಬೋಧಿಸಿದರು. ಆಳ್ವಾರರ ಭಕ್ತಿಮಾರ್ಗಕ್ಕೆ ಮತ್ತು ಅವರಿಗೆ ದೇವರ ಬಗೆಗಿದ್ದ ಅಪಾರ ಗೌರವಾದರಗಳಿಗೆ ಅವರು ಪೂಜಿಸಿದ ಶ್ರೀರಂಗ, ತಿರುಪತಿ ಅಳಗರ್ ಕೋಯಿಲ್ ಗಳಲ್ಲಿರುವ ಪ್ರತಿಮಾರೂಪಗಳು ಸಾಕ್ಷಿಯಾಗಿವೆ.

ತಮಿಳುನಾಡಿನ ವೈಷ್ಣವ ಸಂಪ್ರದಾಯರು ಆಳ್ವಾರರ ಹೆಸರುಗಳನ್ನು ನಿರ್ದೇಶಿಸಿರುವುದನ್ನು ಇಲ್ಲಿ ಗಮನಿಸಬಹುದು. ಅವರುಗಳು ಯಾರೆಂದರೆ ಪೊಯ್‌ಗೈ ಆಳ್ವಾರ್, ಪೂತತ್ತಾಳ್ವಾರ್, ಪೇಯ್ಯಾಳ್ವಾರ್, ತಿರುಮಳಿಶೈ ಆಳ್ವಾರ್, ನಮ್ಮಾಳ್ವಾರ್, ಮಧುರಕವಿ ಆಳ್ವಾರ್, ಕುಲಶೇಖರ ಆಳ್ವಾರ್, ಪೆರಿಯಾಳ್ವಾರ್, ಆಂಡಾಳ್, ತೊಂಡಿರಪ್ಪೊಡಿ ಆಳ್ವಾರ್, ತಿರುಪ್ಪಾಣಾಳ್ವಾರ್ ಮತ್ತು ತಿರುಮಂಗೈ ಆಳ್ವಾರ್ ಇವರೆಲ್ಲರೂ ಪ್ರಾಚೀನ ವೈಷ್ಣವಾಚಾರ್ಯರಾದ ನಾಥಮುನಿ, ಯಾಮುನಾಚಾರ್ಯ ಮೊದಲಾದವರಿಗಿಂತ ಮುಂಚೆಯೇ

ಬಾಳಿ ಬದುಕಿದವರಾಗಿದ್ದಾರೆ. ಇವರಲ್ಲಿ ಮೊದಲ ನಾಲ್ವರು ಆಳ್ವಾರುಗಳು ಪಲ್ಲವ ನಾಡಿನಲ್ಲಿಯೂ ಮತ್ತು ಕಡೆಯ ಮೂವರು ಚೋಳನಾಡಿನಲ್ಲಿಯೂ ಬದುಕಿದವರಾಗಿದ್ದಾರೆ. ಏಳನೆಯವರು ಕೇರಳ ದೇಶಕ್ಕೆ ಸೇರಿದವರು. ಉಳಿದವರು ಪಾಂಡ್ಯನಾಡಿನಲ್ಲಿ ಕೀರ್ತಿ ಪಡೆದವರಾಗಿದ್ದಾರೆ. ಸಮಾಜದ ಬೇರೆ ಬೇರೆ ಸ್ತರಗಳಿಂದ ಬಂದವರಾಗಿ, ರಾಜರ ಕಾಲಕ್ಕೆ ಸೇರಿದವರಾಗಿ, ಕೀಳುತನದ ಕಸುಬನ್ನು ಮಾಡುತ್ತಿದ್ದವರಾಗಿಯೂ ಇವರಲ್ಲಿ ಕೆಲವರನ್ನು ಗುರುತಿಸಲಾಗಿದೆ. ಆದರೂ ಇವರಿಂದ ತಮಿಳು ಸಮಾಜ-ಸಾಹಿತ್ಯಗಳ ಉತ್ಕರ್ಷವಾಗಿರುವುದನ್ನು ಇಲ್ಲಿ ಸ್ಮರಿಸಬಹುದು.

ಆಳ್ವಾರರಲ್ಲಿ ಕಡೆಯವರಾದ ತಿರುಮಂಗೈ ಆಳ್ವಾರ್ ಅವರು ಸುಮಾರು ಏಳನೆ ಶತಮಾನಕ್ಕೆ ಸೇರಿದವರಾಗಿದ್ದಾರೆ. ಇವರು ಶಿವಭಕ್ತರಾದ 'ತಿರುಜ್ಞಾನ ಸಂಬಂಧರ್' ಅವರ ಸಮಕಾಲೀನರೆಂದು ಭಾವಿಸಲಾಗಿದೆ. ತಿರುಜ್ಞಾನ ಸಂಬಂಧರ್ ಅವರು ಪಲ್ಲವ ಅರಸನಾದ ನರಸಿಂಹವರ್ಮನ ಕಾಲಕ್ಕೆ ಸೇರಿದವರಾಗಿದ್ದಾರೆ. ಆದುದರಿಂದ ತಿರುಮಂಗೈ ಆಳ್ವಾರ್ ಅವರನ್ನು ಸಹ ಏಳನೇ ಶತಮಾನಕ್ಕೆ ಸೇರಿಸಬಹುದು.

ತಿರುಮಂಗೈ ಆಳ್ವಾರರು ನಾಲಾಯಿರ ಪ್ರಬಂಧದ ೧೩೬೧ ಪದ್ಯಗಳನ್ನು ಆರು ಗ್ರಂಥಗಳಲ್ಲಿ ರಚಿಸಿದ್ದಾರೆ. ಇದನ್ನು ಪಾಶುರಗಳೆಂದು ಕರೆಯಲಾಗುತ್ತದೆ. ಇವುಗಳಲ್ಲಿ ಸುಮಾರು ಹತ್ತು ಪದ್ಯಗಳು ಅಹೋಬಿಲದ ಮಹಿಮೆ ಹಿರಿಮೆಗಳನ್ನು ವ್ಯಕ್ತಪಡಿಸುತ್ತಿದೆ.

## ಅಹೋಬಿಲ ಸ್ತುತಿ

ಆಹೋಬಿಲವನ್ನು 'ನರಸಿಂಹ ಸಪ್ತಗಿರಿ'ಯೆಂದು ಕರೆಯುತ್ತಾರೆ. ತಿರುಮಲೆ ಕ್ಷೇತ್ರವು ಸಪ್ತಗಿರಿಯಾಗಿ ಪ್ರಸಿದ್ಧವಾಗಿರುವಂತೆ ಅಹೋಬಿಲವನ್ನು ಸಪ್ತಗಿರಿಯೆಂದೇ ಶ್ರೀವೈಷ್ಣವರು ಆರಾಧಿಸುತ್ತಿದ್ದಾರೆ. ಇಲ್ಲಿನ ಏಳು ಬೇರೆ ಬೇರೆ ಗಿರಿಶಿಖರಗಳಲ್ಲಿ ಅಥವಾ ಗುಹೆಗಳಲ್ಲಿ ಜ್ವಾಲಾ, ಅಹೋಬಲ, ಮಾಲೋಲ, ಕ್ರೋಢ, ಯೋಗಾನಂದ, ಭಾರ್ಗವ ಮತ್ತು ಪಾವನ ನರಸಿಂಹರು ವಿರಾಜಿಸುತ್ತಿದ್ದಾರೆ. ಇವರೊಂದಿಗೆ ಸಮತಲ ಪ್ರದೇಶದಲ್ಲಿನ ಕಾರಂಜ ಮತ್ತು ಛತ್ರವಟ ನರಸಿಂಹರನ್ನು ಒಟ್ಟಾಗಿ ಸೇರಿಸಿ ನವನಾರಸಿಂಹರೆಂದು ಕರೆಯುವುದು ರೂಢಿಯಲ್ಲಿದೆ. ಈ ಕ್ಷೇತ್ರದ ವಿವರಣೆಯನ್ನು ತಮಿಳುಸಾಹಿತ್ಯದಲ್ಲಿ ಮನೋಹರವಾಗಿ ವರ್ಣಿಸಿರುವ ತಿರುಮಂಗೈ ಆಳ್ವಾರರ ಪಾಶುರಗಳು ಶ್ಲಾಘನೀಯವಾಗಿವೆ.

ಇಲ್ಲಿರುವ ಹತ್ತು ಪದ್ಯಗಳು ಅಹೋಬಿಲದ ವರ್ಣನೆಯಿಂದ ಕೂಡಿವೆ. ಇವುಗಳಲ್ಲಿ ಐದು ಪದ್ಯಗಳು ಮಧ್ವಾಚಾರ್ಯರು ರಚಿಸಿದ 'ನಖಸ್ತುತಿ'ಯ ರಚನೆಯನ್ನು ಹೋಲುತ್ತದೆ. ಇನ್ನುಳಿದ ಐದು ಪದ್ಯಗಳಲ್ಲಿ ಅಹೋಬಿಲದ ಕಾಡು-ಮೇಡು, ನದಿ, ಜಲ, ವನ ಪ್ರಕೃತಿ ಗಳನ್ನು ವಿಶೇಷವಾಗಿ ವರ್ಣಿಸಿರುವ ಛಾಯೆಯಿಂದ ತುಂಬಿವೆ. ಅಹೋಬಿಲವು ತುಂಬ ದುರ್ಗಮವಾಗಿದ್ದು ಎಲ್ಲೆಲ್ಲೂ ಕಾಲಿಡಲಸಾಧ್ಯವಾದ ಕಾದಬಂಡೆಗಳು ತಲೆಯೆತ್ತಿ ನಿಂತಿವೆ. ಬಿರುಕುಬಿಟ್ಟ ಬಂಡೆಗಳೊಂದಿಗೆ, ನಿರ್ಜನವಾಗಿ ಕಾಣುವ ಗಂಭೀರತೆಯಿಂದ ಕೂಡಿದ್ದಾಗಿದೆ.

ಹಿರಣ್ಯಕಶಿಪು ಪ್ರಹ್ಲಾದನಿಗೆ ಅವನ ಭಗವಂತನನ್ನು ತೋರಿಸಲು ಆಗ್ರಹಪಡಿಸಿದ ಸ್ಥಳವು ಇಲ್ಲಿದೆ. ಇದು ರಮಣೀಯವಾದ ಜಾಗವಾಗಿದೆ. ಭೂಲೋಕದವರಿಗೆ ಹೆದರಿಕೆ ಆಗುವಂತೆ ಕಾಣುವ ಅತ್ಯಂತ ಅದ್ಭುತವಾದ ನರಸಿಂಹರೂಪವು ಅತ್ಯಂತ ಕೋಪಾವೇಶಗಳಿಂದ ಕೂಡಿ ಇಲ್ಲಿ ಪ್ರತ್ಯಕ್ಷವಾಗಿದೆ. ಆತನು ತನ್ನ ಚೂಪಾದ ಉಗುರುಗಳಿಂದ ರಾಕ್ಷಸನ ಶರೀರವನ್ನು ಸೀಳಿ ಕೊಂದಿರುತ್ತಾನೆ. ಈ ರೀತಿ ನರಸಿಂಹನ ನಿತ್ಯ ವಾಸಸ್ಥಳವಾಗಿ ಅಹೋಬಿಲದ ಕೀರ್ತಿಯು ಹರಡಿದೆ.

## ವನರಾಜನ ಭಕ್ತಿಭಾವ

ಕೆಂದಾವರೆಯಂತೆ ಕೆಂಪಾದ ಕಣ್ಣುಗಳನ್ನು ಹೊಂದಿದ ಸಿಂಹಗಳು, ದೈನ್ಯದಿಂದ ಕೂಡಿದ ಆಕರ್ಷಕವಾದ ಕಣ್ಣುಗಳನ್ನು ಹೊಂದಿರುವ ಆನೆಗಳ ದಂತಗಳನ್ನು ತಂದು ಭಕ್ತಿಯಿಂದ ನರಸಿಂಹನ ಪಾದಗಳಲ್ಲಿಟ್ಟು ನಮಸ್ಕರಿಸುತ್ತಿವೆ. ಇಲ್ಲಿನ ಕ್ರಿಯೆಯು ಸಿಂಹ-ಗಜಗಳ ವೈರವನ್ನು ನಿರೂಪಿಸುವಂತಿದ್ದರೂ ವನರಾಜನ ಭಕ್ತಿಯ ಮನೋಭಾವವನ್ನು ಸಾದರಪಡಿಸುತ್ತಿದೆ. ಹೀಗೆ ಪ್ರಸಿದ್ಧವಾಗಿರುವ ಶಿಂಗವೇಳ್ ಕುನ್ರವನ್ನು - ಇದು ಆಳ್ವಾರರು ಅಹೋಬಿಲಕ್ಕೆ ನೀಡಿದ ಹೆಸರು- ಆಳ್ವಾರರು ವರ್ಣಿಸುತ್ತಿದ್ದಾರೆ.

ಆಳ್ವಾರರ ಮುಂದಿನ ಪದ್ಯಗಳು ಮತ್ತಷ್ಟು ಸ್ವಾರಸ್ಯಕರವಾಗಿವೆ. 'ದಾನವನ ಎದೆಯನ್ನು ತನ್ನ ಚೂಪಾದ ಉಗುರುಗಳಿಂದ ಸೀಳಿದ ನರಸಿಂಹನು ತನ್ನ ಬಾಯನ್ನು ಅಗಲವಾಗಿ ತೆರೆದಿದ್ದಾನೆ. ಅದರಲ್ಲಿನ ನಾಲಿಗೆಯು ಅಲ್ಲಾಡುತ್ತಿರುವ ದೃಶ್ಯವು ತಲ್ಲಣ ಗೊಳಿಸುವಂತಿದೆ. ಉಜ್ವಲವಾದ ಕೋರೆಹಲ್ಲುಗಳನ್ನು ಹೊಂದಿ ಬಲಿಷ್ಠವಾದ ಸಿಂಹರೂಪ ದಿಂದಿರುವ ನರಸಿಂಹನು ದಾನವನ ಕೊಲೆಗಾಗಿಯೇ ಅವತರಿಸಿದಂತಿದ್ದು ತನ್ನ ಚೂಪಾದ ಉಗುರುಗಳಿಂದ ರಾಕ್ಷಸನ ಎದೆಯನ್ನು ಸೀಳಿ ಹಾಕಿದ್ದಾನೆ.' ಈ ರೀತಿಯಲ್ಲಿರುವವನ ನಿತ್ಯ ವಾಸಸ್ಥಳವಾಗಿ ಅಹೋಬಿಲವು ಪ್ರಖ್ಯಾತವಾಗಿದೆ.

ಅರಣ್ಯವೆಂದ ಮೇಲೆ ಅಲ್ಲಿ ಬೇಡರ ವಾಸವು ಸಹಜವಾದದ್ದೇ ಆಗಿದೆ. ಇಲ್ಲಿನ ಕಾಡಿನಲ್ಲಿಯೂ ಬೇಡರು ಆಶ್ರಯ ಹೊಂದಿದ್ದಾರೆ. ಇಲ್ಲಿಗೆ ಬರುವ ಯಾತ್ರಿಕರ ಗುಂಪು ಅವರನ್ನು ಎದುರಿಸುವುದು ಅನಿವಾರ್ಯವಾಗಿದೆ. ಆ ಸಂದರ್ಭದಲ್ಲಿ ಬೇಡರು ಹೊಂದಿರುವ ಚರ್ಮದ ಬಾಯಿಯಿಂದ ಕೂಡಿರುವ ದಮಟೆಯು ಶಬ್ದ ಮಾಡುತ್ತಿದೆಯೆಂದಿರುವ ಮಾತುಗಳಲ್ಲಿ ಅಲ್ಲಿನ ಆತಂಕದ ಸ್ಥಿತಿಯನ್ನು ವಿವರಿಸುವಂತಿದೆ. ಬಿಲ್ಲನ್ನು ಹಿಡಿದ ಬೇಡರ ಕೂಗಾಟವೂ ಇಲ್ಲಿ ನಿರಂತರವಾಗಿ ಸಾಗಿದೆ.

ನರಸಿಂಹನು ತನ್ನ ರೂಪಕ್ಕೆ ಅನುಗುಣವಾದ ಅಗಲವಾದ ಬಾಯನ್ನು ಹೊಂದಿರು ತ್ತಾನೆ. ತೆರೆದ ಬಾಯಲ್ಲಿ ಹಲ್ಲುಗಳು ಪ್ರಜ್ವಲಿಸುತ್ತಿವೆ. ಇವನು ರಾಕ್ಷಸನ ಬಲಿಷ್ಠವಾದ ಶರೀರವನ್ನು ತನ್ನ ಚೂಪಾದ, ಶ್ರೇಷ್ಠವಾದ ನಖಗಳಿಂದ ಸೀಳಿದ್ದಾನೆ. ಇಲ್ಲಿನ ದಟ್ಟವಾದ ಜಾಡಿನಲ್ಲಿ ಮೃಗಗಳು ಅಲೆದಾಡಿ ಸೋತು ಹೋಗಿವೆ. ಸಿಡಿದು ಹೋದ ಬೆಟ್ಟದ

ಶಿಖರಗಳು ಇಲ್ಲಿ ಕಂಡುಬರುತ್ತವೆ. ಬೆಂಕಿಯು ಹೊತ್ತಿ ಉರಿದು ಹೋದ ಕರಿಯ ಕಟ್ಟಿಗೆಗಳ ಕಾರಣದಿಂದಾಗಿ ಬಿದಿರುಮೆಳೆಗಳು ಕಡಮೆಯಾದಂತೆ ಕಂಡುಬರುತ್ತಿವೆ. ಬೆಟ್ಟಗಳ ಬೆರಗು, ಅದರ ಗಂಭೀರತೆ ಈ ಕ್ಷೇತ್ರಕ್ಕೆ ಉಂಟು ಮಾಡಿರುವ ವಿಶಿಷ್ಟ ವಾತಾವರಣದ ಚಿತ್ರಣವನ್ನು ಆಳ್ವಾರರ ಪದ್ಯಗಳು ಮನದಟ್ಟು ಮಾಡಿಕೊಡುವಂತಿದೆ.

## ಪ್ರಖರ ಪ್ರಕೃತಿ

ಭಗವಂತನ ಶಾಶ್ವತವಾದ ನೆಲೆಯಾಗಿ ಅಹೋಬಿಲವು ಪ್ರಸಿದ್ಧವಾಗಿದೆ. ಇಲ್ಲಿ ಹಿರಣ್ಯನೆಂಬ ದಾನವನು ಬೀಡು ಬಿಟ್ಟಿದ್ದಾನೆ. ಅವನ ಕೈಯಲ್ಲಿರುವ ವೇಲಾಯುಧವು ಅನೇಕ ವಿಧವಾದ ಹಿಂಸೆಗಳನ್ನು ನೀಡುತ್ತಿದೆ. ಅವನು ದುಷ್ಟನೂ, ಶತ್ರುವೂ ಆಗಿದ್ದಾನೆ. ಈ ರೀತಿ ಇರುವವನ ಶರೀರವನ್ನು ತನ್ನ ಶ್ರೇಷ್ಠವಾದ ಉಗುರುಗಳಿಂದ ಸೀಳಿದ ನರಸಿಂಹನ ನಿತ್ಯ ವಾಸಸ್ಥಳವಾಗಿ ಈ ಪ್ರದೇಶವು ಶೋಭಿಸುತ್ತಿದೆ. ಇಲ್ಲಿನ ಬಿಸಿಲಿನ ಬೇಗೆಯು ತೀವ್ರ ತರವಾಗಿದೆ. ಅಲ್ಲಿ ನಾಯಿಗಳಿಗೂ, ಹದ್ದುಗಳಿಗೂ ಕಾಲೂರಲು ಸಾಧ್ಯವಾಗುತ್ತಿಲ್ಲ. ದೇವತೆಗಳಲ್ಲದೆ ಬೇರಾರಿಗೂ ಅಲ್ಲಿಗೆ ಹೋಗಲು ಸಾಧ್ಯವಾಗುತ್ತಿಲ್ಲವೆಂಬ ವಿವರಣೆಯು ಇಲ್ಲಿನ ದುರ್ಗಮವಾದ ಪರಿಸ್ಥಿತಿಯನ್ನು ಕಣ್ಣಮುಂದೆ ತರಿಸುವಂತಿದೆ.

ಅಧಿಕವಾದ ತಾಪದಿಂದ ಕೂಡಿದ ಈ ಸ್ಥಳದಲ್ಲಿ ಪರಿತಾಪದಿಂದ ಕೂಡಿ ಹಿಂದಕ್ಕೆ ಮಡಿಸಿಕೊಂಡಂತೆ ಕಾಣುವ, ಹಿರಿದಾದ ಬಾಯಿಯಲ್ಲಿ ಉಜ್ವಲವಾದ ಕೋರೆಹಲ್ಲುಗಳನ್ನುಳ್ಳ ಅದ್ವಿತೀಯವಾದ ಬಲಿಷ್ಟ ಸಿಂಹರೂಪದಿಂದ ಕೂಡಿದವನಾಗಿ ಸ್ವಾಮಿಯು ಕಾಣುತ್ತಿದ್ದಾನೆ. ಈತನ ರೂಪ ಕಂಡಕೂಡಲೇ ಮೃತನಾದ ರಾಕ್ಷಸನ ದೇಹವನ್ನು ಚೂಪಾದ ಉಗುರುಗಳಿಂದ ಸೀಳಿದ ಪವಿತ್ರಮೂರ್ತಿ ಭಗವಂತನು ನೆಲೆಸಿರುವ ಕ್ಷೇತ್ರವಾಗಿ ಅಹೋಬಿಲವು ಪ್ರಸಿದ್ಧವಾಗಿದೆ.

ನರಸಿಂಹನ ಸನ್ನಿಧಾನವಿರುವ ಅಲ್ಲಿ ಸದಾಕಾಲವೂ ಬೆಂಕಿಯು ಧಗಧಗಿಸುತ್ತಿರುತ್ತದೆ. ಇದನ್ನು ಬಿರುಗಾಳಿಯು ತಳ್ಳಿಕೊಂಡು ವಿಶಾಲವಾದ ಆಕಾಶದಲ್ಲಿ ಹರಡುತ್ತಿದೆ. ಆ ಪ್ರದೇಶವು ಅತಿ ಭಯಂಕರವಾಗಿ ಕಂಡುಬರುತ್ತಿದೆ. ದೇವಾಲಯಗಳಿಂದ ಕೂಡಿದ 'ನರಸಿಂಹ ಸಪ್ತಗಿರಿ'ಯನ್ನು ಪದ್ಯಗಳ ಮೂಲಕವಾಗಿ ಆಳ್ವಾರರು ವಿವರಿಸುತ್ತಿದ್ದಾರೆ. ಕವಿ ಹೃದಯದಿಂದ ಕೂಡಿದ ಈ ಪದ್ಯಗಳ ಮೂಲಕವಾಗಿ ಭಗವಂತನ ಪಾದರೇಣುವಿನ ದರ್ಶನವು ನಮಗಾಗು ತ್ತಿರುವಂತೆ ಭಾಸವಾಗದಿರದು.

ನರಸಿಂಹನ ಸ್ವಭಾವ ಮತ್ತು ಪ್ರಕೃತಿಯ ಭೀಕರತೆಗಳು ಭಿನ್ನವಲ್ಲವೆಂಬಂತಹ ವಿಚಾರದ ಪ್ರತಿಪಾದನೆಯು ಆಳ್ವಾರರ ಇಲ್ಲಿನ ಪದ್ಯಗಳಲ್ಲಿ ಅಡಕವಾಗಿರುವುದು ಗಮನಾರ್ಹ ವಾಗಿದೆ. ಇವರ ಮುಂದಿನ ಪದ್ಯಗಳು ಈ ಅಂಶವನ್ನು ಮತ್ತಷ್ಟು ಸ್ಪಷ್ಟಪಡಿಸುತ್ತವೆ. ಈ ಪದ್ಯಗಳಲ್ಲಿ ಬಂದಿರುವ ಬ್ರಹ್ಮರುದ್ರಾದಿ ದೇವತೆಗಳ ವಿಷಯ, ಅರಣ್ಯವಾಸಿಗಳಾದ ಬೇಡರ ಚಟುವಟಿಕೆಗಳು, ಬಿದಿರುಮೆಳೆಗಳಲ್ಲಿ ಅಡಗಿ ದೊಡ್ಡದಾರಿಯಲ್ಲಿ ಸಾಗುವ ಆನೆಗಳ ಜಾಡನ್ನು ನೋಡುವ ಹುಲಿಗಳ ಚಿತ್ರಣವು ತುಂಬಿಕೊಂಡಿವೆ.

ಸಿಂಹರೂಪಿಯಾದ ಸ್ವಾಮಿಯ ಆಕರ್ಷಕವಾದ ಕಣ್ಣುಗಳು, ಪ್ರಜ್ವಲಿಸುವ ಹಲ್ಲುಗಳ ಭಯಾನಕ ನೋಟವನ್ನು ಕಂಡ ದೇವತೆಗಳು ಆ ರೂಪಕ್ಕೆ ಬೆರಗಾಗಿ ತಮ್ಮ ಆಶ್ಚರ್ಯವನ್ನು ವ್ಯಕ್ತಪಡಿಸುತ್ತಿದ್ದಾರೆ. ಯಾವುದಕ್ಕೂ ಅಂಜದ ಅಜ-ರುದ್ರಾದಿಗಳನ್ನೂ ಈ ರೂಪವು ಒಂದು ಕ್ಷಣ ತಲ್ಲಣಗೊಳಿಸಿವೆ. ನರಸಿಂಹನ ಮೃಗಸ್ವರೂಪದ ನೋಟದ ದೃಶ್ಯವಿಲ್ಲಿದೆ. ಸತತವಾಗಿ ಸ್ತುತಿಸಿದ ಬ್ರಹ್ಮರುದ್ರಾದಿಗಳ ಸ್ತೋತ್ರಮಾಲಿಕೆಯ ಪ್ರಸ್ತಾಪವನ್ನು ಇಲ್ಲಿನ ಪದ್ಯವು ಒಳಗೊಂಡಿರುತ್ತದೆ.

## ನಿಸರ್ಗದ ಪೂಜೆ

ಪ್ರಕೃತಿಯ ಮನೋಹರವಾದ ನೋಟವು ಅಹೋಬಿಲದ ಅರಣ್ಯದ ವರ್ಣನೆಯಲ್ಲಿ ದಟ್ಟಗೊಂಡಿದೆ. ಈ ರೀತಿಯ ವಿವರಣೆಗಳು ಇಲ್ಲಿನ ಪದ್ಯಗಳಲ್ಲಿ ದೊರೆಯುತ್ತದೆ. ಫಲಭರಿತವಾದ ಶಿರೀಷ ವೃಕ್ಷಗಳಿಂದ ಬೀಜಗಳು ಸಿಡಿಯುತ್ತಿರುವ ಶಬ್ದವು ಎಲ್ಲೆಡೆ ತುಂಬಿದೆ. ಕಲ್ಲುಗಳಿಂದ ಕೂಡಿದ ದಟ್ಟವಾದ ದಾರಿಯಲ್ಲಿ ಬೆಳೆದು ನಿಂತಿರುವ ಬಿದಿರುಮೆಳೆಗಳು ಆಕಾಶದೊಳಗೆ ಚಾಚಿಕೊಂಡು ಬೆಳೆದಿವೆ. ಅವುಗಳು ಪರಸ್ಪರ ಉಜ್ಜಿ ಉಂಟಾದ ಬೆಂಕಿಯು ಆಗಸವನ್ನು ವ್ಯಾಪಿಸಿದೆ. ಅಗಾಧ ಪ್ರಮಾಣದಲ್ಲಿ ಬೆಳೆದ ನೆಲ್ಲಿಯ ಮರಗಳ ಬೇರುಗಳು ಆಳಕ್ಕೆ ಹೋಗಿ ಕಲ್ಲುಗಳನ್ನು ಸಿಡಿಸಿವೆ. ತಾಳೆಗರಿಗಳು ಗುಂಪುಗುಂಪಾಗಿ ಬೆಳೆದು ಶಿಲಶಿಲವೆಂಬ ಶಬ್ದವನ್ನು ಮೊಳಗಿಸುತ್ತಿವೆ. ಝಿಲ್ಲಿಕಾ ಎಂಬ ಮಿಡತೆಗಳ ನಿರಂತರ ಶಿಲಶಿಲ ಧ್ವನಿಯು ಕಾನನದಲ್ಲಿ ಧ್ವನಿಸುತ್ತಿದೆ.

ಲಕ್ಷ್ಮೀದೇವಿಯನ್ನು ಆಲಂಗಿಸಿಕೊಂಡಿರುವ ಭಗವಂತನು ಕಮಲವಾಸಿಯಾಗಿ ನಿರ್ಮಲವಾದ ಮನಸ್ಸುಳ್ಳವರಿಂದ ಪೂಜೆಯನ್ನು ಸ್ವೀಕರಿಸುತ್ತಾ ಅಲ್ಲಿ ನೆಲೆಸಿರುತ್ತಾನೆ. ಭಕ್ತಿಯ ಪ್ರಕಟಣೆ ಒಂದೆಡೆಯಾದರೆ, ಪ್ರಕೃತಿಪೂಜೆ ಮತ್ತೊಂದೆಡೆ ನಿರಂತರವಾಗಿ ಸಾಗುತ್ತಿದೆ. ಭಗವಂತನ ಆರಾಧನೆಯಲ್ಲಿ ಪ್ರಕೃತಿ, ಪ್ರಾಣಿ, ಕೀಟಗಳೆಲ್ಲವೂ ತನ್ನನ್ನು ತೊಡಗಿಸಿಕೊಂಡು ಶ್ರದ್ಧೆ, ಭಕ್ತಿ, ಗೌರವಗಳನ್ನು ಸಲ್ಲಿಸುತ್ತಿವೆಯೆಂದು ವರ್ಣಿಸಲಾಗಿರುವ ಪದ್ಯಭಾಗವು ಶ್ರೇಷ್ಠವಾದ ಕಾವ್ಯಲಕ್ಷಣದಿಂದ ಕೂಡಿದ್ದು, ಪ್ರಾಣಿಗಳ ಅಚಲನಿಷ್ಠೆಗೆ ನಿದರ್ಶನವಾಗಿ ಪರಿಣಮಿಸಿದೆ.

ಈಶನಾದ ಸರ್ವೋಪಕಾರಕನಾದ ಸಪ್ತಗಿರಿವಾಸಿಯಾದ ನರಸಿಂಹನನ್ನು ಕುರಿತ ಪಾಶುರಗಳನ್ನು 'ಕಲಿಯನ್' ಎಂಬ ಹೆಸರುಳ್ಳ ಆಳ್ವಾರರು ಅನುಗ್ರಹಿಸಿದ್ದಾರೆ. ಇವರು ತಿರುಮಂಗೈ ನಾಡಿನ ಸ್ಥಾನಿಕರಾಗಿದ್ದಾರೆ. ನಿತ್ಯವೂ, ಶಾಶ್ವತವೂ ಆದ ಹಿರಿಮೆಯನ್ನು ಹೊಂದಿದ ಇವರ ಕೊರಳಿನಲ್ಲಿ ದುಂಬಿಗಳು ಮುತ್ತಿ ಝೇಂಕರಿಸುತ್ತಿರುವ ಪುಷ್ಪಮಾಲೆಯು ಶೋಭಿಸುತ್ತಿದೆ. ಈ ರೀತಿ ವೈಷ್ಣವ ಭಕ್ತಶಿರೋಮಣಿಯಾದ ತಿರುಮಂಗೈ ಆಳ್ವಾರರು ರಚಿಸಿದ ಈ ತಮಿಳು ಸಾಹಿತ್ಯಕುಸುಮವು ಭಾಗವತೋದ್ಯಾನದಲ್ಲಿ ಪರಿಮಳವನ್ನು ಬೀರುತ್ತಿದೆ.

# ಶ್ರೀ ನವನಾರಸಿಂಹ ಮಂಗಳಂ

ಶ್ರೀಪರಾಂಕುಶಯೋಗೀಂದ್ರ-ಶಠಾರಿ-ಪ್ರಮುಖಾನ್ ಗುರೂನ್।
ಮಂಗಳಾಶಾಸನಪರಾನ್ ಮಹಿತಾನ್ ಅನಿಶಂ ಭಜೇ ॥೧॥

ಜಗಜ್ಜನ್ಮಾದಿಲೀಲಾಯ ಜಗದಾನಂದಹೇತವೇ।
ಜಗಚ್ಚಕ್ಷುಃ-ನಿವಾಸಾಯ ಶ್ರೀನೃಸಿಂಹಾಯ ಮಂಗಳಂ ॥೨॥

ಹಿರಣ್ಯಸ್ತಮ್ಭ-ಸಂಭೂತಿ-ಪ್ರಖ್ಯಾತಪರಮಾತ್ಮನೇ।
ಪ್ರಹ್ಲಾದಾರ್ತಿಮುಷೇ ಜ್ವಾಲಾನಾರಸಿಂಹಾಯ ಮಂಗಳಂ ॥೩॥

ಗರುಡಾದ್ರಿ-ಗುಹಾ-ಗೇಹೇ ಗಜಕುಂಡಸರಸ್ತಟೇ।
ಹಿರಣ್ಯಸ್ಥಾಣ್ವಹಂಕಾರ ಹಾರಿಸಿಂಹಾಯ ಮಂಗಳಂ ॥೪॥

ವಾರಿಜಾವಾರಿತಭಯೈಃ ವಾಣೀಪತಿಮುಖೈಃ ಸುರೈಃ।
ಮಹಿತಾಯ ಮಹೋದಾರ-ಮಾಲೋಲಾಯಾಸ್ತು ಮಂಗಳಂ ॥೫॥

ವರಾಹಕುಂಡೇ ಮೇದಿನ್ಯೈ ವಾರಾಹಾರ್ಥ-ಪ್ರದಾಯಿನೇ।
ದಂತಲಗ್ನ-ಹಿರಣ್ಯಾಕ್ಷ-ದಂಷ್ಟ್ರಸಿಂಹಾಯ ಮಂಗಳಂ ॥೬॥

ಗೋ-ಭೂ-ಹಿರಣ್ಯ-ನಿರ್ವಿಣ್ಣ-ಗೋಭಿಲಜ್ಞಾನದಾಯಿನೇ।
ಪ್ರಭಂಜನಶುನಾಸೀರ ಕಾರಂಜಾಯಾಸ್ತು ಮಂಗಳಂ ॥೭॥
ಭಾರ್ಗವಾಖ್ಯ-ತಪಸ್ವೀಶ-ಭಾವನಾ-ಭಾವಿತಾತ್ಮನೇ।
ಅಕ್ಷಯ್ಯತೀರ್ಥ್ಯತೀರಸ್ಥ-ಭಾರ್ಗವಾಯಾಸ್ತು ಮಂಗಳಂ ॥೮॥

ಚತುರಾನನ-ಚೇತೋಬ್ಜ-ಚಿತ್ರಭಾನು-ಸ್ವರೂಪಿಣೇ।
ವೇದಾದ್ರಿ ಗಹ್ವರಸ್ಥಾಯ ಯೋಗಾನಂದಾಯ ಮಂಗಳಂ ॥೯॥

ಹಾಹಾಹೂಹ್ವಾಖ್ಯ ಗಂಧರ್ವ-ನೃತ್ತಗೀತಹೃತಾತ್ಮನೇ।
ಭವ-ಹಂತೃ-ತಟಿ-ಛತ್ರವಟಸಿಂಹಾಯ ಮಂಗಳಂ ॥೧೦॥

ಭಾರದ್ವಾಜ-ಮಹಾಯೋಗಿ-ಮಹಾಪಾತಕಹಾರಿಣೇ।
ತಾಪನೀಯ-ರಹಸ್ಯಾರ್ಥ-ಪಾವನಾಯಾಸ್ತು ಮಂಗಳಂ ॥೧೧॥

ಶ್ರೀ ಶಠಾರಿ-ಯತೀಂದ್ರಾದಿಯೋಗಿ-ಹೃತ್ಪದ್ಮಭಾನವೇ।
ಸರ್ವತ್ರ ಪರಿಪೂರ್ಣಾಯ ಅಹೋಬಿಲೇಶಾಯ ಮಂಗಳಂ ॥೧೨॥

ಮಂಗಳಾಶಾಸನಮಿದಂ ಮಾನಿವಾಸಮುನೀರಿತಂ।



## ಅಧ್ಯಾಯ - 13

# ಆಚಾರ್ಯರ ನೃಸಿಂಹ ದರ್ಶನ

ಭಾರತೀಯ ದರ್ಶನ ಸಾಹಿತ್ಯದಲ್ಲಿ ಆಚಾರ್ಯ ಪರಂಪರೆಗೆ ವಿಶಿಷ್ಟವಾದ ಸ್ಥಾನವುಂಟು. ಧರ್ಮ-ಕರ್ಮಗಳ ವಿಚಾರಧಾರೆಯನ್ನು ಭಕ್ತಿ-ಅನುರಕ್ತಿಗಳ ಸಾಂಗತ್ಯವನ್ನು ಇವರು ತಮ್ಮ ಉತ್ಕೃಷ್ಟವಾದ ಗ್ರಂಥಗಳ ಮೂಲಕ ನಮಗೆ ಉಣಬಡಿಸಿದ್ದಾರೆ. ಆಚಾರ್ಯ ತ್ರಯರಲ್ಲಿ, ವಿಶೇಷವಾಗಿ ಶಂಕರಾಚಾರ್ಯರು ಮತ್ತು ಮಧ್ವಾಚಾರ್ಯರು ತಮ್ಮ ಆರಾಧ್ಯ ದೈವವಾದ ನರಸಿಂಹನನ್ನು ಕಂಡಿರುವ ಬಗೆಯು ಈ ಅಧ್ಯಾಯದಲ್ಲಿ ಸಾಗಿಬಂದಿದೆ.

## ಶಂಕರಾಚಾರ್ಯರು

ಆದಿಗುರು ಶಂಕರಾಚಾರ್ಯರು ಭಾರತ ದೇಶದ ಆಚಾರ್ಯ ಪುರುಷರಲ್ಲಿ ಅದ್ವಿತೀಯರಾಗಿದ್ದಾರೆ. ಅದ್ವೈತ ಮತ ಸ್ಥಾಪನಾಚಾರ್ಯರಾದ ಇವರು ಸ್ಥಾಪಿಸಿದ ಮೂಲಮಠಗಳು ಮತ್ತು ಅವುಗಳ ಶಾಖೆಗಳು ಸಾಕಷ್ಟು ಸಂಖ್ಯೆಯಲ್ಲಿವೆ. ಕೇರಳ ರಾಜ್ಯದ ಕಾಲಟಿ ಎಂಬಲ್ಲಿ ಶಿವಗುರು-ಆರ್ಯಾಂಬೆ ಎಂಬ ದಂಪತಿಗಳ ಮಗನಾಗಿ ಜನಿಸಿದ ಶಂಕರರು ಬಾಳಿ ಬದುಕಿದ ಕಾಲವನ್ನು ಎಂಟನೇ ಶತಮಾನವೆಂದು ಹೇಳಲಾಗುತ್ತಿದೆ. ವೈಶಾಖ ಶುದ್ಧ ಪಂಚಮಿಯಂದು ಇವರ ಜನ್ಮದಿನವನ್ನು 'ಶಂಕರ ಜಯಂತಿ' ಹೆಸರಿನಲ್ಲಿ ಆಚರಿಸಲಾಗುತ್ತಿದೆ.

ಆಚಾರ್ಯರು ಪ್ರತಿಪಾದಿಸಿದ ಅದ್ವೈತ ಪರಂಪರೆಯನ್ನು ಅನುಸರಿಸುತ್ತಿರುವ ಅಸಂಖ್ಯ ಜನಸಮುದಾಯವು ಭಾರತ ದೇಶದ ಉದ್ದಗಲಕ್ಕೆ ಹರಡಿಕೊಂಡಿದೆ. ಸಾಮಾನ್ಯಜನ ಮಾತ್ರವಲ್ಲದೆ ಮಹಾವಿದ್ವಾಂಸರೂ, ಲೋಕೋತ್ತರ ಪರಿಣತರೂ ಸಹ ಇವರನ್ನು ಭಕ್ತಿ ಯಿಂದ ನಮಸ್ಕರಿಸಿ ಪ್ರಶಂಸಿಸಿದ್ದಾರೆ. ರಾಜಚೂಡಾಮಣಿ ವಿದ್ಯಾರಣ್ಯ, ಮಾಧವ, ಶಂಕರಾನಂದ - ಇವರೆಲ್ಲರೂ ಆಚಾರ್ಯರ ಕೃತಿಗಳನ್ನೂ, ಅವರ ಗುರುತರವಾದ ಕಾರ್ಯಗಳನ್ನೂ

ವಿಮರ್ಶಿಸಿ ವಿಶ್ಲೇಷಿಸಿದ್ದಾರೆ. ಕವಿ-ವಾದಿಗಳಾಗಿ ಪ್ರಸಿದ್ಧರಾದ ಶಂಕರರ ಅನೇಕಾನೇಕ ಕೃತಿಗಳು ನಮಗಿಂದು ಲಭ್ಯವಾಗಿವೆ. ಇವು ನಮಗೆ ವೇದಾಂತ ದರ್ಶನಗಳ ಜೊತೆಗೆ ಸಾಹಿತ್ಯ ಮಾಧುರ್ಯವನ್ನು ನೀಡುತ್ತಾ, ನಮ್ಮ ಜ್ಞಾನದಾಹವನ್ನು ತಣಿಸುತ್ತಿವೆ.

ಶಂಕರಾಚಾರ್ಯರು ಲೋಕಕಲ್ಯಾಣಾರ್ಥವಾಗಿ ಅವತರಿಸಿದ ಮಹಾಪುರುಷರು. ಅವರು ಮಹಾವೇದಾಂತಿಗಳಲ್ಲಿ ಅಗ್ರಗಣ್ಯರೂ ಹೌದು. ತಮ್ಮ ಅಲ್ಪಾಯುಷ್ಯದಲ್ಲಿ ಹಿರಿದಾದದ್ದನ್ನು ಸಾಧಿಸಿದ ಮಹಾಸಾಧಕರು. ವೈದಿಕ ಧರ್ಮೋದ್ಧಾರ, ಅದ್ವೈತ ಸಿದ್ಧಾಂತ ಪ್ರತಿಪಾದನೆ, ಭಾರತದ ನಾಲ್ಕು ದಿಕ್ಕುಗಳಲ್ಲಿ ನಾಲ್ಕು ಮಠಗಳ ಸ್ಥಾಪನೆಗಳು ಇವರ ಸಾಧನೆಗಳಲ್ಲಿ ಅನನ್ಯವಾದದ್ದು. ಆಸೇತು ಹಿಮಾಚಲ ಪರ್ಯಂತ ಭರತಖಂಡವನ್ನು ಸುತ್ತಿ ತಮ್ಮ ಮತಸಿದ್ಧಾಂತಗಳನ್ನು ತಾತ್ವಿಕ ಆಧಾರದ ಮೇಲೆ ಭದ್ರವಾಗಿ ನೆಲೆಗೊಳಿಸಿ, ಜನತೆಗೆ ಭಕ್ತಿಮಾರ್ಗವನ್ನು ಶಂಕರರು ಉಪದೇಶಿಸಿದ್ದಾರೆ. ಅತ್ಯಂತ ಕಿರಿವಯಸ್ಸಿನಲ್ಲಿಯೇ ಕೇದಾರಕ್ಕೆ ಹೋಗಿ ಕಣ್ಮರೆಯಾದರೂ ಭಕ್ತಿ, ಜ್ಞಾನ, ವೈರಾಗ್ಯ ಸಾಮ್ರಾಜ್ಯಗಳಲ್ಲಿ ಚಿರಂತನರಾಗಿದ್ದಾರೆ.

ಕನ್ಯಾಕುಮಾರಿಯಿಂದ ಕಾಶ್ಮೀರದವರೆಗೆ, ಅಬೂಬೆಟ್ಟಗಳಿಂದ ಅಸ್ಸಾಂವರೆಗಿನ ವಿಸ್ತಾರವಾದ ಭೂಖಂಡವನ್ನು ನಾಲ್ಕೈದು ಸಲವಾದರೂ ಸುತ್ತಿದ ಆಚಾರ್ಯರು ಕಾಣದ ತೀರ್ಥಕ್ಷೇತ್ರವಿಲ್ಲ. ಎಲ್ಲ ವಿದ್ಯಾಕ್ಷೇತ್ರಗಳಿಗೂ ಹೋಗಿ ಪಂಡಿತ-ಪಾಮರರನ್ನೆಲ್ಲ ಇವರು ಅನುಗ್ರಹಿಸಿದ್ದಾರೆ. ಆಚಾರ್ಯರ ತತ್ವಬೋಧನೆ ಪಾಮರರನ್ನು ಪುಣ್ಯಶಾಲಿಗಳನ್ನಾಗಿ ಮಾಡುವ ಶಕ್ತಿ ಸಾಮರ್ಥ್ಯಗಳಿಂದ ತುಂಬಿದೆ.

ಶಂಕರರ ದಿವ್ಯವಾಣಿಯು ನಾಡಿನ ಮೂಲೆ ಮೂಲೆಗಳಲ್ಲಿ ಅವರ ಶ್ರೇಷ್ಠತಮವಾದ ಕೃತಿಗಳ ಮೂಲಕ ಅನುರಣನಗೊಳ್ಳುತ್ತಿದೆ. ಭಾರತೀಯ ಆಧ್ಯಾತ್ಮಿಕ ವಾಙ್ಮಯವು ಮನೆ ಮನೆಗಳಲ್ಲಿ ಬೆಳಗುತ್ತಿದೆ. ಆಚಾರ್ಯರು ಸ್ತೋತ್ರರಚನೆ ಮಾಡದ ದೇವತೆಗಳೇ ಇಲ್ಲವೆಂಬುದು ಸರಿಯಾದ ಮಾತಾದೀತು. ಗಣೇಶ, ಸುಬ್ರಮಣ್ಯ, ಶಿವ, ದಕ್ಷಿಣಾಮೂರ್ತಿ, ತ್ರಿಪುರಸುಂದರಿ, ಲಕ್ಷ್ಮೀನರಸಿಂಹ, ಭವಾನಿ, ಶಾರದೆ, ಅಚ್ಯುತ, ಗೋವಿಂದ, ಕೃಷ್ಣನ ಆದಿಯಾಗಿ ಸರ್ವ ದೇವತೆಗಳ ಬಗೆಗೆ ಆಚಾರ್ಯರು ಸ್ತೋತ್ರಗಳನ್ನು ರಚಿಸಿದ್ದಾರೆ. ಇವರ ಹೆಸರಿನಲ್ಲಿ ಸುಮಾರು ಇನ್ನೂರೈವತ್ತಕ್ಕೂ ಮಿಗಿಲಾದ ಸ್ತೋತ್ರಗಳಿದ್ದು ಅವುಗಳಲ್ಲಿ ಹಲವು ಸರ್ವಜನ ಆದರಣೀಯವಾಗಿವೆ.

## ಕರಾವಲಂಬನ ಸ್ತೋತ್ರ

'ಲಕ್ಷ್ಮೀನರಸಿಂಹ ಕರಾವಲಂಬನ ಸ್ತೋತ್ರ'ವು ಆದಿಶಂಕರಾಚಾರ್ಯರ ರಚನೆಯಾಗಿ ಪ್ರಸಿದ್ಧಿ ಪಡೆದಿದೆ. ಇವರ ಅನೇಕ ಕೃತಿಗಳಲ್ಲಿ ಪ್ರೌಢಿಮೆ ತುಂಬಿರುವುದಾದರೂ, ಈ ಸ್ತೋತ್ರವು ಸರಳವಾಗಿ ಸುಂದರವಾಗಿರುವುದೊಂದು ವಿಶೇಷವೆನ್ನಬೇಕು. ಉಪನಿಷತ್ತುಗಳಲ್ಲೊಂದಾದ ನರಸಿಂಹತಾಪನೀಯವು ವೇದಾಂತದ ಮಾರ್ಗದಲ್ಲಿ ಸಂಸಾರ ತಾಪದ

ನಿವಾರಣೆಯನ್ನು ತಿಳಿಸಿಕೊಡುವ ಗಹನವಾದ ಕೃತಿಯಾಗಿರುತ್ತದೆ. ಈ ದಾರಿಯಲ್ಲೇ ನಡೆದು ಸುಲಭವಾದ ರೀತಿಯಲ್ಲಿ ಸಾಂಸಾರಿಕ ಕೋಟಲೆಗಳಿಂದ ನಿವೃತ್ತಿ ಹೊಂದುವ ಬಗೆಯನ್ನು ಅತ್ಯಂತ ಮನೋಜ್ಞವಾಗಿ ತಿಳಿಸಿಕೊಡುವ ರಚನೆಯಾಗಿ 'ಕರಾವಲಂಬನ ಸ್ತೋತ್ರ'ವು ಕೈಗೆಟುಕುವಂತಿದೆ.

ಅತಿ ನಿರರ್ಗಳವಾಗಿ, ಪಾಂಡಿತ್ಯ ಪ್ರದರ್ಶನವಿಲ್ಲದೆ, ರಮ್ಯವಾದ ಧಾಟಿಯಲ್ಲಿ ಸಾಗುವ ಈ ಸ್ತುತಿಯ ಮೂಲಕ ಆಚಾರ್ಯರು ನರಸಿಂಹನಲ್ಲಿ ಹೊಂದಿದ ಭಕ್ತಿಯು ವ್ಯಕ್ತವಾಗುತ್ತದೆ. ನರಸಿಂಹನೊಂದಿಗೆ ಶಂಕರರಿಗಿದ್ದ ತಾತ್ವಿಕವಾದ ಸಂಬಂಧವನ್ನು ಇದು ಪ್ರತಿಪಾದಿಸುವಂತಿದೆ. ಆಚಾರ್ಯರ ಪರಂಪರೆಗೆ ಸೇರಿದ ಅನೇಕ ಮಠಗಳಲ್ಲಿನ ಯತಿಗಳು ತಮ್ಮನ್ನು ನರಸಿಂಹನ ಹೆಸರಿನಿಂದ ಕರೆದುಕೊಂಡಿರುತ್ತಾರೆ. ಆಚಾರ್ಯರಂತೆ ಅವರ ಶಿಷ್ಯರೂ ಸಹಾ ನರಸಿಂಹಸ್ವಾಮಿಯ ಬಗೆಗೆ ಹೊಂದಿದ್ದ ಅಚಲವಾದ ಭಕ್ತಿ-ಶ್ರದ್ದೆಗಳನ್ನು ಇದು ಶ್ರುತಪಡಿಸುವಂತಿದೆ. ನರಸಿಂಹ ಮಂತ್ರದ ಉಪಾಸನೆಯನ್ನು ಸಹ ಇವರ ಪರಂಪರೆಯ ಶಿಷ್ಯರು ಮಾಡಿದ ನಿದರ್ಶನಗಳಿವೆ.

ವೇದಾಂತದ ಉಪದೇಶವನ್ನು ಪ್ರಮುಖವಾಗಿ ಒಳಗೊಂಡಿರುವ 'ಕರಾವಲಂಬನ ಸ್ತೋತ್ರ'ದಲ್ಲಿ ಪ್ರತಿ ನಾಲ್ಕು ಸಾಲಿನ ಸುಮಾರು ಇಪ್ಪತ್ತು ಪದ್ಯಗಳಿವೆ. ಈ ಸಂಖ್ಯಾ ನಿರ್ಣಯವು ಖಚಿತವಾದದ್ದೇನಲ್ಲ. ಒಂದೊಂದು ಪದ್ಯದಲ್ಲಿಯೂ ಗಹನವಾದ ಅರ್ಥ ವಿಶೇಷತೆಯಿದೆ. ಬ್ರಹ್ಮಸತ್ಯದ ವಿಚಾರವನ್ನು ಆಚಾರ್ಯರು ತಮ್ಮ ಈ ಸ್ತೋತ್ರದ ಮೂಲಕ ಮುಮುಕ್ಷುಗಳಿಗೆ ಬೋಧಿಸಿದ್ದಾರೆ. ಭಗವಂತನ ಕೃಪಾಹಸ್ತವನ್ನು ಬೇಡುವ ಆಚಾರ್ಯರ ಈ ಸ್ತೋತ್ರದಲ್ಲಿ ಉನ್ನತ ಮಾರ್ಗದರ್ಶನವಿದೆ. ಜ್ಞಾನ ಸಂಪಾದನೆಗೆ ಅಗತ್ಯವಾದ ಸಾಧನಗಳನ್ನು, ಪುರುಷಾರ್ಥಗಳನ್ನು ಇದರ ಮೂಲಕವಾಗಿ ಪಡೆದುಕೊಳ್ಳಲು ಅವಕಾಶವಿದೆ.

ಶಂಕರಾಚಾರ್ಯರ ಈ ಸ್ತೋತ್ರ ರಚನೆಯು ಸಂಸ್ಕೃತ ಭಾಷೆಯಲ್ಲಿದೆ. ಇದರಲ್ಲಿ ಬರುವ ವಿಚಾರಗಳು ಮಾನವ ಜೀವನಕ್ಕೆ ಹತ್ತಿರ ಸಂಬಂಧವನ್ನು ಹೊಂದಿರುವ ಕಾರಣ ಭಾಷೆಯ ಸಮಸ್ಯೆ ಇದರಲ್ಲಿ ಕಂಡುಬರದು. ಮನಸ್ಸಿಗೆ ಮುಟ್ಟುವಂತಿರುವ ಇದರಲ್ಲಿನ ವಿಷಯಸಂಪತ್ತು ಅನನ್ಯವಾದದ್ದು. ಜೀವನದಲ್ಲಿ ಕಂಡುಬರುವ ಕಷ್ಟಕಾರ್ಪಣ್ಯಗಳು ಎಲ್ಲ ತರದ ಜನ ಸಮುದಾಯಕ್ಕೂ ಸಾಧಾರಣವೇ ಆಗಿರುವುದಾದ್ದರಿಂದ ಅದರಿಂದ ನಿವಾರಣೆಯಾಗುವ ಮಾರ್ಗವನ್ನು ಬದುಕಿಗೆ ಹತ್ತಿರವಾದ ಉದಾಹರಣೆಗಳ ಮೂಲಕ ವಿವರಿಸಿರುವುದು ಇಲ್ಲಿನ ವೈಶಿಷ್ಟ್ಯವೆಂದು ಹೇಳಬೇಕು. ಹೀಗಾಗಿ ಇಲ್ಲಿನ ಕ್ಲಿಷ್ಟತೆಗಳು ದೂರಸರಿಯುತ್ತವೆಯೆಂದರೆ ಸರಿಯಾದೀತು.

'ಲಕ್ಷ್ಮೀನೃಸಿಂಹ ಮಮ ದೇಹಿ ಕರಾವಲಂಬಮ್' ಎಂಬ ಪದ ಸಮೂಹದ ಮುಕ್ತಾಯವನ್ನು ಇಲ್ಲಿ ಬರುವ ಬಹುಪಾಲು ಪದ್ಯಗಳು ಒಳಗೊಂಡಿರುವ ಕಾರಣದಿಂದ ಇಡೀ ಸ್ತೋತ್ರವನ್ನು ಈ ಹೆಸರಿನಿಂದ ಕರೆಯುತ್ತಿರುವುದು ಸಹಜವಾಗಿ ಕಾಣುತ್ತದೆ.

ಇಲ್ಲಿನ ಒಟ್ಟು ಕೃತಿಯ ಅರ್ಧಭಾಗದಷ್ಟು ಪದ್ಯಗಳು ಸಂಸಾರವೆಂಬ ಪದಾರಂಭವನ್ನು ಹೊಂದಿ ಅದರ ಮಹತ್ವದ ಅರಿವನ್ನುಂಟು ಮಾಡುತ್ತಿವೆ.

ಮೊದಲೆರಡು ಪದಗಳಲ್ಲಿ ನರಸಿಂಹನ ಗುಣಸ್ವಭಾವಗಳನ್ನು ವಿವರಿಸಲಾಗಿದೆ. ಪುಣ್ಯಮೂರ್ತಿಯಾದ ಭಗವಂತನು ಲಕ್ಷ್ಮೀದೇವಿಗೆ ಆಶ್ರಿತನಾಗಿದ್ದಾನೆ. ಶೇಷಶಾಯಿಯಾದ ಈತನು ಮಾಣಿಕ್ಯದಂತೆ ಪ್ರಜ್ವಲಿಸುತ್ತಿದ್ದಾನೆ. ಯೋಗೀಶ್ವರನಂತೆ ಕಾಣುತ್ತಾನೆ. ಶಾಶ್ವತನೂ ಆದ ಭಗವಂತನು ತನಗೆ ಶರಣಾಗತರಾದವರಿಗೆ ಮುಕ್ತಿಯನ್ನು ಕರುಣಿಸುವ ಸ್ವಭಾವದವ ನಾಗಿದ್ದಾನೆ. ಕೈಯಲ್ಲಿ ಚಕ್ರವನ್ನು ಹಿಡಿದು ದುಷ್ಟಶಿಕ್ಷಕನಾಗಿದ್ದಾನೆ. ಲೋಕದ ಪ್ರಭುವಾದ ಈತನನ್ನು ಬ್ರಹ್ಮ, ಇಂದ್ರ, ರುದ್ರ, ಮರುತ್ ಗಣಗಳೆಲ್ಲ ಒಟ್ಟಾಗಿ ಶಿರಬಾಗಿ ನಮಸ್ಕರಿಸುತ್ತಿದ್ದಾರೆ. ಆ ಸಮಯದಲ್ಲಿ ಅವರ ಕಿರೀಟಗಳಲ್ಲಿನ ರತ್ನಸಮೂಹದ ಕಾಂತಿಯಿಂದ ಅಧಿಕ ವಾದ ಆನಂದವುಂಟಾಗುತ್ತಿದೆ. ತೇಜೋರೂಪವಾದ ಕಾಂತಿಸಮೂಹಕ್ಕೆ ವಿಭಿನ್ನವೆಂಬ ಹಾಗೆ, ಬೇರಾವುದಕ್ಕೂ ಸಮನಲ್ಲದ ಮಹಾಮಹಿಮ ರತ್ನಗಳನ್ನು ಆತನ ಪಾದಮೂಲಗಳು ಧರಿಸಿವೆ. ಇಲ್ಲಿ ವಸ್ತುಸಹಜವಾದ ಗುಣಗಳಿಗಿಂತಲೂ ವ್ಯಕ್ತಿಯ ಆದರ್ಶ ಅವನ ಪರಿಶುಭ್ರ ನಡತೆಗಳಿಗೆ ಸಂದಿರುವ ಪ್ರಾಶಸ್ತ್ಯದ ಅರಿವಾಗುತ್ತದೆ. ಭಗವಂತನು ಶರಣಾಗತ ವತ್ಸಲನೆಂಬ ಆತನ ಮಹಿಮೆ ವ್ಯಕ್ತವಾಗುತ್ತದೆ. ಸರ್ವಗುಣ ಸಂಪನ್ನತೆಗೆ ಇದಕ್ಕಿಂತಲೂ ಬೇರೆ ನಿದರ್ಶನವು ಅಗತ್ಯವಿಲ್ಲ.

## ಸಂಸಾರದ ಬವಣೆ

ಸಂಸಾರವೆಂಬುದು ಒಂದು ಘೋರಾರಣ್ಯವಿದ್ದಂತೆ. ಇಲ್ಲಿ ಸಂಚರಿಸುವವರು ವಿಶೇಷ ಸನ್ನದ್ಧರಾಗಿರಬೇಕಾಗುತ್ತದೆ. ಭೀಕರವಾದ ದುಷ್ಟಮೃಗಗಳನ್ನು ಎದುರಿಸುವ ಸಾಹಸ ಪ್ರವೃತ್ತಿಯೂ ಅತ್ಯಗತ್ಯವಾದದ್ದು. ಅವುಗಳ ಬಾಧೆಗೆ ಸಿಲುಕಿ ಬಿಡಿಸಿಕೊಳ್ಳಬೇಕಾದರೆ ಸಾಕಾಗಿ ಹೋಗುತ್ತದೆ. ಮತ್ಸರದ ಬೇಗೆಯೂ ಸಹ ಸಂಸಾರದ ಕಾನನದಲ್ಲಿ ಸಿಲುಕಿದವರನ್ನು ಕಾಡುವ ರೀತಿ ಬೇರೆಯೇನಲ್ಲ. ಇದು ಗ್ರೀಷ್ಮ ಋತುವಿನ ಬೇಗೆಗೆ ಸಮನಾದದ್ದು. ಅರಿ ಷಡ್ವರ್ಗಗಳಲ್ಲೊಂದಾದ ಇದರಿಂದ ನಮ್ಮನ್ನು ಪಾರು ಮಾಡಿಕೊಳ್ಳಲು ಭಗವಂತನ ಕರಾವಲಂಬನವಲ್ಲದೆ ಬೇರೆ ದಾರಿ ಕಾಣುವುದಿಲ್ಲ.

ಸಂಸಾರದ ಘೋರವು ಮತ್ತೊಂದು ತೆರನಾಗಿ ಕಾಡುತ್ತದೆ. ಅದೊಂದು ಆಳವಾದ ಕೂಪದಂತೆ ಕಂಡುಬರುತ್ತದೆ. ಇದರ ಕೊನೆಯನ್ನು ಕಾಣಲು ಸಾಧ್ಯವಾಗುತ್ತಿಲ್ಲ. ಅಶಾಶ್ವತವಾದ ದೇಹವು ಇದರಲ್ಲಿ ಬಿದ್ದು ತೊಳಲಾಡುತ್ತಿದೆ. ಇದು ಉಂಟು ಮಾಡುವ ದುಃಖ ಅಪಾರವಾದದ್ದು. ಅಸಹನೀಯವಾದ ಯಾತನೆ, ಅತೀವ ವೇದನೆಗಳಿಗೆ ಈ ಕೂಪದಲ್ಲಿರುವ ಭಯಂಕರವಾದ ಸರ್ಪಗಳೇ ಕಾರಣವೆನ್ನಬೇಕು. ಇದರಿಂದ ಬಿಡುಗಡೆ ಹೊಂದಲು ಭಗವಂತನ ಪಾದಗಳಲ್ಲಿ ಶರಣಾಗಿ ಆತನ ಕರಗಳ ಆಶ್ರಯವನ್ನು ಹೊಂದಬೇಕು ಎಂದು ಆಚಾರ್ಯರು ಪ್ರತಿಪಾದಿಸಿದ್ದಾರೆ.

ಮೃತ್ಯುಸಾಗರಕ್ಕೆ ಸಮನಾದದ್ದು ಈ ಸಂಸಾರ. ಅಂತಪಾರವಿಲ್ಲದ ಸಾಗರದಲ್ಲಿ ದೈತ್ಯಾಕಾರದ ಮೊಸಳೆಗಳಿವೆ. ಅವುಗಳು ಉಂಟು ಮಾಡುವ ಕೇಡು, ವಿಪತ್ತುಗಳು ಸಾವಿನ ದವಡೆಗೆ ತಳ್ಳುತ್ತಿದೆ. ಬೇರೆಯವರಿಂದ ಎಂದರೆ ದುಷ್ಟಜನರಿಂದ ಉಂಟಾಗುವ ಹಾನಿಯೂ ಈ ತೆರನಾದದ್ದೆ ಆಗಿರುತ್ತದೆ. ಲೋಕದಲ್ಲಿ ತುಂಬಿರುವ ಕೆಟ್ಟಜನರ ಉಪಟಳ ವನ್ನು ಮಾರ್ಮಿಕವಾದ ರೀತಿಯಲ್ಲಿ ಇಲ್ಲಿ ಬಣ್ಣಿಸಲಾಗಿದೆ. ತನ್ನನ್ನು ಇದರಿಂದ ಪಾರು ಮಾಡಬೇಕೆಂಬ ದನಿಯನ್ನು ಕಾಣುತ್ತೇವೆ. ಗಜೇಂದ್ರ ಮೋಕ್ಷವನ್ನು ಮಾಡಿದವನು ನರ ಸಿಂಹ ರೂಪ ಧರಿಸಿದ ವಿಷ್ಣುವೇ ಆಗಿದ್ದಾನೆ. ಈತನ ಕೃಪಾವಲಂಬನ ತನಗೆ ಅಗತ್ಯವೆಂಬ ಪ್ರಾರ್ಥನೆ ಇಲ್ಲಿದೆ.

ಸಂಸಾರವು ಒಂದು ಮಹಾನ್ ವೃಕ್ಷವನ್ನು ಹೋಲುತ್ತಿದೆ. ಇದರ ಬೀಜವು ಪಾಪದಿಂದ ಕೂಡಿದ್ದು. ರೆಂಬೆ ಕೊಂಬೆಗಳು ಅನಂತಕರ್ಮಗಳಿಂದ ಬೆಳವಣಿಗೆ ಹೊಂದಿವೆ. ಇದರಲ್ಲಿನ ಕೋಟ್ಯಂತರ ಎಲೆಗಳು ಕರಣಗಳನ್ನು ಹೋಲುತ್ತಿವೆ. ಕಾಮವೆಂಬ ಪುಷ್ಪಗಳಿಂದ ಕೂಡಿ ಇದು ವಿಜೃಂಭಿಸುತ್ತಿದೆ. ದುಃಖಪೂರಿತವಾದ ಫಲದಿಂದ ತುಂಬಿದ ಈ ವೃಕ್ಷವು ಮೋಕ್ಷಕ್ಕಂತೂ ಮಾರ್ಗವಲ್ಲ. ಇದು ಮೃತ್ಯುಸಮಾನವಾಗಿರುವುದಲ್ಲದೆ ಬೇರೇನೂ ಆಗಿಲ್ಲ. ಇಂತಹ ವೃಕ್ಷವನ್ನೇರಿ ಕುಳಿತವರು ಮತ್ತೊಂದು ಬಲವಾದ ಶಕ್ತಿಯಿಂದ ಪಾರಾಗಬೇಕೇ ಹೊರತು ಬೇರೆ ದಾರಿಯಿಲ್ಲ. ಅದನ್ನು ನೀಡುವ ಸಾಮರ್ಥ್ಯ ನರಸಿಂಹನಿಗಲ್ಲದೆ ಬೇರಾರಿಗೂ ಸಾಧ್ಯವಿಲ್ಲ. ಆದ್ದರಿಂದ ಅವನನ್ನು ತನ್ನ ಕರಕಮಲಗಳ ಆಸರೆ ನೀಡಬೇಕೆಂದು ಪ್ರಾರ್ಥಿಸಿಕೊಳ್ಳುವ ವಿಧಾನವು ಇಲ್ಲಿ ಕಂಡುಬಂದಿದೆ.

ಸಂಸಾರವೆಂಬ ಸರ್ಪವು ಭಯಂಕರವಾದ ಮೊಗವನ್ನು ಹೊಂದಿ ತನ್ನ ಹರಿತವಾದ ಹಲ್ಲುಗಳನ್ನು ಪ್ರದರ್ಶಿಸುತ್ತಿದೆ. ಅದರ ಕರಾಳ ವಿಷವು ದಹದಹನೆ ದಹಿಸುವಂತಿದೆ. ಸರ್ಪವು ದ್ವೇಷಕ್ಕೆ ಕಾರಣವಾದದ್ದು. ಹಗೆತನವಿದ್ದಲ್ಲಿ ಬಾಳು ದುರವಸ್ಥೆಯ ಬಲೆಯಾಗುತ್ತದೆ ಯಷ್ಟೆ. ಇದರಿಂದ ಮುಕ್ತಿ ದೊರೆಯಬೇಕಾದರೆ ಗರುಡನು ಹಾವಿನ ದ್ವೇಷಿಯಾಗಿದ್ದಾನೆ. ಈತನನ್ನು ಮಹಾವಿಷ್ಣುವು ವಾಹನವಾಗಿ ಹೊಂದಿದ್ದಾನೆ. ಕ್ಷೀರಸಾಗರವು ಭಗವಂತನ ನೆಲೆಯಾಗಿದೆ. ಸಂಸಾರವೆಂಬ ಸರ್ಪದ ನೆರಳಿನಿಂದ ಹೊರಬರಬೇಕಾದರೆ ಅನಂತಸಾಗರದಲ್ಲಿ ಫಣೀಂದ್ರನನ್ನು ಹಾಸಿಗೆಯಾಗಿ ಮಾಡಿಕೊಂಡು ಪವಡಿಸಿದ ಅನಂತಶಯನನಾದ ನರಸಿಂಹನ ಸಹಾಯಹಸ್ತವು ಬೇಕಾಗಿದೆ. ಅದನ್ನು ತನಗೆ ನೀಡಬೇಕೆಂಬ ಯಾಚನೆ ಇಲ್ಲಿ ಧ್ವನಿತ ವಾಗಿರುವುದನ್ನು ಗಮನಿಸಬೇಕು.

ಅತಿ ಭೀಕರವಾಗಿ ಉರಿಯುತ್ತಿರುವ ದಾವಾನಿಲದಂತೆ ಸಂಸಾರವು ಕಂಡು ಬರುತ್ತಿದೆ. ಇದರ ಬೆಂಕಿಯಲ್ಲಿ ಸಿಲುಕಿ ರೋಮರಾಶಿಯಿಂದ ಕೂಡಿದ ಶರೀರವು ಸುಟ್ಟು ಕಪ್ಪಾಗುತ್ತಿದೆ. ಶರತ್ಕಾಲದ ತಾವರೆಯಂತಿರುವ ಭಗವಂತನ ಆಶ್ರಯವನ್ನು ಹೊಂದಿ ಇದರಿಂದ ಪಾರಾಗ ಬಹುದು. ಅದಕ್ಕಾಗಿ ಆತನ ಕರಗಳ ಅನುಗ್ರಹ ಅಗತ್ಯವಾಗಿದೆ. ಅದನ್ನು ತನಗೆ ನೀಡುವಂತೆ ಬೇಡುವ ಪರಿಯನ್ನು ಇಲ್ಲಿ ಕಾಣುತ್ತೇವೆ.

ಸಂಸಾರವೆಂಬ ಸಮುದ್ರದಿಂದ ಪರ್ವತೋಪಾದಿಯಲ್ಲಿ ಮೇಲೇಳುತ್ತಿರುವ ಅಲೆಗಳು ಮನಸ್ಸನ್ನು ಅಲ್ಲೋಲ ಕಲ್ಲೋಲಗೊಳಿಸುತ್ತಿವೆ. ಹೆಂಡತಿ-ಮಕ್ಕಳ ಭಾರವು ಸಮುದ್ರದ ಆಳಕ್ಕೆ ಸೆಳೆಯುತ್ತಿದೆ. ಸಂಸಾರದ ಹೊರೆಯು ದೊಡ್ಡ ಬಲೆಯ ಆಕಾರದಲ್ಲಿದೆ. ಇದರಲ್ಲಿ ಬಿದ್ದ ಮೀನಿನಂತಾಗಿ ಶಿರವು ನಡುಗುತ್ತ, ಶರೀರವು ನಿತ್ರಾಣಗೊಳ್ಳುತ್ತಿದೆ. ಇದರಿಂದ ಹೊರಬರಲು ದಯಾಳುವಾದ ಪರಮಾತ್ಮನ ನೆರವಿಲ್ಲದೆ ಆತನ ತೆರೆದ ಹಸ್ತದ ಆಸರೆಯಿಲ್ಲದೆ ಸಾಧ್ಯವಿಲ್ಲ. ಅದನ್ನು ಬೇಡುವ ಪರಿಯನ್ನು ಇಲ್ಲಿ ಕಾಣುತ್ತೇವೆ.

ಸಂಸಾರವೆಂಬ ಮತ್ತಗಜಗಳು ಸುತ್ತಲೂ ತುಂಬಿಕೊಂಡಿದ್ದು, ಅವುಗಳ ಸೊಂಡಿಲುಗಳಿಂದ ಬಲವಾದ ಹೊಡೆತಗಳು ಬೀಳುತ್ತಿವೆ. ಇದರಿಂದ ನಿತ್ರಾಣವುಂಟಾಗಿ ಪ್ರಾಣ ಹೋಗುವ ಪರಿಸ್ಥಿತಿ ಉಂಟಾಗುತ್ತಿದೆ. ಉಸಿರು ತಿರುಗಿಸಲೂ ಆಗದ ದುಸ್ಥಿತಿಗೆ ಒಳಗಾಗುವಂತಾಗಿದೆ. ಇದರಿಂದ ಪಾರಾಗಲು ಕರುಣಾಳುವಾದ ಭಗವಂತನ ಕೃಪಾಹಸ್ತದಿಂದ ಮಾತ್ರ ಸಾಧ್ಯವಾದ ಕಾರಣ ಆ ಕರಗಳನ್ನು ತನಗೆ ನೀಡಬೇಕೆಂಬ ಬೇಡಿಕೆ ಇಲ್ಲಿ ತುಂಬಿಬಂದಿದೆ.

ವಿವೇಕವೆಂಬುದು ಮಹಾಧನದಂತಿರುವುದು. ಇದನ್ನು ಪಾಪಭೀತಿಯಿಲ್ಲದ ಕಳ್ಳರ ಗುಂಪು ಅಪಹರಿಸಿಕೊಂಡು ಹೋಗಿದೆ. ಈ ಕಾರಣದಿಂದ ಅಂಧನಾಗಿರುವ ತನ್ನನ್ನು ಪ್ರೇಮಸ್ವರೂಪನಾದ ಭಗವಂತನು ರಕ್ಷಿಸಬೇಕು. ಮೋಹಕ್ಕೆ ಒಳಗಾದ ತಾನು ಆಳವಾದ ಕೂಪಕ್ಕೆ ಬಿದ್ದಂತಾಗಿದೆ. ಇದರಿಂದ ತನ್ನನ್ನು ಉದ್ಧರಿಸಿ ಮೇಲೆದ್ದು ಬರಲು ಅಗತ್ಯವಾದ ಕೃಪಾಹಸ್ತವನ್ನು ತನಗೆ ನೀಡಬೇಕೆಂದು ಮೊರೆಯಿಡುವ ದನಿಯನ್ನು ಕಾಣಬಹುದಾಗಿದೆ.

ಲಕ್ಷ್ಮೀಪತಿ, ಕಮಲನಾಭ, ಸುರೇಶ, ವಿಷ್ಣು, ವೈಕುಂಠ, ಕೃಷ್ಣ, ಮಧುಸೂದನ, ಪುಷ್ಕರಾಕ್ಷ, ಕೇಶವ, ಜನಾರ್ದನ, ವಾಸುದೇವ ಮುಂತಾದ ನಾನಾರೂಪಗಳನ್ನು ಹೊಂದಿರುವ ಲಕ್ಷ್ಮೀನರಸಿಂಹನು ನಮ್ಮನ್ನು ಸಲಹಬೇಕೆಂದು, ತನ್ನ ಕೃಪಾಹಸ್ತವನ್ನು ನೀಡಬೇಕೆಂದು ಕೇಳಿಕೊಳ್ಳುವ ವಿಧಾನವು ಇಲ್ಲಿದೆ. ಭಗವಂತನ ನಾಮಸ್ಮರಣೆಯಿಂದ ಅದಮ್ಯವಾದ ಶಕ್ತಿ, ನೈತಿಕಬಲಗಳು ದೊರೆಯಬಹುದೆಂಬ ದೃಢವಾದ ನಂಬಿಕೆಗೆ ಆತನನ್ನು ನಾನಾ ಹೆಸರುಗಳಿಂದ ಸ್ತುತಿಸಿ ಆತನ ಕೃಪೆಗೆ ಪಾತ್ರವಾಗಬಹುದೆಂಬ ವಿಧಾನಕ್ಕೆ ಇಲ್ಲಿ ನಿದರ್ಶನವಿದೆ.

ಮನುಜರೂಪವು ಮಹತ್ವಪೂರ್ಣವಾಗಿರುವಂತೆ ವಿಶಿಷ್ಟವೂ ಆಗಿದೆ. ಅನೇಕ ಜನ್ಮಗಳ ಪರಂಪರೆ ಮನುಷ್ಯನ ಹುಟ್ಟಿಗೆ ಕಾರಣವಾಗಿದೆ. ಪ್ರತಿಯೊಂದರಲ್ಲೂ ಜರ-ಮೃತ್ಯುಗಳ ದ್ವಂದ್ವವಿದೆ. ಇದರಿಂದಾಗಿ ಆಸರೆಯ ತೀರವನ್ನು ತಲುಪಲಾಗುತ್ತಿಲ್ಲ. ದಿಕ್ಕುಗಾಣದ ಮಾನವ ಕುಲಕ್ಕೆ ನೆರವಾಗಲೋಸುಗ ಲಕ್ಷ್ಮೀನರಸಿಂಹನ ಪದಾಬ್ಜಭೃಂಗವಾದ ಆದಿಶಂಕರರು ಉತ್ಕೃಷ್ಟವಾದ ರೀತಿಯಲ್ಲಿ ಈ ಸ್ತೋತ್ರವನ್ನು ರಚಿಸಿರುತ್ತಾರೆ.

ಕರಾವಲಂಬನ ಸ್ತೋತ್ರವನ್ನು ಮನನ ಮಾಡಿಕೊಂಡಾಗ ನಮ್ಮಲ್ಲಿ ಜನ್ಮ-ಜರ-ವ್ಯಾಧಿಗಳ ನಿವಾರಕನಾದ ನರಸಿಂಹಸ್ವಾಮಿಯ ಬಗ್ಗೆ ಅಪಾರ ಭಕ್ತಿಭಾವವುಂಟಾಗುತ್ತದೆ.

ಆದಿಶಂಕರರ ಬಗೆಗೆ ಸಹ ಗೌರವಾಭಿಮಾನಗಳು ತುಂಬಿಕೊಳ್ಳುತ್ತವೆ. ಭಕ್ತಿಕವಿತೆಗಳ ಸಾಲಿಗೆ ಸೇರುವ ಈ ಸ್ತೋತ್ರವು ಮಂತ್ರಮಯವಾದ ವಾಣಿಯಂತಿದ್ದು ನಮ್ಮ ಅನಿಷ್ಟಗಳನ್ನು ಭೀತಿಗಳನ್ನು ತೊಲಗಿಸುವಂತಿದೆ. ಭಗವಂತನ ನಾಮಾಮೃತದ ಮಾಧುರ್ಯವನ್ನನುಭವಿಸಲು ಸುಲಭೋಪಾಯವಾಗಿರುವ ಇದರಲ್ಲಿ ಸಂಸ್ಕೃತಭಾಷೆಯ ಸಹಜಗುಣವು ತುಂಬಿ ನಿಂತಿದೆ. ಹೃದಯವನ್ನು ಆರ್ದ್ರಗೊಳಿಸಿ ಭಕ್ತಿಯಿಂದ ನಮ್ಮನ್ನು ಪರವಶರನ್ನಾಗಿ ಮಾಡುವ, ಜ್ಞಾನ ವಿಕಸಿತರನ್ನಾಗಿಸುವ ವೈರಾಗ್ಯ ಮಾರ್ಗವನ್ನು ಇದರ ಮೂಲಕ ಕಂಡುಕೊಳ್ಳಬಹುದಾಗಿದೆ.

## ಫಲಸಿದ್ಧಿ

ಲಕ್ಷ್ಮೀನೃಸಿಂಹ ಸ್ತೋತ್ರವನ್ನು ದಿನನಿತ್ಯ ಪಠಿಸುವವರಿಗೆ ಪಾರಮಾರ್ಥಿಕದ ಹಾದಿಯು ಸುಲಭವಾದದ್ದು. ಇದನ್ನು ಮನಸ್ಸಿನಲ್ಲಿಯೇ ಹೇಳಿಕೊಳ್ಳುವುದರಿಂದ ಪವಿತ್ರ ತೀರ್ಥಗಳ ಸ್ನಾನದ ಫಲವು ದೊರೆಯುತ್ತದೆ. ಶೃತಿ, ಸ್ಮೃತಿ, ಪುರಾಣಗಳಲ್ಲಿನ ವಿಷಯಗಳನ್ನೊಳಗೊಂಡ ಕರಾವಲಂಬನ ಸ್ತೋತ್ರವನ್ನು ಮಂತ್ರ, ಶಾಸ್ತ್ರ ರಹಸ್ಯಗುಣ ಭೂತವಾದದ್ದೆಂದು ಹೇಳಬಹು ದಾಗಿದೆ.

ಭಾರತೀಯ ಆಧ್ಯಾತ್ಮಿಕ ವಾಙ್ಮಯವೆಲ್ಲವನ್ನೂ ವ್ಯಾಖ್ಯಾನಿಸಿ, ಪರಮಾತ್ಮನು ಸಾರ್ವಲೌಕಿಕನೆಂಬ ಗಹನವಾದ ಸಂಗತಿಯನ್ನು ನಿರೂಪಿಸಿದ ಪುಣ್ಯಪುರುಷರನ್ನಾಗಿ ಶಂಕರಾ ಚಾರ್ಯರನ್ನು ಗೌರವಿಸಿ ಪೂಜಿಸುತ್ತಿದ್ದೇವೆ. ತತ್ವವೇತ್ತರ ಪರಂಪರೆಯಲ್ಲಿ ಮುಂಚೂಣಿ ಯಲ್ಲಿರುವ ಆಚಾರ್ಯರ ಅಮೃತವಾಣಿಯಂತಿರುವ 'ಶ್ರೀ ಲಕ್ಷ್ಮೀನರಸಿಂಹ ಕರಾವಲಂಬನ ಸ್ತೋತ್ರ'ವು ಭಾರತೀಯ ಸ್ತೋತ್ರ ಮುಕ್ತಾವಳಿಯ ಮಾಣಿಕ್ಯದಂತೆ ಶೋಭಿಸುತ್ತಿದೆ.

### ಶಂಕರಾಚಾರ್ಯ ವಿರಚಿತ

## ಲಕ್ಷ್ಮೀನೃಸಿಂಹ ಪಂಚರತ್ನದಿಂದ

ಚೇತೋಭೃಙ್ಗ, ಭ್ರಮಸಿ ವೃಥಾ
ಭವ ಮರುಭೂಮೌ ವಿರಸಾಯಾಮ್।
ಭಜ ಭಜ ಲಕ್ಷ್ಮೀನರಸಿಂಹಾ
ನಘಪದಸರಸಿಜಮಕರನ್ದಮ್ ॥

ಆಕೃತಿಸಾಮ್ಯಾಚ್ಛಾಲ್ಮಲಿಕುಸುಮೇ
ಸ್ಥಲನಲಿನತ್ವಭ್ರಮಮಕರೋಃ।
ಗನ್ಧರಸಾವಿಹ ಕಿಮು ವಿದ್ಯೇತೇ
ವಿಫಲಂ ಭ್ರಾಮ್ಯಸಿ ವಿರಸಾಯಾಮ್ ॥

# ಮಧ್ವಾಚಾರ್ಯರು

ದ್ವೈತ ಸಿದ್ಧಾಂತದ ಪ್ರತಿಪಾದಕರಾಗಿ ಮಾಧ್ವಮತವನ್ನು ಸ್ಥಾಪಿಸಿದ, ಆಚಾರ್ಯ ತ್ರಯರಲ್ಲೊಬ್ಬರಾದ ಮಧ್ವಾಚಾರ್ಯರು ಹದಿಮೂರನೇ ಶತಮಾನದಲ್ಲಿ ಜನಿಸಿ ಹದಿನಾಲ್ಕನೆ ಶತಮಾನದವರೆಗೆ ಬಾಳಿಬದುಕಿದವರಾಗಿದ್ದಾರೆ. ಇವರ ಜನನದ ವರ್ಷವನ್ನು ಕ್ರಿ.ಶ. ೧೨೩೮ರ ವಿಲಂಬಿ ಸಂವತ್ಸರದ, ಆಶ್ವಯುಜ ಮಾಸದ ದಶಮಿ ಸೋಮವಾರವೆಂದು ದಾಖಲಿಸಲಾಗಿದೆ.

ದಕ್ಷಿಣ ಕನ್ನಡ ಜಿಲ್ಲೆಯ ಉಡುಪಿಯ ಸಮೀಪದಲ್ಲಿ ಪಾಜಕ ಎಂಬಲ್ಲಿ ಇವರು ಹುಟ್ಟಿದರು. ಇವರ ತಂದೆ ಮಧ್ಯಗೇಹಭಟ್ಟ ಮತ್ತು ತಾಯಿ ವೇದವತಿ. ತಂದೆ- ತಾಯಿ ಗಳು ಇವರಿಗೆ ನಾಮಕರಣ ಮಾಡಿದ್ದು ವಾಸುದೇವಭಟ್ಟ. ಹನ್ನೆರಡನೆಯ ವರ್ಷದಲ್ಲಿ ತಾವೇ ಅಪೇಕ್ಷಪಟ್ಟು ಧರಿಸಿದ ನಾಮಧೇಯ ಪೂರ್ಣಪ್ರಜ್ಞ. ಆ ವಯಸ್ಸಿಗೆ ಇವರು ಪೂರ್ಣ ವಿದ್ವತ್ತನ್ನು ಗಳಿಸಿದ್ದರು. ನಂತರ ಅವರ ಗುರುಗಳಾದ ಅಚ್ಯುತಪ್ರೇಕ್ಷರಿಂದ ಆನಂದತೀರ್ಥರೆಂದು ಕರೆಸಿಕೊಂಡರು.

ಆಚಾರ್ಯ ಮಧ್ವರು ಉಡುಪಿಯಲ್ಲಿ ಶ್ರೀಕೃಷ್ಣನನ್ನು ಪ್ರತಿಷ್ಠೆ ಮಾಡಿದ ಕೀರ್ತಿಗೆ ಪಾತ್ರರಾಗಿದ್ದಾರೆ. ಇವರಿಗೆ ಅದ್ವೈತ ಸಿದ್ಧಾಂತದ ಬಗ್ಗೆ ಅಪಾರವಾದ ಆಸಕ್ತಿ, ಗೌರವಗಳಿದ್ದವು. ಅಂದು ಪ್ರಚಾರದಲ್ಲಿದ್ದ ಈ ಸಿದ್ಧಾಂತದ ಬಗೆಗೆ ಸಂದೇಹಗಳನ್ನು ಹೊಂದಿದ್ದ ಇವರು ಅದನ್ನು ಪರಿಹರಿಸಿ, ಪರಿಷ್ಕರಿಸಿ ಉತ್ಕೃಷ್ಟವಾದ ಗ್ರಂಥಗಳನ್ನು ರಚಿಸಿದರು. ಇವರ ಈ ಕಾರ್ಯದಿಂದ ದ್ವೈತ ಸಿದ್ಧಾಂತಕ್ಕೆ ಸ್ಪಷ್ಟವಾದ, ಖಚಿತವಾದ ಸ್ವರೂಪ ದೊರೆಯಿತು. ಇದನ್ನು ಅವರ ಅಸಂಖ್ಯಾತರಾದ ಅನುಯಾಯಿಗಳು ಅನುಸರಿಸಿ ಆಚರಿಸಿಕೊಂಡು ಬಂದಿದ್ದಾರೆ. ಗುಣಪೂರ್ಣನಾದ ಭಗವಂತನನ್ನು ಬಿಂಬವೆಂದೂ, ಮನುಷ್ಯನ ಜೀವವು ಪ್ರತಿಬಿಂಬವೆಂದೂ ಭಾವಿಸಿ ಪ್ರತಿಬಿಂಬದ ಮೂಲಕ ಬಿಂಬವನ್ನು ಅರಿಯುವುದೇ ಮಧ್ವ ಸಿದ್ಧಾಂತದ ಗುರಿಯಾಗಿದೆಯೆಂಬ ಬೋಧನೆಯನ್ನು ಆಚಾರ್ಯರ ತತ್ವಗಳಿಂದ ತಿಳಿದುಕೊಳ್ಳ ಬೇಕಾಗಿರುತ್ತದೆ.

ಮಧ್ವಾಚಾರ್ಯರು ಇಡೀ ಭಾರತದಲ್ಲಿ ಪ್ರವಾಸ ಮಾಡಿದ್ದಾರೆ. ವಿದ್ವಾಂಸರೊಂದಿಗೆ ಚರ್ಚೆಗಳನ್ನು ನಡೆಸಿದ್ದಾರೆ. ಪ್ರಚಂಡವಾದ ಪ್ರತಿಭೆಯನ್ನು ಅಸಾಧಾರಣವಾದ ದೇಹಬಲವನ್ನು ಹೊಂದಿದ ಇವರಿಂದ ವೇದ-ವೇದಾಂತಗಳಿಗೆ ಸಾಕಷ್ಟು ಪ್ರಯೋಜನವಾಗಿದೆ. ಸಂಸ್ಕೃತ ಭಾಷಾ ಸಾಹಿತ್ಯವು ಸಮೃದ್ಧಗೊಂಡಿದೆ. ಆಳವಾದ ಪಾಂಡಿತ್ಯ ಗಹನವಾದ ವಿಚಾರಗಳಿಂದ ಕೂಡಿದ ಗಟ್ಟಿತನವನ್ನು ಹೊಂದಿದ ಸಾಕಷ್ಟು ಗ್ರಂಥಗಳು ರಚನೆಯಾಗಿವೆ. ತಾತ್ವಿಕ ವಿಚಾರಧಾರೆ ಇವರ ಕೃತಿಗಳ ಮೂಲಕವಾಗಿ ವಿದ್ವತ್‌ಪ್ರಪಂಚದಲ್ಲಿ ಧಾರೆಯಂತೆ ಹರಿದು ಬಂದಿದೆ. ಕ್ರಿ.ಶ. ೧೩೧೭ರಲ್ಲಿ ಎಂದರೆ ಮಾಘಶುದ್ಧ ನವಮಿಯ ದಿನದಂದು ಆಚಾರ್ಯ ಶ್ರೇಷ್ಠರು ತಮ್ಮ ಶಿಷ್ಯರಿಂದ, ಅನುಯಾಯಿಗಳಿಂದ ದೂರವಾದರೆಂದು ಹೇಳಲಾಗುತ್ತದೆ.

ಮಧ್ವಾಚಾರ್ಯರು ನರಸಿಂಹ ದೇವರನ್ನು ಅರಾಧಿಸುತ್ತಿದ್ದರು. ಸ್ವಾಮಿಯನ್ನು ಕುರಿತು ಇವರು ರಚಿಸಿದ 'ನಖಸ್ತುತಿ'ಯು ಉನ್ನತವಾದ ಪಾಂಡಿತ್ಯದಿಂದ ಕೂಡಿ ಉಜ್ವಲ ವಾಗಿದೆ. ವಾಯುಸ್ತುತಿಯನ್ನು ಪಠಿಸುವ ಸಂದರ್ಭದಲ್ಲಿ ಅದರ ಮೊದಲೆರಡು ಶ್ಲೋಕಗಳಾಗಿ ಇದನ್ನು ಪಾರಾಯಣ ಮಾಡುತ್ತಾರೆ. ಇದರ ರಚನೆಯ ಹಿನ್ನಲೆಯೂ ಸಹಾ ಸ್ವಾರಸ್ಯಕರ ವಾದದ್ದೆ ಆಗಿ ಗಮನ ಸೆಳೆಯುವಂತಿದೆ.

## ನಖಸ್ತುತಿ ರಚಾನೆಯ ಹಿನ್ನೆಲೆ

ಸಾರೂಪ್ಯಪೀಠ ಪುರದಲ್ಲಿ ಶ್ರೀಮದಾಚಾರ್ಯರು ಶ್ರೀಕೃಷ್ಣನಿಗೆ ನೈವೇದ್ಯಸಮರ್ಪಣ ಮಾಡುತ್ತಿದ್ದವರು ಎಷ್ಟು ಹೊತ್ತು ಕಳೆದರೂ ಮರಳಿ ಗಂಟಾನಾದ ಮಾಡದಿರಲು ಹೊರಗಡೆ ದ್ವಾದಶ ನಾಮಸ್ತೋತ್ರ ಸಂಕೀರ್ತನ ಮಾಡುತ್ತಿದ್ದ ತ್ರಿವಿಕ್ರಮ ಪಂಡಿತಾ ಚಾರ್ಯರು ಬಾಗಿಲಿನಲ್ಲಿ ಇಣುಕಿ ನೋಡುತ್ತಾರೆ. ಆಚಾರ್ಯರು ಹನುಮಂತನಾಗಿ ರಾಮದೇವರನ್ನು, ಭೀಮನಾಗಿ ಕೃಷ್ಣನನ್ನು, ಮಧ್ವಾಚಾರ್ಯರಾಗಿ ವೇದವ್ಯಾಸರನ್ನು ಪೂಜಿಸುತ್ತಿರುವುದನ್ನು ಕಾಣುತ್ತಾರೆ. ತಮ್ಮ ಗುರುಗಳು ಸಾಕ್ಷಾತ್ ಮುಖ್ಯಪ್ರಾಣದೇವರ ಅವತಾರವೆಂದು ತಿಳಿದು ಪಂಡಿತರು ಹನುಮದ್ ಭೀಮ ಮಧ್ವಾವತಾರಾತ್ಮಕವಾದ ವಾಯುಸ್ತುತಿಯನ್ನು ರಚಿಸಿ ಆಚಾರ್ಯರಿಗೆ ಅರ್ಪಿಸುತ್ತಾರೆ. ಇದರಿಂದ ಸಂತುಷ್ಟರಾದ ಮಧ್ವಾಚಾರ್ಯರು ತನ್ನ ಸ್ತೋತ್ರಮಾತ್ರವಿರುವುದನ್ನು ಸಹಿಸದೆ, ಶ್ರೀ ನರಸಿಂಹ ನಖಸ್ತುತಿ ಯನ್ನು ರಚಿಸಿ ಇದನ್ನು ವಾಯುಸ್ತುತಿಗೆ ಮಂಗಳಾಚರಣೆಯಾಗಿರುವಂತೆ ಆದ್ಯಂತಗಳಲ್ಲಿ ಸಂಪುಟಾಕಾರವಾಗಿ, ಸರ್ವಾಭೀಷ್ಟಗಳು ಲಭಿಸುವುದಾಗಿ ಅನುಗ್ರಹಿಸುತ್ತಾರೆ. ಇದು ಕಾರಣವಾಗಿ ಇಂದಿಗೂ ವಾಯುಸ್ತುತಿಯ ಮೊದಲು ಮತ್ತು ಕಡೆಗಳಲ್ಲಿ ನಖಸ್ತುತಿಯನ್ನು ಪಠಿಸುವ ಪರಿಪಾಠವಿದೆ.

*ಜಯತ್ಯಾನಂದತೀರ್ಥೇಷ್ಟದೇವತಾ ನರಕೇಸರೀ /*
*ವಿಪಾಟಿತಾಜ್ಞಾನ ತಮಃ ಕಪಾಟಾತ್ಯಾರುಹುಂಕೃತಿ //*

ಆನಂದತೀರ್ಥರೆಂದೂ ಕರೆಸಿಕೊಳ್ಳುತ್ತಿರುವ ಮಧ್ವಾಚಾರ್ಯರ ಇಷ್ಟದೇವತೆಯು ಶ್ರೀ ನೃಸಿಂಹನೇ ಆಗಿರುವ ವಿಚಾರವನ್ನು ಈ ಶ್ಲೋಕದಿಂದ ಅರಿತುಕೊಳ್ಳಬಹುದಾಗಿದೆ. ಇದನ್ನು ತತ್ವೋದ್ಯೋತ ಪ್ರಕರಣದ ಕೊನೆಯ ಭಾಗದಲ್ಲಿ ಹೇಳಲಾಗಿರುತ್ತದೆ.

## ನಖಸ್ತುತಿ

ನರಸಿಂಹನನ್ನು ಇಷ್ಟದೇವತೆಯಾಗಿ ಹೊಂದಿದ ಮಧ್ವಾಚಾರ್ಯರ ರಚನೆಯಾದ ನಖಸ್ತುತಿಯ ಪದ್ಯಗಳನ್ನು ವಿವರವಾಗಿ ಪರಿಶೀಲಿಸಬಹುದು.

ಮೊದಲ ಪದ್ಯದ ಪಾಠವನ್ನು ಪೂರ್ಣವಾಗಿ ಈ ಮುಂದಿನಂತೆ ನೋಡಬಹುದು-

*ಪಾಂತ್ವಸ್ಮಾನ್-ಪುರುಹೂತ ವೈರಿ-ಬಲವನ್ಮಾತಂಗ-ಮಾದ್ಯದ್ ಘಟಾ-*
*ಕುಂಭೋಚ್ಚಾದ್ರಿ-ವಿಪಾಟನಾಧಿಕಪಟು-ಪ್ರತ್ಯೇಕ ವಜ್ರಾಯಿತಾಃ ।*
*ಶ್ರೀಮತ್ಕಂಠೀರವಾಸ್ಯ-ಪ್ರತತ ಸುನಖರಾ ದಾರಿತಾರಾತಿ ದೂರ-*
*ಪ್ರಧ್ವಸ್ತ ಧ್ವಾಂತ ಶಾಂತ ಪ್ರವಿತತ ಮನಸಾ ಭಾವಿತಾ ನಾಕಿವೃಂದೈಃ॥*

- ಈ ಪದ್ಯದ ಅನ್ವಯವನ್ನು ಪುರುಹೂತವೈರಿ ಎಂದು ಆರಂಭಮಾಡಿ ಪಾಂತ್ವಸ್ಮಾನ್ ಎಂದು ಕಡೆ ಮಾಡಿಕೊಂಡಾಗ ಇದರ ಸ್ಪಷ್ಟವಾದ ಭಾವವು ನಮಗೆ ಮನದಟ್ಟಾಗದೇ ಇರಲಾರದು.

ಯಾವ ಆಯುಧಗಳೂ ನಾಟದ ಹಿರಣ್ಯಾಕ್ಷನನ್ನು ಬಗಿದ ಬಲಿಷ್ಠ ಉಗುರುಗಳು ನರಸಿಂಹ ದೇವನದು. ಭಗವಂತನ ನಖಶಿಖಾಂತವಾದ ಅವಯವಗಳು ಸ್ವರ್ಣಮಯವಾದದ್ದು. ಇದನ್ನು ಸಂಸ್ಕೃತದಲ್ಲಿ 'ಆಪ್ರಾಣಖಾತ್ ಸರ್ವಏವ ಸುವರ್ಣಃ' ಎಂದಿದ್ದಾರೆ.

ಕೊಬ್ಬಿದ ಆನೆಗಳ ಮೇಲೆ ಹಾರಿ ಕೈ ಉಗುರುಗಳಿಂದಲೇ ಅವುಗಳ ತಲೆಯನ್ನು ಬಗೆಯುವುದು ಸಿಂಹಗಳ ಸಾಹಸ. ದೇವೇಂದ್ರನ ಶತ್ರುಗಳಾದ (ಪುರುಹೂತ ವೈರಿ) ದೈತ್ಯರೇ ಇಂತಹ ಕೊಬ್ಬಿದ ಆನೆಗಳ ಹಿಂಡು (ಬಲವನ್ಮಾತಂಗ ಮಾದ್ಯದ್ ಘಟಾ) ಅವುಗಳ ಗಂಡಸ್ಥಳವೆಂಬ ಬೆಟ್ಟಕ್ಕೆ ನರಸಿಂಹನ ಒಂದೊಂದು ಉಗುರೂ ವಜ್ರಾಯುಧದಂತೆ. ದೇವೇಂದ್ರನ ವಜ್ರಾಯುಧವು ಬೆಟ್ಟಗಳ ರೆಕ್ಕೆಗಳನ್ನು ಕತ್ತರಿಸಿದರೆ ಈ ಉಗುರುಗಳು ಬೆಟ್ಟಗಳನ್ನೇ ತರಿದು ಪುಡಿಗುಟ್ಟುತ್ತವೆ. ಬಾಹ್ಯ ಮತ್ತು ಅಂತರಂಗದ ಶತ್ರುಗಳನ್ನು ಸದೆ ಬಡಿದು ಪ್ರಶಾಂತ ಮನಸ್ಸಿನಿಂದ ಇಂತಹ ಉಗುರುಗಳನ್ನು ಧ್ಯಾನಿಸುತ್ತಾರೆ. ದುಷ್ಟ ಹಿರಣ್ಯಾಕ್ಷನನ್ನು ತರಿದರೂ ಪ್ರಹ್ಲಾದನನ್ನು ರಕ್ಷಿಸಿದ ಇಂತಹ ಉಗುರುಗಳು ನಮ್ಮನ್ನು ಕಾಪಾಡಲಿ. (ಪಾಂತ್ವಸ್ಮಾನ್)

ಶತ್ರುಗಳ ಬಾಧೆಯಿಂದ ತಮ್ಮನ್ನು ರಕ್ಷಿಸಿಕೊಳ್ಳಲೂ ಈ ಶ್ಲೋಕವನ್ನು ಹೇಳಿ ಕೊಳ್ಳುವುದುಂಟು. ಮಧ್ವಾಚಾರ್ಯರು ರಚಿಸಿರುವ 'ನರಸಿಂಹ ನಖಸ್ತುತಿ'ಯ ಪರಿಣಾಮವನ್ನು ಅನೇಕ ಶಿಲ್ಪಗಳಲ್ಲಿ ಪಡಿಮೂಡಿಸಿರುವಂತೆ ಕಂಡುಬರುತ್ತದೆ. ದುರಿತ ರಕ್ಷಕ ರೀತಿಯಲ್ಲಿ ಸಹ ಈ ಸ್ತೋತ್ರದ ನಿರಂತರ ಪಠನವು ಮಾಧ್ವಮಠಗಳಲ್ಲಿ ನೂರಾರು ಕಂಠಗಳ ಮೂಲಕ ಇಂದಿಗೂ ಕೇಳಿಬರುತ್ತಿದೆ.

ನಖಸ್ತುತಿಯ ಮತ್ತೊಂದು ಪದ್ಯದ ಪಾಠವು ಹೀಗಿದೆ -

*ಲಕ್ಷ್ಮೀಕಾಂತ! ಸಮಂತತೋಽಪಿ ಕಲಯನ್ ನೈವೇಶಿತುಸ್ತೇ ಸಮಂ*
*ಪಶ್ಯಾಮ್ಯುತ್ತಮವಸ್ತು ದೂರತರತೋಽಪಾಸ್ತಂ ರಸೋ ಯೋಽಷ್ಟಮಃ ।*
*ಯದ್ರೋಷೋತ್ಕರ ದಕ್ಷನೇತ್ರ ಕುಟಿಲ ಪ್ರಾಂತೋತ್ಥಿತಾಗ್ನಿ ಸ್ಫುರತ್*
*ಖದ್ಯೋತೋಪಮ ವಿಸ್ಫುಲಿಂಗ ಭಸಿತಾ ಬ್ರಹ್ಮೇಶ ಶಕ್ರೋತ್ಕರಾಃ ॥*

ರಮಾರಮಣನೇ, ನೀನೇ ಸರ್ವೋತ್ತಮ. ಲಕ್ಷ್ಮೀದೇವಿಯ ಪತಿಯಾದ ನಿನಗೆ ಸದೃಶವಾದ ಉತ್ತಮವಾದ ಪದಾರ್ಥವನ್ನು ಕಾಣುವುದಿಲ್ಲ. ಎಂದರೆ ನಿನಗೆ ಸಮನಾದವರೇ ಇಲ್ಲ. ಯಾವ ರಸವು ಇಲ್ಲವೇ ಇಲ್ಲವೆಂದು ಆ ಎಂಟನೆಯದಾದ ರಸದಂತೆ ನಿನಗಿಂತ ಶ್ರೇಷ್ಠ ವಸ್ತುವು ಅತಿದೂರದಿಂದಲೇ ನಿರಾಕರಿಸಲ್ಪಟ್ಟಿದೆ. ಇದರ ಅರ್ಥವನ್ನು ಹೀಗೆ ವ್ಯಾಖ್ಯಾನ ಮಾಡುತ್ತಾರೆ. 'ಆರು ರಸಗಳು ಮಾತ್ರವೇ ಪ್ರಸಿದ್ಧವಾದವು. ಏಳನೇ ರಸವೇ ಇಲ್ಲ. ಎಂಟನೇ ರಸವಂತೂ ಸುತರಾಂ ಇಲ್ಲ. ಅದರಂತೆ ನೃಸಿಂಹನಿಗಿಂತ ಅಧಿಕ ವಸ್ತು ವಿಲ್ಲ. ಚತುರ್ಮುಖ ಬ್ರಹ್ಮರು, ರುದ್ರ, ಇಂದ್ರ ಇವರುಗಳ ಸಮೂಹವು ಪ್ರಳಯ ಕಾಲ ದಲ್ಲಿ ನಿನ್ನ ಕಡೆಗಣ್ಣು ಕುಡಿನೋಟಕ್ಕೆ ಹಿಡಿಭಸ್ಮವಾಗುವದು. ಆದುದರಿಂದ ನಿನಗೆ ಯಾರೂ ಸಮರೂ ಅಧಿಕರೂ ಇಲ್ಲ.'

## ಗಂಭೀರ ಶೈಲಿ

'ನಖಸ್ತುತಿ'ಯ ಈ ಎರಡು ಪದ್ಯಗಳ ಸ್ತೋತ್ರದಲ್ಲಿ ಗಂಭೀರವಾದ, ಹೃದಯಂಗಮ ವಾದ ಶೈಲಿಯನ್ನು ಕಾಣಬಹುದು. ಭಗವಂತನನ್ನು ಮತ್ತು ಅವನು ನರಸಿಂಹ ರೂಪ ದಿಂದ ಹಿರಣ್ಯಕಶಿಪುವಿನ ಹೃದಯವನ್ನು ಭೇದಿಸಲು ಬಳಸಿದ ಅವನ ನಖಗಳನ್ನು ಸ್ತುತಿ ಸಿರುವುದು ವೇದ್ಯವಾಗಿದೆ.

ಇದರ ಮೊದಲನೆಯ ಪದ್ಯದಲ್ಲಿ ಎರಡು ಛಂದಸ್ಸಿನ ಪ್ರಕಾರಗಳನ್ನು ಬಳಸಲಾಗಿದೆ. ಮೊದಲರ್ಧ ಭಾಗವು ಶಾರ್ದೂಲ ವಿಕ್ರೀಡಿತ ವೃತ್ತವಾಗಿದ್ದರೆ ದ್ವಿತೀಯಾರ್ಧವು ಸ್ರಗ್ಧರಾ ವೃತ್ತದಲ್ಲಿದೆ. ಇದೊಂದು ವಿಲಕ್ಷಣವಾದ ರಚನೆಯೆಂದು ಭಾಸವಾಗಬಹುದು. ಆದರೂ, ಹುಲಿಯಂತೆ (ಶಾರ್ದೂಲ) ನಟಿಸಿ ಹಿರಣ್ಯಾಕ್ಷನನ್ನು ಕೊಂದ ನರಸಿಂಹನು ಸ್ರಕ್ ಎಂದರೆ ಕರುಳುಮಾಲೆಯನ್ನು ಧರಿಸಿದನೆಂಬ ಅರ್ಥವಿಶೇಷವನ್ನು ನೀಡಲಾಗುತ್ತಿದೆ.

ನರಸಿಂಹಾವತಾರವು ಮಾನವ ಮತ್ತು ಸಿಂಹ ರೂಪಗಳ ವಿಚಿತ್ರವಾದ ಸಂಯೋಜನೆ ಯಾಗಿರುವ ಕಾರಣ ಶ್ರೀಮದಾನಂದ ತೀರ್ಥರು ಇದನ್ನು ವಿಚಿತ್ರಪ್ರಯೋಗದಿಂದ ವರ್ಣಿಸಿದ್ದಾರೆ ಎಂದು ಭಾವಿಸಬಹುದು.

ಆಚಾರ್ಯರ ಕಾಲಕ್ಕಾಗಲೇ ನರಸಿಂಹನ ರೂಪದ ವಿಚಾರದಲ್ಲಿ ಸಾಕಷ್ಟು ಜಿಜ್ಞಾಸೆ, ಚರ್ಚೆಗಳು ಉಂಟಾಗಿ ಆತನಿಗೊಂದು ಸ್ಪಷ್ಟವಾದ ಆಕಾರವು ಸಿದ್ಧವಾಗಿದ್ದಿತು. ನರಸಿಂಹನು ಕಂಭೋದ್ಭವನೆಂಬ ಸಿದ್ಧಾಂತವು ಸರ್ವಜನಮಾನ್ಯವಾಗಿದ್ದಿತು. ಇಂತಹ ಉಗ್ರ, ವೀರ, ಭೀಬತ್ಸ್ಯಗಳಿಂದ ಕೂಡಿದ ಭಗವಂತನು ತನ್ನ ನಿಗೂಢವಾದ ರಹಸ್ಯವನ್ನು ಪ್ರಕಟಪಡಿಸಿರುತ್ತಾನೆ. ಇದನ್ನೇ ಶಂಕರಾಚಾರ್ಯರು ಮತ್ತು ಮಧ್ವಾಚಾರ್ಯರು ತಮ್ಮ ಕೃತಿಗಳ ಮೂಲಕ ವಿವಿಧ ರೀತಿಯಲ್ಲಿ ವ್ಯಕ್ತಪಡಿಸುತ್ತ, ನರಸಿಂಹನಿಗೆ ಅಕ್ಷರಪೂಜೆಯನ್ನು ಸಲ್ಲಿಸಿದ್ದಾರೆ.

# ಋಣಮೋಚನ ನೃಸಿಂಹ ಸ್ತೋತ್ರಂ

ದೇವತಾಕಾರ್ಯ ಸಿದ್ಧ್ಯರ್ಥಂ ಸಭಾಸ್ತಂಭ ಸಮುದ್ಭವಂ।
ಶ್ರೀನೃಸಿಂಹಂ ಮಹಾವೀರಂ ನಮಾಮಿ ಋಣಮುಕ್ತಯೇ॥

ಲಕ್ಷ್ಮ್ಯಾಲಿಂಗಿತವಾಮಾಂಕಂ ಭಕ್ತಾನಾಂ ವರದಾಯಕಂ।
ಶ್ರೀನೃಸಿಂಹಂ ಮಹಾವೀರಂ ನಮಾಮಿ ಋಣಮುಕ್ತಯೇ॥

ಅಂತ್ರಮಾಲಾಧರಂ ಶಂಕ ಚಕ್ರಾಬ್ಜಾಯುಧಧಾರಿಣಂ।
ಶ್ರೀನೃಸಿಂಹಂ ಮಹಾವೀರಂ ನಮಾಮಿ ಋಣಮುಕ್ತಯೇ॥

ಸ್ಮರಣಾತ್ ಸರ್ವಪಾಪಾಘ್ನಂ ಕದ್ರೂಜ ವಿಷನಾಶನಂ।
ಶ್ರೀನೃಸಿಂಹಂ ಮಹಾವೀರಂ ನಮಾಮಿ ಋಣಮುಕ್ತಯೇ॥

ಸಿಂಹನಾದೇನ ಮಹತಾ ದಿಗ್ವಿದಿಗ್ಭಯ ನಾಶನಂ।
ಶ್ರೀನೃಸಿಂಹಂ ಮಹಾವೀರಂ ನಮಾಮಿ ಋಣಮುಕ್ತಯೇ॥

ಪ್ರಹ್ಲಾದವರದ ಶ್ರೀಶಂ ದೈತ್ಯೇಶ್ವರ ವಿದಾರಣಂ।
ಶ್ರೀನೃಸಿಂಹಂ ಮಹಾವೀರಂ ನಮಾಮಿ ಋಣಮುಕ್ತಯೇ॥

ಕ್ರೂರಗ್ರಹೈಃ ಪೀಡಿತಾನಾಂ ಭಕ್ತಾನಾಮಭಯಪ್ರದಂ।
ಶ್ರೀನೃಸಿಂಹಂ ಮಹಾವೀರಂ ನಮಾಮಿ ಋಣಮುಕ್ತಯೇ॥

ವೇದವೇದಾಂತಯಜ್ಞೇಶಂ ಬ್ರಹ್ಮರುದ್ರಾದಿವಂದಿತಂ।
ಶ್ರೀನೃಸಿಂಹಂ ಮಹಾವೀರಂ ನಮಾಮಿ ಋಣಮುಕ್ತಯೇ॥

ಇತ್ಥಂ ಯಃ ಪಠತೇ ನಿತ್ಯಂ ಋಣಮೋಚನ ಸಿದ್ಧಯೇ।
ಅನೃಣೋ ಜಾಯತೇ ಶೀಘ್ರಂ ಧನಂ ವಿಪುಲಮಾಪ್ನುಯಾತ್॥

ಸರ್ವಸಿದ್ಧಿಪ್ರದಂ ನೃಣಾಂ ಸರ್ವೈಶ್ವರ್ಯ ಪ್ರದಾಯಕಂ।
ತಸ್ಮಾತ್ಸರ್ವ ಪ್ರಯತ್ನೇನ ಪಠೇತ್ ಸ್ತೋತ್ರಮಿದಂ ಸದಾ॥

**ಇತಿ ಶ್ರೀನೃಸಿಂಹ ಪುರಾಣೋಕ್ತಂ ಋಣಮೋಚನ ನೃಸಿಂಹಸ್ತೋತ್ರಂ**



# ಅಧ್ಯಾಯ - 14

# ಸ್ತೋತ್ರ ಸಾಹಿತ್ಯ

ಭಾರತೀಯ ಸ್ತೋತ್ರ ಪರಂಪರೆಗೆ ಆಳವಾದ ಹಾಗೂ ವಿಸ್ತಾರವಾದ ನೆಲೆಯಿರುವುದು ಕಂಡುಬರುತ್ತದೆ. ದೇವರನ್ನು ಕುರಿತು ಹಾಡಿದ ಸೂಕ್ತಗಳಲ್ಲಿ ಮಾನವನ ಮೊದಲ ಸಾಹಿತ್ಯವಿದ್ದು, ತನ್ನ ಮನಸ್ಸಿನ ಭಾವನೆಗಳನ್ನು ಪದ್ಯಬಂಧದಲ್ಲಿ ಯೋಗ್ಯವಾದ ರೀತಿಯಲ್ಲಿ ಅವನು ಇಲ್ಲಿ ಹಿಡಿದಿಟ್ಟಿದ್ದಾನೆ. ಪ್ರಾರ್ಥನೆ ಹಾಗೂ ಸ್ತೋತ್ರಗಳನ್ನು 'ಆತ್ಮದ ತಾತ್ಪರ್ಯ ವಿವರಣೆ' 'ಹೃದಯದ ತೀರ್ಥಯಾತ್ರೆ'ಗಳೆಂಬ ವಿಶೇಷಣಗಳಿಂದ ಕರೆಯಬಹುದಾಗಿದೆ.

ಸ್ತೋತ್ರಗಳ ಪಠಣ, ಶ್ಲೋಕಗಳ ಪಾರಾಯಣಗಳಂತಹ ಧಾರ್ಮಿಕ ಭವ್ಯತೆಯ ವಾತಾವರಣವು ನಮ್ಮ ಪೂಜಾಕಲ್ಪಗಳ ಅಂಗವಾಗಿ ಉಳಿದುಕೊಂಡು ಬಂದಿವೆ. ಇಷ್ಟ ದೇವತೆಯ ಆಕಾರದ ಧ್ಯಾನವನ್ನು ನಮ್ಮ ಪ್ರಾಚೀನ ಚಿಂತಕರು, ಪೂಜಕರು ಭದ್ರವಾದ ಬುನಾದಿಯ ಮೇಲೆ ರೂಪಿಸಿಕೊಟ್ಟಿರುತ್ತಾರೆ. ಇಂದು ಪ್ರಚಲಿತವಿರುವ ಹೇರಳ ಸ್ತೋತ್ರ ವಾಹಿನಿಯನ್ನು ಇದಕ್ಕೆ ನಿದರ್ಶನವಾಗಿ ನೀಡಬಹುದು.

ದೇವತಾಮೂರ್ತಿಗಳ ಆಕಾರ-ರೂಪಗಳು ಸ್ಪಷ್ಟಗೊಳ್ಳುತ್ತ ಹೋದಂತೆ ಇವಕ್ಕೊಂದು ಆರಾಧನಾ ಪದ್ಧತಿಯೂ ಬೆಳೆದುಕೊಂಡು ಬಂದಿತು. ಇದನ್ನು ಶಾಕ್ತ, ಶೈವ, ವೈಷ್ಣವವೆಂಬ ಮಜಲುಗಳಲ್ಲಿ ನಾವಿಂದು ನೋಡುತ್ತಿದ್ದೇವೆ. ಇದರಲ್ಲಿ ಮತ್ತೆ ಒಳಪಂಥಗಳು ರೂಪತಾಳಿ ಪೂಜಾಪದ್ಧತಿಗೊಂದು ವಿಶೇಷ ಮಹತ್ವ ದೊರೆಯಿತು. ಅಸಂಖ್ಯ ದೇವಿಯರನ್ನೂ ಶಿವನ ವಿವಿಧ ಪ್ರಭೇದಗಳನ್ನೂ ವಿಷ್ಣುವಿನ ಲೀಲೆಗಳನ್ನೂ ಸ್ತುತಿಸುವ ವಿಧಾನವು ಮೂಡಿಬಂದಿತು. ಮೊದಮೊದಲು ಸಾಮಾನ್ಯ ಜನಸ್ತೋತ್ರದ ಸಂಪರ್ಕವನ್ನು ಹೊಂದಿದ್ದೆಂದು ಭಾವಿಸಲಾದ ಸ್ತೋತ್ರಪರಂಪರೆಯು ಕ್ರಮೇಣ ಪಂಡಿತಮಾನ್ಯವಾಯಿತು. ಸ್ತುತಿಸುವವರ ಅಭಿರುಚಿ ಆಕಾಂಕ್ಷೆಗಳಿಗೆ ತಕ್ಕಂತೆ ಇವುಗಳಲ್ಲಿಯೂ ಮಾರ್ಪಾಡುಗಳಾದವು. ಈ ಸಾಹಿತ್ಯದಲ್ಲಿ ಸುಲಿದ ಬಾಳೆಯ ಹಣ್ಣಿನಂತಹ ರಚನೆಗಳಿರುವುದಲ್ಲದೆ, ಕಬ್ಬಿಣದ ಕಡಲೆಯಷ್ಟೆ ಕಠಿಣವಾದ ಕೃತಿಗಳಿರುವುದನ್ನು ಗಮನಿಸಬಹುದು.

ಪುರಾಣ, ಕಾವ್ಯಗಳಲ್ಲಿ ವಿಶಿಷ್ಟ ಸ್ಥಾನವನ್ನು ಪಡೆದುಕೊಂಡ ಈ ಆರಾಧನಾ ಮಾಲಿಕೆಯು ಧರ್ಮ-ಸಂಸ್ಕೃತಿಗಳ ಪ್ರಚಾರ ಸಾಧನವಾಗಿದೆ. ಇವು ಭಾಷೆಯ ದೃಷ್ಟಿಯಿಂದಲೂ

ಆಯಾ ಕಾಲಕ್ಕೆ ಅನುಗುಣವಾಗಿ ಪರಿಷ್ಕಾರಗೊಂಡಿವೆ. ಈ ಸ್ತೋತ್ರಗಳು ಕಾಲ-ಮತ ಎಲ್ಲೆಕಟ್ಟನ್ನು ಮೀರಿ ಬೆಳೆದುಕೊಂಡು ಬಂದಿವೆ. ಇತಿಹಾಸದ ಪರಿಧಿಯ ಹೊರಗೆ ನಿ ತಮ್ಮ ಸ್ವತಂತ್ರವಾದ ಅಸ್ತಿತ್ವವನ್ನು ಸಾರುತ್ತಲಿವೆ. ಪಂಡಿತರಿಗೆ ಮಾತ್ರವಲ್ಲದೆ ಪಾಮ ಆದರಕ್ಕೆ ಅವರ ಮನೋಧರ್ಮಕ್ಕೆ ಹತ್ತಿರವಾಗಿ ಉಳಿದಿವೆ. ಅರ್ಥದ ದೃಷ್ಟಿಯಿ ಅನೇಕ ಸ್ತೋತ್ರಗಳು ಅತಿ ಜಟಿಲವಾಗಿಯೂ ಇರುವುದೆಂಬ ಮಾತು ಅನುಚಿತವ ಇದೇನೇ ಇದ್ದರೂ ಸ್ತೋತ್ರಗಳ ಮೌಲಿಕ ವಿಷಯದಲ್ಲಿ ಎರಡು ಮಾತಿಗೆ ಅವಕಾಶವಿ

## ಕಾಮಾಸಿಕಾಷ್ಟಕ

ವಿದ್ಯಾರಣ್ಯರ ಸಮಕಾಲೀನರಾಗಿದ್ದ ವೇದಾಂತ ದೇಶಿಕರು ಪ್ರಕಾಂಡ ಪಂಡಿತರಾ ಪ್ರತಿಭಾನ್ವಿತ ಕವಿಯೂ ಆಗಿದ್ದರು. ಇವರ ಜೀವನ ಕಾಲವು ಹದಿಮೂರು-ಹದಿನಾ ಶತಮಾನಗಳಿಗೆ ಸರಿಹೊಂದುತ್ತದೆ. ಕ್ರಿ.ಶ. ೧೨೬೧ ಸೆಪ್ಟೆಂಬರ್ ಅಕ್ಟೋಬರ್ ತಿಂಗ ಶ್ರವಣ ನಕ್ಷತ್ರದಲ್ಲಿ ಇವರ ಜನನವಾಯಿತೆಂದು ನಂಬಲಾಗಿದೆ. ಗೃಹಸ್ಥರಾಗಿದ್ದುಕೊಂ ವೈರಾಗ್ಯ ಜೀವನವನ್ನು ನಡೆಸುವವರು ವಿರಳ. ಇಂಥವರ ಸಾಲಿಗೆ ದೇಶಿಕರನ್ನು ಸೇರಿಸಬಹು ಇವರು ತಿರುಮಲೆಯ ಶ್ರೀ ವೆಂಕಟೇಶ್ವರಸ್ವಾಮಿಯ ಆಲಯದ ಘಂಟೆಯ ಅವತ ಅನಂತಸೂರಿ ತೋತಾರಮ್ಮನವರ ಮಗ. ಇವರು ಸ್ತೋತ್ರಗಳನ್ನು ರಚಿಸುವುದರ ಸಿದ್ಧಹಸ್ತರಾಗಿದ್ದರು. ಸಂಸ್ಕೃತ ತಮಿಳುಗಳೆರಡರಲ್ಲಿಯೂ ಹಲವು ಹತ್ತು ಗ್ರಂಥಗಳ ಬರೆದಿದ್ದಾರೆ. ಸರಿಸುಮಾರು ಎಂಬತ್ತೈದರವರೆಗೆ ಹೆಸರಿಸಬಹುದು.

ವಿಜಯನಗರದ ಅರಸರಿಗೆ ಪ್ರತಿಭಾನ್ವಿತ ವ್ಯಕ್ತಿಗಳ ಬಗ್ಗೆ ಅಪಾರ ಗೌರವವಿ ಅವರು ತಮ್ಮ ಆಸ್ಥಾನದಲ್ಲಿ ಇಂತಹವರಿಗೆ ಮನ್ನಣೆ ನೀಡಿದ್ದರು. ವೇದಾಂತ ದೇಶೀಕರ ತಮ್ಮ ಆಸ್ಥಾನದಲ್ಲಿರಿಸಿಕೊಳ್ಳಬೇಕೆಂಬ ಹಂಬಲವು ವಿಜಯನಗರದ ಅರಸರ ಗುರುಗಳ ವಿದ್ಯಾರಣ್ಯರಲ್ಲಿ ಅಡಕವಾಗಿತ್ತು. ಆದರೆ ದೇಶಿಕರು ಇದನ್ನು ನಯವಾಗಿಯೇ ತಿರಸ್ಕರಿಸಿದ ಯಾರ ಒತ್ತಡದಲ್ಲಿ ಇರುವುದೂ ಇವರಿಗೆ ಸಹನೀಯವಾಗುತ್ತಿರಲಿಲ್ಲ. ಮಾನವೀ ಗುಣಗಳನ್ನೇ ತಮ್ಮ ಸಂಪತ್ತನ್ನಾಗಿ ಬೆಳೆಸಿಕೊಂಡಿದ್ದ ದೇಶಿಕರು ಅನೇಕ ದಿವ್ಯದೇಶಗಳ ಸಂಚರಿಸಿ ಅಲ್ಲಿನ ಅರ್ಚಾಮೂರ್ತಿಗಳನ್ನು ತಮ್ಮ ಸ್ತೋತ್ರಗಳ ಮೂಲಕ ತಮ್ಮ ಭ ಭಾವವನ್ನು ಕೊಂಡಾಡಿದ್ದಾರೆ.

'ಕಾಮಾಸಿಕಾಷ್ಟಕ'ವು ವೇದಾಂತ ದೇಶಿಕರ ಸ್ತೋತ್ರಸಾಹಿತ್ಯಕ್ಕೆ ಸೇರಿದೆ. ಇವ ರಚಿಸಿದ ಸುಮಾರು ಮೂವತ್ತು ಸ್ತೋತ್ರಗಳಲ್ಲಿ ಇದೂ ಒಂದಾಗಿದೆ. ಆದರೆ ಇ ಸ್ಥಾನ ಮಾತ್ರ ಹಿರಿದಾದದ್ದಾಗಿದೆ. ದೇಶಿಕರು ಈ ಸ್ತೋತ್ರದಲ್ಲಿ ತಾವು ವಾಸಮಾಡುತ್ತಿ ಕಾಂಚೀಪುರದ ಸಮೀಪದಲ್ಲಿರುವ ತೊಪ್ಪಿಲ್ ಅಗ್ರಹಾರದ ಯೋಗಾನರಸಿಂಹನ ಸ್ತುತಿಸಿದ್ದಾರೆ. ಎಂಟು ಪದ್ಯಗಳ ರಚನೆಯಾದ ಇದರಲ್ಲಿ ಭಕ್ತಿಭಾವವು ತುಂಬಿದೆ.

ವೇಗವತಿಯೆಂಬ ನದಿಯು ಕಂಚಿಯಲ್ಲಿನ ಗುಪ್ತಗಾಮಿನೀ ನದಿಗಳಲ್ಲೊಂದಾಗಿದ್ದು. ಇದರ ತಟದಲ್ಲಿ ಯೋಗಾನರಸಿಂಹ ದೇವಾಲಯವಿದೆ. ಪವಿತ್ರವಾದ ಪುಣ್ಯಮಯವಾದ ಸ್ಥಳದಲ್ಲಿ ಭಗವಂತನು ಪಶ್ಚಿಮಾಭಿಮುಖವಾಗಿ ನೆಲಸಿದ್ದಾನೆ. ಈತನ ಇರುವಿಕೆಯು ತನ್ನೆಡೆಗೆ ಬರುವ ಭಕ್ತರಿಗೂ ಸಹ ಯೋಗವನ್ನು ಬೋಧಿಸುತ್ತಿರುವಂತೆಯೇ ಭಾಸವಾಗುತ್ತದೆ.

ದೇಶಿಕರು ನರಸಿಂಹನ ಪರಮಭಕ್ತರಾಗಿದ್ದರು. ಅವನ ರಕ್ಷಣೆಯಿರುವಾಗ ತಮಗೆ ಬೇರೆಯವರಿಂದ ಏನೂ ಆಗಬೇಕಾಗಿಲ್ಲವೆಂಬ ದೃಢವಾದ ಅಚಲವಾದ ಮನೋಭಾವವು ಅವರಲ್ಲಿತ್ತು. ಇದನ್ನು ಇವರು ತಮ್ಮ ಸ್ತೋತ್ರದಲ್ಲಿಯೂ ಅಭಿವ್ಯಕ್ತಪಡಿಸಿದ್ದಾರೆ. 'ಕಾಮಸಿಕಾ ನರಹರಿ' ಎಂಬ ಹೆಸರು ಬಂದದ್ದು ಇವರಿಂದಲೇ ಎಂದು ಹೇಳಬಹುದು. ಯಾರು ತನ್ನ ಸ್ವಂತ ಇಚ್ಛೆಯಿಂದ ನೆಲಸಿರುವನೋ ಅಂತಹ ನರಸಿಂಹರೂಪನಾದ ಭಗವಂತನನ್ನು ದೇಶಿಕರು ಬಾಲ್ಯದಿಂದಲೂ ಅರ್ಚಿಸಿಕೊಂಡು ಬಂದಿದ್ದರು. ಇವರಿಗೆ ಚಿಕ್ಕಂದಿನಿಂದಲೂ ಕವಿತೆಯ ಮೇಲೆ ಅಪಾರವಾದ ಆಸಕ್ತಿಯಿತ್ತು. ಭಗವಂತನ ಕೃಪಾ ಕಟಾಕ್ಷವೂ ದೊರೆತು ಕವಿತೆಯ ರಚನೆಯೆಂಬ ಬಳ್ಳಿಗೆ ಆಶ್ರಯವು ಲಭಿಸಿತು. ಅದು ಹರಡಿ ಭಕ್ತಿಸಾಹಿತ್ಯದ ಮೂಲಕವಾಗಿ ಪ್ರವಹಿಸಿದೆಯೆಂದು ಹೇಳಬಹುದು.

ವೇದಾಂತ ದೇಶಿಕರ ಒಂದೊಂದು ಸಣ್ಣಕೃತಿಯೂ ಭಕ್ತಿ-ಪ್ರಪತ್ತಿಗಳಿಂದ ತುಂಬಿ ಮಹತ್ತರವಾಗಿದೆ. ಪ್ರಾಚೀನವಾದ ಶ್ಲೋಕಪರಂಪರೆಯನ್ನು ಅರ್ಥೈಸಿಕೊಂಡು ಅದನ್ನು ತಮ್ಮದನ್ನಾಗಿ ಮಾಡಿಕೊಳ್ಳುವಲ್ಲಿ ಇವರು ಪಟ್ಟ ಶ್ರಮ ಮತ್ತು ಸಾಧನೆಗಳು ಸ್ತೋತ್ರಸಾಹಿತ್ಯದ ಮೂಲಕ ಸಾರ್ಥಕವಾಗಿದೆ. ಇವರು ಬೆಳೆದ ಎತ್ತರ-ಬಿತ್ತರಗಳಿಗೆ ಇವು ಸಾಕ್ಷಿಯಾಗಿವೆ. ಸಂಸ್ಕೃತದಲ್ಲಿರುವ ಪ್ರಗಲ್ಭ ವಿಚಾರಗಳನ್ನು ಅದೇ ಭಾಷೆಯ ಸುಂದರವಾದ, ಸರಳವಾದ ಪದ್ಯಗಳ ಮೂಲಕ ಹೇಳುವಲ್ಲಿ ಇವರು ಯಶಸ್ವಿಯಾಗಿದ್ದಾರೆ. ಇದರ ಸಾರವನ್ನು ಈ ಸಂದರ್ಭದಲ್ಲಿ ಗ್ರಹಿಸುವುದು ಅಗತ್ಯವಾಗಿದೆ.

'ಕಾಮಾಸಿಕ' ಎಂಬುದು ಸಂಸ್ಕೃತದ ರೂಪ. ಇದನ್ನು ತಿರುಮಂಗೈ ಆಳ್ವಾರರು 'ವೇಳುಕ್ಕೈ' ಎಂಬ ತಮಿಳಿನ ರೂಪಕ್ಕೆ ಸಮನಾಗಿ ಬಳಸಿರುವುದು ಭಾವಿಸಬೇಕಾಗುತ್ತದೆ. ಇದಕ್ಕೆ ನೀಡಲಾದ ಅರ್ಥವು 'ದಿವ್ಯದೇಶ' ಇಲ್ಲವೆ 'ಜಾಗೃತಸ್ಥಳ'ವೆಂದಾಗುತ್ತದೆ. ದೇಶಿಕರು 'ಕಾಮಾದಧಿವಸನ್ ಜೀಯಾತ್ ಕಶ್ಚಿದದ್ಭುತಕೇಸರಿ' -ಎಂಬುದಾಗಿ ಅಲ್ಲಿ ಬಿಜಯಂಗೈದಿರುವ ಭಗವಂತನನ್ನು ತಮ್ಮ ಆರಂಭದ ಸ್ತೋತ್ರದಲ್ಲಿ ವರ್ಣಿಸಿದ್ದಾರೆ.

'ಶ್ರುತೀನಾಂ ಉತ್ತರ ಭಾಗಂ'-ಎಂದರೆ, ವೇದಗಳ ಉತ್ತರಭಾಗವಾದ ಉಪನಿಷತ್ತಿನ ರೂಪದಲ್ಲಿ ಪ್ರಕಾಶಮಾನವಾಗಿರುವವನೂ, ವೇಗತ್ಯಾಶ್ಚ ದಕ್ಷಿಣಂ-ಎಂದರೆ, ವೇಗವತಿಯ ದಕ್ಷಿಣ ಭಾಗದಲ್ಲಿ ನೆಲಸಿರುವವನೂ ಆದ ನರಸಿಂಹನಿಗೆ ಜಯವಾಗಲೆಂದು ಹೇಳುತ್ತಾರೆ. ಲೌಕಿಕ ಮತ್ತು ಪಾರಮಾರ್ಥಿಕಗಳೆರಡರ ವಿಚಾರಗಳನ್ನು ಇದು ಶ್ರುತಪಡಿಸುವಂತಿರುತ್ತದೆ. ತೀರ್ಥಕ್ಷೇತ್ರದ ವಿವರಣೆಯ ಒಂದಂಶವನ್ನು ತಿಳಿಸಿಕೊಡುವ ವಿಚಾರಕ್ಕೆ ಪುಷ್ಟಿನೀಡಿದಂತಿದೆ.

ನರಸಿಂಹನ ಲಕ್ಷಣವನ್ನು 'ತಾಪನೀಯ ಉಪನಿಷತ್'ನಲ್ಲಿ ತಿಳಿಸಿರುವ ಹಾಗೆ ಮುಕ್ಕಣ್ಣನೂ ಆದ ಈತನ ಗುಣಮಹಿಮೆಯನ್ನು ಅಷ್ಟಕದ ಎರಡನೆಯ ಪದ್ಯದಲ್ಲಿ ಹೇಳುತ್ತಾರೆ. ಸೂರ್ಯ-ಚಂದ್ರ-ಅಗ್ನಿಗಳನ್ನು ಹೊಂದಿ ತ್ರಿನೇತ್ರನಾಗಿರುವ ಕಾಮಾಸಿಕಾ ಹರಿಯು ನಮ್ಮ ತಾಪಗಳನ್ನು ನಿವಾರಿಸಲೆಂದು ಹೇಳುವಲ್ಲಿ ಆತನೇ ಇದಕ್ಕೆ ಸಮರ್ಥ ನಾದವನೆಂಬ ಭಾವನೆಯು ಅಡಕವಾದಂತಿದೆ. 'ತಪನೇಂದು ಅಗ್ನಿನಯನಃ ತಾಪಾನ್ ಅಪಚಿನೋತು ನಃ' -ಎಂಬ ಮೂಲದ ಭಾಗವು ಅರ್ಥಪುಷ್ಟಿಯಿಂದ ಕೂಡಿರುವ ಪದ ಸಮುಚ್ಚಯವಾಗಿದೆ. ದೇಶಿಕರಿಗೆ ಸಂಸ್ಕೃತ ಭಾಷೆಯ ಬಗೆಗಿದ್ದ ಪಾಂಡಿತ್ಯವನ್ನೂ ಇದರಿಂದ ಅರಿತುಕೊಳ್ಳಬಹುದು.

ಅದ್ಭುತಕೇಸರಿಯೆಂದು ಯಾವ ಸಿಂಹಸ್ವರೂಪವನ್ನು ಪರಮಾತ್ಮನಲ್ಲಿ ಭಾವಿಸಿದರೋ ಅಂತಹವನ ಮತ್ತೊಂದು ನರರೂಪವೂ ಅವರಿಗೆ ಕಾಣಿಸುತ್ತದೆ. ಇದನ್ನು 'ಅಕಂಠಂ ಆದಿಪುರುಷಂ ಕಂಠೀರವಂ ಉಪರಿ' ಎಂಬ ಮಾತುಗಳಿಂದ ಮನೋಜ್ಞವಾಗಿ ವರ್ಣಿಸುತ್ತಾರೆ. ಈ ಮೂರನೆಯ ಪದ್ಯದಲ್ಲಿ ವೇಗವತೀ ನದಿಯ ಪವಿತ್ರ ಸ್ನಾನದಿಂದ ಪಾಪವಿಮುಕ್ತರಾಗಿ ವೈಕುಂಠವನ್ನು ಪಡೆಯುವ ಪುಣ್ಯಪ್ರದವಾದಿ ಕಾರ್ಯದ ಮಾರ್ಗವಿರುವಂತಿದೆ. ಉಪಾಸಕರಿಗೆ ಧ್ಯಾನ-ಮನನಗಳಿಗಾಗಿ ದಾರಿಯೊಂದನ್ನು ತೋರಿಸುವಂತೆ ಭಾಸವಾಗುತ್ತದೆ. ಆದಿಪುರುಷನಾದ ಸ್ವಾಮಿಯು ಕಂಠದವರೆಗೆ ಮಾತ್ರ ನರನಂತೆ ಗೋಚರಿಸುತ್ತ ಅನಂತರ ಸಿಂಹದ ರೂಪದಲ್ಲಿ ಕಂಡುಬರುವಂತಿದ್ದಾನೆ. ಪರತತ್ತ್ವದ ಕಾರಣದಿಂದ ತನ್ನ ನೆಲೆಯಾದ ವೈಕುಂಠವನ್ನೇ ತೊರೆದು ಇಲ್ಲಿಗೆ ಬಂದಿದ್ದಾನೆ. ಭಕ್ತರ ಬಗೆಗೆ ಭಗವಂತನಿಗಿರುವ ವಾತ್ಸಲ್ಯವು ಇಲ್ಲಿ ಕಾಣುತ್ತದೆ.

ಕಾಮಾಸಿಕಾಷ್ಟಕದ ನಾಲ್ಕನೆಯ ಪದ್ಯದಲ್ಲಿ 'ಬಂಧುಂ ಅಖಿಲಸ್ಯ ಜನ್ತೋಃ'- ಎಂಬ ಆರಂಭವಿದೆ. ಇಲ್ಲಿ ಭಗವಂತನ ಬಾಂಧವ ಗುಣವನ್ನು ದರ್ಶಿಸಬಹುದು. ಆತನು 'ವಸುಧೈವ ಕುಟುಂಬಕ'ನೂ ಆಗಿರುವನಲ್ಲವೆ? ಇಂತಹವನು ಸಮಸ್ತ ಚರಾಚರ ವಸ್ತುಗಳಿಗೂ ಬಂಧುವಾಗಿದ್ದಾನೆ. ವೇಗವತೀ ನದೀತೀರದಲ್ಲಿ ಕ್ರೀಡಿಸುತ್ತಿದ್ದಾನೆ. ಪರ್ಯಾಂಕ ಬಂಧದಲ್ಲಿ ಎಂದರೆ ಯೋಗಪಟ್ಟದಲ್ಲಿ ಕುಳಿತು ದರ್ಶನವೀಯುತ್ತಿದ್ದಾನೆ. ಈತನು ಬೆಸಸಂಖ್ಯೆಯ ಕಣ್ಣುಗಳನ್ನು ಹೊಂದಿರುತ್ತಾನೆ. ಪರಮಾತ್ಮನು ನಮ್ಮ ಉಪದ್ರವಗಳನ್ನು ಹೇಗೆ ಕಳೆಯಬಲ್ಲನೋ ಅದೇ ರೀತಿಯಲ್ಲಿ ನಮಗೆ ಯಾವ ತೊಂದರೆಯೂ ನೀಡದಂತಹ ಬಂಧುವೂ ಆಗಬಲ್ಲನೆಂಬುದಕ್ಕೆ ಅಷ್ಟಕದ ಈ ಪದ್ಯದಲ್ಲಿ ನಿದರ್ಶನವಿರುತ್ತದೆ.

'ಯೋಗಂ ನಿಜಂ ಶಕ್ತಯನ್'- ಎಂಬ ಮಾತಿಗೆ ಅನುಗುಣವಾಗಿ ತಾನೇ ಯೋಗಪಟುವೂ ಆಗಿ ಇತರರಿಗೆ ಅದರ ಶಿಕ್ಷಣವನ್ನು ನೀಡುತ್ತಿರುವನೇನೋ ಎಂಬಂತಿರುವ ನರಸಿಂಹರೂಪಿಯಾದ ಹರಿಯು ಸಮಸ್ತ ಜಗತ್ತಿಗೆ ಇಷ್ಟಕಾಮನೆಗಳನ್ನು ಕರುಣಿಸಲೆಂದು ಕವಿ ದೇಶಿಕರು ಪ್ರಾರ್ಥಿಸುತ್ತಾರೆ. ಭಗವಂತನಿಗೆ ಯೋಗಾಭ್ಯಾಸದಿಂದ ಯಾವ ಪ್ರಯೋಜನವೂ ಇಲ್ಲ. ಆದರೆ ತನ್ನನ್ನು ದರ್ಶಿಸಿದವರಿಗೆ ಅಥವಾ ತನ್ನನ್ನು ಆಶ್ರಯಿಸಿದವರಿಗೆ ತನ್ನನ್ನು

ಹೇಗೆ ಧ್ಯಾನಿಸಬೇಕೆಂದು ಈ ಗೂಪನಾಗಿ ತಿಳಿಸುವಂತಿದೆ. ಆತನ ಭಂಗಿಯಲ್ಲಿ, ಅಂತ ರ್ಮುಖಿಯಾದವನಿಗೆ ಇರಬೇಕಾದ ಲಕ್ಷಣವನ್ನು ಬೋಧಿಸುವಂತಿದೆ. 'ಪರ್ಯಂಕ ಸ್ಥಿರ ಧಾರಣಾ ಪ್ರಕಟಿತ ಪ್ರತ್ಯಙ್ಮುಖಾವಸ್ಥಿತಿಃ' -ಎಂಬ ಮೂಲದ ಪಾಠವನ್ನು ಓದಿಕೊಂಡಾಗ ಇದರ ಅರ್ಥ ಮತ್ತಷ್ಟು ಸ್ಫುಟವಾಗಬಹುದು. ಐದನೆಯ ಪದ್ಯವೂ ಸೇರಿದಂತೆ ಉಳಿದ ಪದ್ಯಗಳಲ್ಲಿ ನಾಲ್ಕು ಸಾಲುಗಳಿವೆ.

ನರಸಿಂಹನ ಬಾಹುಗಳು ಎರಡರಿಂದ ಹದಿನಾರರವರೆಗೆ ಹರಡಿರುವುದನ್ನು ಪ್ರತಿಮಾ ಲಕ್ಷಣದಲ್ಲಿ ವಿವರಿಸಲಾಗಿದೆ. ಯೋಗಮುದ್ರೆಯಲ್ಲಿರುವ ಆತನಿಗೆ ನಾಲ್ಕು ಬಾಹುಗಳಿರುತ್ತವೆ. ಮುಂದಿನ ಪದ್ಯದಲ್ಲಿ ಈ ಬಾಹುಗಳ ವಿವರಣೆಯಿರುವುದು ಕಂಡುಬಂದಿದೆ. ಸಂಹಾರಕ್ರಿಯೆಯ ನಂತರ ಆತನ ಬಾಹುಗಳು ಹೇಗೆ ಕಂಡವೆಂಬ ವರ್ಣನೆಯನ್ನು ಇಲ್ಲಿ ಕಾಣಬಹುದು. ಹಿರಣ್ಯಕಶಿಪುವಿನ ಹೃದಯದಿಂದ ಧಾರಾಕಾರವಾಗಿ ಹೊರಗೆ ಉಕ್ಕುತ್ತಿರುವ ರಕ್ತಪ್ರವಾಹದಿಂದ ತೊಯ್ದು ಕೆಂಪಾದ ಸಂಜೆಯಂತೆ ಅವು ಕಂಗೊಳಿಸುತ್ತಿವೆಯಂತೆ. ಪದ್ಯದ ಉತ್ತರಾರ್ಧವು ಈ ಬಾಹುಗಳ ಸ್ಪರ್ಧೆಯನ್ನು ನಮ್ಮ ಮನಸ್ಸಿಗೆ ತಂದುಕೊಡುತ್ತವೆ. 'ದುಷ್ಟಶಿಕ್ಷಣ-ಶಿಷ್ಟರಕ್ಷಣ'ಕ್ಕಾಗಿ ಇವು ನಾ ಮುಂದು ತಾ ಮುಂದು ಎಂಬಂತೆ ನುಗ್ಗುತ್ತಿರುವಂತೆ ಕೃತಿ ಕಾರರಿಗೆ ಕಂಡುಬರುವುದು ಅವರ ದರ್ಶನದ ಮಹೋನ್ನತಿಗೆ ಸಾಕ್ಷಿಯಾಗಿದೆ.

'ಕಾಮಾಸಿಕಾಷ್ಟಕ'ದ ಏಳನೆಯ ಪದ್ಯದಲ್ಲಿ ನರಸಿಂಹನ ಒಂದೇ ರೂಪವು ನೋಡುವ ಕಣ್ಣುಗಳ ಕಾರಣವಾಗಿ ಭೀಷಣ-ಶಾಂತ, ಉಗ್ರ- ರಭಸ, ಅಟ್ಟಹಾಸ-ಪರಿಸ್ಫುಟದಂತೆ ಕಾಣುತ್ತದೆ. ಸಟಾಗ್ರಗಳನ್ನು ಕಣ್ಣಾಲಿಗಳನ್ನು ತಿರುಗಿಸುತ್ತ ಅಟ್ಟಹಾಸದಿಂದ ಕೂಡಿರುವ ಭೀಷಣ ಸ್ವರೂಪವಾಗಿರುವ ಸಿಂಹದಂತೆ ಛದ್ಮವೇಷದಲ್ಲಿರುವ ಈ ರೂಪಕ್ಕೆ ಭಯ ಗೊಳ್ಳುವೆವಾದರೂ ಇದೇ ರೂಪವು ಪ್ರಹ್ಲಾದನಿಗೆ ಬೇರೆಯಾಗಿ ಕಂಡಿದೆ.

*ಕೃಪಾ ಕಪಟಕೇಸರಿನ್ ದನುಜ ಡಿಂಭ ದತ್ತಸ್ತನಾ*
*ಸರೋಜ ಸದೃಶಾ ದೃಶಾ ವ್ಯತಿಭಿಷಜ್ಯ ತೇ ವ್ಯಜ್ಯತೇ*

- ಪ್ರಹ್ಲಾದನಿಗೆ ಆಹ್ಲಾದಕರವಾದ ದರ್ಶನವನ್ನು ನೀಡುತ್ತಿದ್ದಾನೆ ಭಗವಂತ. ಆತನ ಮುಖಾರವಿಂದವು ಭಕ್ತೋತ್ತಮನಾದ ಪ್ರಹ್ಲಾದನಿಗೆ ಸ್ತನ್ಯಪಾನವನ್ನು ನೀಡುವ ತಾಯಿಯ ಕಣ್ಣುಗಳಂತೆ ಆಹ್ಲಾದಕರವಾಗಿರುವುದಂತೆ. ಕೃಪಾಕಟಾಕ್ಷವನ್ನು ಧಾರೆಯಂತೆ ಹರಿಸುವ ಹಾಗಿರುವ ಇಲ್ಲಿನ ವಾತ್ಸಲ್ಯಭಾವವು ಮನಸ್ಸನ್ನು ಸೂರೆಗೊಳ್ಳುವಂತಿದೆ. ಕರುಣಾಗುಣ ಪ್ರಾಧಾನ್ಯತನಾದ ಭಗವಂತನು ತಾನೆಷ್ಟೇ ಸಿಟ್ಟುಗೊಂಡರೂ ತನ್ನ ಭಕ್ತನ ಬಗ್ಗೆ ಮಮತೆಯನ್ನು ಹೊಂದಬಲ್ಲನೆಂಬುದಕ್ಕೆ ಇದಕ್ಕಿಂತಲೂ ಬೇರೆ ಉದಾಹರಣೆಯ ಅಗತ್ಯವಿಲ್ಲ.

ಅಷ್ಟಕದ ಕಡೆಯ ಪದ್ಯವು ಸ್ವಾಮಿಯ ಸೇವಕನಾದ ಭಕ್ತನು ಹೇಗೆ ರಕ್ಷಣೆಗಾಗಿ ಹಂಬಲಿಸುವನೆಂಬುದನ್ನು ಧ್ವನಿಸುತ್ತದೆ. ನರಸಿಂಹ ಪ್ರಭುವಿನ ರಕ್ಷಣೆಯಿರುವಾಗ ಅನ್ಯರ

ನೆರವು ಅಗತ್ಯವಿಲ್ಲವೆಂಬುದು ದೇಶಿಕರ ಮಾತುಗಳಲ್ಲಿ ವ್ಯಕ್ತಗೊಂಡಿದೆ. ಆತನ ರಕ್ಷಣೆಯಿಲ್ಲದೆ ಇತರರ ರಕ್ಷಣೆಯಿಂದ ಏನಾಗುವುದೆಂಬ ಸಂಶಯದ ನಿರಾಕಾರ ಭಾವನೆಯನ್ನು ಕಾಣಬಹುದಾಗಿದೆ.

ಭಗವಂತನು ಸತ್ಯಸ್ವರೂಪನಾಗಿದ್ದು ವೇಗವತಿ ನದಿಯ ದಡದಲ್ಲಿ ವಿರಾಜಿಸುತ್ತಿದ್ದಾನೆ. ಅವನ ಅನುಗ್ರಹದಿಂದ ಎಲ್ಲ ದುರಿತಗಳಿಂದ ಪಾರಾಗಬಹುದು. ಈ ಅಷ್ಟಕದ ಮೂಲಕವಾಗಿ ಯಾರು ನರಹರಿಯನ್ನು ಸ್ತುತಿಸುವರೋ ಅಂತಹ ನರರ ಪಾಪಗಳೆಂಬ ಮದದಾನೆಯನ್ನು ನಿಗ್ರಹಿಸಿ ನರಹರಿಯು ಅನುಗ್ರಹಿಸುತ್ತಾನೆ.

# ನರಸಿಂಹ ಪಂಚಾಮೃತ ಸ್ತೋತ್ರ

'ನರಸಿಂಹ ಪಂಚಾಮೃತ ಸ್ತೋತ್ರ'ವನ್ನು ಸಾಕ್ಷಾತ್ ಶ್ರೀರಾಮಚಂದ್ರನೇ ರಚಿಸಿದನೆಂಬ ಅಭಿಪ್ರಾಯವಿದೆ. ಯುಗಪುರುಷನಾದ ಈತನು ಮತ್ತೋರ್ವ ಯುಗಾವತಾರಿಯನ್ನು ಸ್ತೋತ್ರದ ಮೂಲಕ ಆರಾಧಿಸುವ ಸಂಭಾವ್ಯತೆಯನ್ನು ಪ್ರಶ್ನಿಸುವಂತಾಗಬಹುದು. ಆದರೂ ನರಸಿಂಹರಾಧನೆಯನ್ನು ನಿರೂಪಿಸುವ ಯಾವುದೇ ಸುಂದರ ರಚನೆ ಯಾರದ್ದೇ ಆದರೂ ಅದರಲ್ಲಿರುವ ಸಾರವನ್ನು ಅರ್ಥಾತ್ ತಿರುಳನ್ನು ಗ್ರಹಿಸುವಲ್ಲಿ ಭಂಗವುಂಟಾಗದೆಂದು ಹೇಳಲಡ್ಡಿಯಿಲ್ಲವಷ್ಟೆ.

ಅಹೋಬಿಲ ನರಸಿಂಹನನ್ನು ಭಗವಾನ್ ರಾಮಚಂದ್ರನೇ ಪೂಜಿಸಿದ ಸಂದರ್ಭದಲ್ಲಿ ನರಸಿಂಹ ಪಂಚಾಮೃತ ಸ್ತೋತ್ರ ರಚನೆಯಾದ ವಿಚಾರವನ್ನು ಕೃತಿಯ ಆರಂಭದ ಸಾಲುಗಳು ತಿಳಿಸಿಕೊಡುತ್ತವೆ. ತನ್ನ ವಿಭವಾವತಾರದಲ್ಲಿ ಅಹೋಬಿಲಕ್ಕೆ ಬಂದ ರಘುರಾಮನು ನರಸಿಂಹನನ್ನು ನಮಸ್ಕರಿಸಿ ಇದನ್ನು ಹೇಳಿದನೆಂಬ ಪ್ರಸ್ತುತವಾದ ಸಂಗತಿಯನ್ನು ಉಪಲಬ್ಧವಿರುವ ಪಠ್ಯದ ಆಧಾರದಿಂದ ಸಾದರಪಡಿಸಬಹುದಾಗಿದೆ. ಈ ರೀತಿಯ ಆರಾಧನಾ ಸಾಹಿತ್ಯವನ್ನು ಮತ್ತು ಅದರ ಸ್ವಾರಸ್ಯವನ್ನು ಗಮನಿಸಬಹುದು.

ಪಂಚಾಮೃತವೆಂಬ ಪದಕ್ಕೆ ವಿವಿಧ ವಸ್ತುಗಳ ಗುಣಸಾರದ ತೀರ್ಥವೆಂಬ ಅರ್ಥವೂ ಇದೆ. ವ್ಯಕ್ತಿಗೆ ಅನ್ವಯವಾಗುವಂತೆ ಅವನ ಗುಣಗಳ ಬಗ್ಗೆ ಹೇಳುವಾಗ ಸಹ ಪಂಚದ ಮಹತ್ವದ ಅರಿವಾಗುತ್ತದೆ. ಇಂದ್ರಿಯಗಳಲ್ಲಿ ಪಂಚೇಂದ್ರಿಯಕ್ಕೆ ವಿಶಿಷ್ಟಸ್ಥಾನವಿದೆ. ಐದು ಪದ್ಯಗಳ ಮೂಲಕವಾಗಿ ನರಸಿಂಹನನ್ನು ಸ್ತುತಿಸಿದ ಈ ಸ್ತೋತ್ರಭಾಗವು ಪಂಚಾಮೃತ ಸ್ತೋತ್ರವಾಯಿತು.

ಮೊದಲನೆಯ ಪದ್ಯದಲ್ಲಿ ವಿಷ್ಣುವಿನ ಗೋವಿಂದಾದಿ ಅನೇಕ ರೂಪಮಹಿಮೆಗಳ ನಿರೂಪಣೆಯಿದೆ. ಈತನು ಸ್ವರ್ಗವನ್ನೂ, ವೇದಗಳನ್ನೂ, ಭೂಮಿಯನ್ನೂ ಉದ್ಧರಿಸಿದವನಾಗಿದ್ದಾನೆ. ಕೇಶಿಯೆಂಬ ರಾಕ್ಷಸನನ್ನು ಸಂಹರಿಸಿದ ಕಾರಣ ಕೇಶವನಾಗಿದ್ದಾನೆ. ಕೇಶವಾದಿ ಇಪ್ಪತ್ತನಾಲ್ಕು ರೂಪಗಳಲ್ಲಿ ನರಸಿಂಹನ ಮಾನವಾಕೃತಿಯಿದೆ. ಮೂರು ಲೋಕಗಳ

ಅಧಿಪತಿಯಾದವನೆಂಬ ಅರ್ಥವನ್ನು ಗೋವಿಂದನೆಂಬ ಶಬ್ದವು ಒಳಗೊಂಡಿದೆ. ಜನಾರ್ದನ ಎಂಬ ರೂಪವು ಈತನಿಗೆ ಪ್ರಳಯಕಾಲದಲ್ಲಿ ಜನ ಸಂಹಾರಕನಾದ್ದರಿಂದ ಬಂದಿರುವುದಾಗಿದೆ. ವಾಸುದೇವನೆಂಬ ಹೆಸರಿನ ಅರ್ಥ ವಿಶಿಷ್ಟವಾದದ್ದೇ ಆಗಿದೆ. ಭಾಗವತರಿಗೆ ವಾಸುದೇವ ಕೃಷ್ಣನು ಅತ್ಯಂತ ಮಹಿಮಾವಂತನಾಗಿದ್ದಾನೆ. ಆತನು ಸಮಸ್ತ ಜೀವಿಗಳಲ್ಲಿಯೂ ವಾಸ ಮಾಡುತ್ತಿರುವವನಾಗಿ, ಎಲ್ಲರ ಹೃದಯಗಳಲ್ಲಿ ನೆಲೆಸಿರುವವನಾಗಿ ವಾಸುದೇವನಾಗಿ ರೂಪುಗೊಂಡಿದ್ದಾನೆ.

ವಿಶ್ ಎಂಬ ಮಾತು ವಿಶ್ವದ ರೂಪಕ್ಕೆ ಆಧಾರವಾಗಿದೆ. ವಿಷ್ಣುವಿನಲ್ಲಿ ವ್ಯಾಪಿಸುವ ಗುಣವಿದೆ. ವಿಶ್ವಕ್ಕೂ ಸಹಾ ವ್ಯಾಪಿಸಿಕೊಂಡು ಹೋಗುವ ಸಾಮರ್ಥ್ಯವಿದೆ. ಆ ಭಗವಂತನನ್ನು ವಿಶ್ವನಾಥನೆಂದು ಸಂಬೋಧಿಸಿದ್ದೇವೆ. ಆತನನ್ನು ವಿಶ್ವವನ್ನು ಸಲಹಲೂ ಬೇಡುತ್ತಿದ್ದೇವೆ. ವಿಶ್ವವನ್ನೇ ತನ್ನ ರೂಪವಾಗಿ ಧರಿಸಿದ ಪುರುಷೋತ್ತಮನೂ ಆದ ಈತನು ಶ್ರೇಷ್ಠವಾದ ಗುಣಗಳಿಂದ ಕೂಡಿ ವಿಶಿಷ್ಟನಾಗಿರುತ್ತಾನೆ. ಮಧುವೆಂಬ ರಾಕ್ಷಸನನ್ನು ಕೊಂದವನಾಗಿ ಮಧುಸೂದನನಾಗಿದ್ದಾನೆ. ಎಲ್ಲವನ್ನೂ ಧಾರಣ ಮಾಡಿಕೊಳ್ಳುವ ಸಾಮರ್ಥ್ಯವುಳ್ಳವನೂ, ಅಂತರಿಕ್ಷವನ್ನು ಕಣ್ಣಾಗಿ ಉಳ್ಳವನೂ ಆದ ಕಾರಣ ಪುಷ್ಕರಾಕ್ಷನೆಂದೆನಿಸಿದ್ದಾನೆ. ನೀರಿನಲ್ಲಿ ವಾಸಮಾಡುತ್ತಾ ನಾರಾಯಣನಾದ ಈತನು ತನ್ನ ಪದವಿಗೆ ಯಾವ ಚ್ಯುತಿಯೂ ಇಲ್ಲದ ಕಾರಣದಿಂದ ಅಚ್ಯುತನಾಗಿದ್ದಾನೆ. ಇಂತಹ ಎಲ್ಲ ರೂಪಗಳನ್ನೂ ತನ್ನಲ್ಲಿ ಸಮೀಕರಿಸಿಕೊಂಡು ನರಸಿಂಹನಾಗಿ ಪೂಜೆಗೊಳ್ಳುತ್ತಿದ್ದಾನೆ.

ನರಸಿಂಹಸ್ವಾಮಿಯ ಪಾದಮೂಲದ ಮಹತ್ವವನ್ನು ಮುಂದಿನ ಪದ್ಯದಲ್ಲಿ ವಿವರಿಸ ಲಾಗಿದೆ. ಸಮಸ್ತ ದೇವತೆಗಳೂ, ಪ್ರಮುಖರಾದ ಎಲ್ಲ ಯೋಗಿಗಳೂ, ಗಂಧರ್ವರೂ, ವಿದ್ಯಾಧರರೂ, ಕಿನ್ನರರೂ ಯಾವ ದೇವನ ಪಾದಕಮಲಗಳನ್ನು ಸತತವಾಗಿ ನಮಸ್ಕರಿಸುತ್ತಿರು ವರೋ ಅಂತಹವನ ಚರಣಗಳನ್ನು ತಾನು ಆಶ್ರಯಿಸುತ್ತೇನೆಂದು ಹೇಳುವ ಮಾತುಗಳಲ್ಲಿ ಭಗವಂತನ ಪಾದಗಳ ಹಿರಿಮೆ ವ್ಯಕ್ತವಾಗಿದೆ. ಯಾರೇ ಶ್ರೇಷ್ಠನಾದ ವ್ಯಕ್ತಿಯಾದರೂ ಆತನ ಅಡಿದಾವರೆಗಳಲ್ಲಿ ನಮ್ಮ ತಪ್ಪುಗಳನ್ನು ಒಪ್ಪಿಸುವಂತೆ ದಂಡಪ್ರಣಾಮಗಳನ್ನು ಸಲ್ಲಿಸುವುದು ವಿಶಿಷ್ಟ ಸಂಪ್ರದಾಯವಾಗಿದೆ.

ವೇದಗಳು ಜ್ಞಾನಮೂಲಗಳಾಗಿ ನಮ್ಮ ಬುದ್ಧಿಬಲವನ್ನು ಹೆಚ್ಚಿಸುತ್ತಿವೆ. ಇದನ್ನು ಅರಿಯಲು ಭಗವಂತನ ನೆರವು ಅಗತ್ಯ. ಆಳವಾದ ಪಾಂಡಿತ್ಯವನ್ನು ಶಾಸ್ತ್ರಗರ್ಭವನ್ನು ಪ್ರವೇಶಿಸಿ ಪಡೆಯಬೇಕಾಗಿದೆ. ಪುರುಷನಾದವನು ಕೀರ್ತಿ, ಬುದ್ಧಿ, ಬಲ ಸಂಪತ್ತುಗಳನ್ನು ಪಡೆಯಲು ಅದಕ್ಕೆ ಕಾರಣನಾದವನೊಬ್ಬನಿರಬೇಕು. ಆತನು ನರಸಿಂಹನಲ್ಲದೇ ಬೇರಾರೂ ಅಲ್ಲವೆಂದು ಆತನನ್ನು ಅರ್ಚಿಸುವ ಸಮಯದಲ್ಲಿ ನಿವೇದಿಸಲಾಗಿದೆ. ಈತನನ್ನು ಶರಣು ಹೊಂದುವುದು ಅಗತ್ಯವಾಗಿದೆ. 'ಶರಣಂಗತೋಸ್ಮಿ' ಎಂದು ಹೇಳಿರುವ ಹಿನ್ನೆಲೆಯಲ್ಲಿ ಇದರ ಅರ್ಥವಿದೆ. ಅಹೋಬಿಲದ ನರಸಿಂಹನ ಆಶೀರ್ವಾದಕ್ಕಾಗಿ ಸಲ್ಲಿಸಿರುವ ಬೇಡಿಕೆ ಈ ರೀತಿ ವ್ಯಕ್ತವಾಗುತ್ತಿದೆ.

'ಪಂಚಾಮೃತಸ್ತೋತ್ರ'ದ ಮುಂದಿನ ಎರಡು ಪದ್ಯಗಳ ಕಡೆಯ ಚರಣಗಳಲ್ಲಿ 'ಸತತಂ ನತೋಸ್ಮಿ' ಎಂಬ ವಿಶೇಷಣವಿದೆ. ಸಮಸ್ತ ಜನತೆಯ ಅಭಿವೃದ್ಧಿಗೆ ಕಾರಣಕರ್ತನಾಗಿ ಯಾರು ಬ್ರಹ್ಮನೇ ಆಗಿರುವನೋ ಅಂತಹ ಪರಮಾನಂದ ಸ್ವರೂಪನಾದ ಮಂಗಳಕರನಾದ ಶಿವಸ್ವರೂಪಿಯೂ ಆದ ಪುರುಷರಲ್ಲಿಯೇ ಪರಮಶ್ರೇಷ್ಠನಾದ ಸ್ವಾಮಿಯು ಈತನಾಗಿದ್ದಾನೆ. ಸ್ವತಃ ನಾರಾಯಣನಾಗಿ ಮರುದ್‍ಗಣಗಳ ಒಡೆಯನಾದ ಚಂದ್ರ-ಸೂರ್ಯ-ಅಗ್ನಿಗಳೆಂಬ ತ್ರೇತಾಗ್ನಿಗಳ ಅಂಶಗಳನ್ನು ತನ್ನಲ್ಲಿ ಒಳಗೊಂಡಿರುವ ನರಸಿಂಹನನ್ನು ನಮಸ್ಕರಿಸುವ ವಿಧಾನವಿಲ್ಲಿದೆ. 'ಸ್ವಪ್ನ-ಜಾಗ್ರತ್-ಸುಷುಪ್ತಿ'ಗಳೆಂಬ ಮೂರು ಅವಸ್ಥೆಗಳ ಮೂಲಕ ಸೃಷ್ಟಿ, ಸ್ಥಿತಿ, ಲಯಗಳಿಗೂ ಕಾರಣನಾದವನು ವೈವಿಧ್ಯಮಯವಾದ ವ್ಯಕ್ತಿತ್ವವನ್ನು ಹೊಂದಿರುವವನು, ಯಾರ ಮಹಿಮೆಯು ಅಳತೆಗೊಳಪಡುವುದಿಲ್ಲವೋ ಅಂತಹ ರಕ್ಷಕನು ಸಾಂಖ್ಯತತ್ವಕ್ಕೆ ಅನುಸಾರವಾದ ಗುಣವಿಶಿಷ್ಟವಾದ ನೃಸಿಂಹನನ್ನು ಸತತ ನಮಸ್ಕರಿಸುವ ಪರಿಯಿದೆ.

ಆದಿತ್ಯೋಪಾಸಕನಾದ, ರಾಘವ ಶ್ರೇಷ್ಠನಾದ ಶ್ರೀರಾಮಚಂದ್ರನು ನೃಸಿಂಹನಿಗೆ ಹೀಗೆ ತನ್ನ ನಮನಗಳನ್ನು ಸಲ್ಲಿಸುತ್ತಾನೆ. ಆತನಿಗೆ ಸಕಲವಿಧವಾದ ಪೂಜೆಗಳನ್ನು ನೆರವೇರಿಸಿದ್ದಾನೆ. ಈ ಸಂದರ್ಭದಲ್ಲಿ ದೇವದೇವನ ಮಸ್ತಕದ ಮೇಲೆ ದೇವಮಹರ್ಷಿಗಳು ಪುಷ್ಪವೃಷ್ಟಿ ಮಾಡಿದ್ದಾರೆ. 'ಸಾಧು ಸಾಧು' ಎಂಬ ಮಾತುಗಳು ಅವರಿಂದ ಹೊರಹೊಮ್ಮಿವೆ. ದೇವದುಂದುಭಿಯು ಮೊಳಗುತ್ತದೆ. ರಾಘವನಿಂದ ರಚಿತವಾದ ಪಂಚಾಮೃತ ಸ್ತೋತ್ರವನ್ನು ಯಾರು ಪಠಿಸುವರೋ ಅವರಿಗೆ ಶಾಶ್ವತವಾದ ಸ್ವರ್ಗವು ಪ್ರಾಪ್ತವಾಗುತ್ತದೆಂಬ ಫಲಶ್ರುತಿಯನ್ನು ಹೇಳಲಾಗಿದೆ.

# ರುದ್ರಾಂತರ್ಗತನಾದ ನರಸಿಂಹನ ಸ್ತುತಿ

ವಿಷ್ಣುವಿನ ಅವತಾರವೆ ಆಗಿರುವ ನರಸಿಂಹನನ್ನು ರುದ್ರನೊಂದಿಗೆ ಬೆಸುಗೆ ಹಾಕಿರುವುದನ್ನು ಭಾಗವತವು ವರ್ಣಿಸುತ್ತದೆ. ಈತನನ್ನು ರುದ್ರಾಂತರ್ಗತನಾಗಿದ್ದಾನೆಂದು ಭಾವಿಸಲಾಗಿದೆ. ಮಾಧ್ವಮತವು ಖಚಿತವಾಗಿ ಮತ್ತು ಸಂಪೂರ್ಣವಾಗಿ ಹರಿಸರ್ವೋತ್ತಮ ತತ್ತ್ವವನ್ನು ಪ್ರತಿಪಾದಿಸುತ್ತಿದೆಯಾದರೂ ಆ ಪರಂಪರೆಯಲ್ಲಿ ಬರುವ ಯತಿಗಳು ಶಂಕರನ ಆರಾಧನೆಗೊಂದು ಸ್ಥಾನವನ್ನು ಕಲ್ಪಿಸಿಕೊಟ್ಟಿರುವುದನ್ನು ನರಸಿಂಹ ದೇವಾಲಯಗಳಲ್ಲಿ ಪ್ರತಿಷ್ಠೆ ಮಾಡಲಾಗಿರುವ ಶಿವಲಿಂಗಗಳ ಮೂಲಕವಾಗಿ ಖಚಿತಪಡಿಸಿಕೊಳ್ಳಬಹುದಾಗಿದೆ. ಇದರ ಸಂಬಂಧವನ್ನು ಕ್ಷೀರಸಾಗರ ಮಥನದ ಸಂದರ್ಭದಲ್ಲಿ ಪರಿಭಾವಿಸಲಾಗಿದೆ.

ರುದ್ರನನ್ನೆ ನೇರವಾಗಿ ಸ್ತೋತ್ರಮಾಡಲು ಮತಧರ್ಮದ ಸಿದ್ಧಾಂತವು ಅಡಚಣೆಯಾದ ಕಾರಣಕ್ಕೆ ಆತನಲ್ಲಿ ನರಸಿಂಹನು ಅಡಗಿ ಕುಳಿತಿರುವುದನ್ನು ಕಂಡುಕೊಂಡ ವಿಧಾನವು 'ವಿಚಾರಶೀಲತೆಯ ಆವಿಷ್ಕಾರ'ವೆಂದು ಪರಿಗಣಿಸಬಹುದು. ಕ್ಷೀರಸಾಗರ ಮಥನದ ಸಂದರ್ಭದಲ್ಲಿ ಹುಟ್ಟಿದ ಹಾಲಾಹಲದಿಂದ ತಮ್ಮನ್ನು ರಕ್ಷಿಸಲು ಜಗತ್ತನ್ನು ಉಳಿಸಲು ಪ್ರಜಾಪತಿಗಳೆಲ್ಲರೂ ಒಟ್ಟಾಗಿ ಸೇರಿ ರುದ್ರದೇವನನ್ನು ನರಸಿಂಹಾಂತರ್ಗತ ಭಾವನೆಯಿಂದ

ಸ್ತುತಿಸುತ್ತಾರೆ. ಈ ನರಸಿಂಹಸ್ತುತಿಯ ಭಾಗವನ್ನು ಭಾಗವತದ ಎಂಟನೆ ಸ್ಕಂಧದಲ್ಲಿ ಹೇಳಿರುವುದರ ಭಾಗವನ್ನು ಇಲ್ಲಿ ಗಮನಿಸಬಹುದು.

ದೂರ್ವಾಸರ ಶಾಪದಿಂದ ದೇವತೆಗಳು ತಮ್ಮ ರಾಜ್ಯವನ್ನು ಕಳೆದುಕೊಳ್ಳುತ್ತಾರೆ. ಕೈಬಿಟ್ಟುಹೋದ ಸಮಸ್ತ ರಾಜ್ಯೈಶ್ವರ್ಯಗಳನ್ನು ಮರಳಿ ಪಡೆಯುವ ಸಲುವಾಗಿ ಅವರು ಬ್ರಹ್ಮದೇವನ ಅಪ್ಪಣೆಯನ್ನು ಪಡೆದು ದೈತ್ಯರ ನೆರವಿನಿಂದ ಕ್ಷೀರಸಾಗರ ಮಂಥನವನ್ನು ನಡೆಸುತ್ತಾರೆ. ತಮ್ಮ ಕಾರ್ಯದಲ್ಲಿ ಬಳಲಿಕೆಯಾದಾಗ ಭಗವಂತನೇ ಆ ಕಾರ್ಯವನ್ನು ಮುಂದುವರೆಸುತ್ತಾನೆ. ಆಗ ಜಗತ್ತನ್ನು ಸುಟ್ಟು ಬೂದಿ ಮಾಡುವ ರೀತಿಯಲ್ಲಿ ಹಾಲಾಹಲ ವೆಂಬ ವಿಷವು ಹುಟ್ಟಿಬರುತ್ತದೆ. ಇದನ್ನು ಕಂಡ ಅವರು ದೇವದೇವನಾದ, ಸರ್ವೋತ್ತಮನಾದ, ಶರಣಾಗತ ರಕ್ಷಕನಾದ ಸರ್ವೇಶನು ತಮ್ಮನ್ನು ಕಾಪಾಡಬೇಕೆಂದು ಪ್ರಾರ್ಥಿಸುತ್ತಾರೆ.

ತ್ರಿಗುಣಗಳಿಂದ ಬಂಧಿಸಲ್ಪಟ್ಟ ತಮ್ಮನ್ನು ರಕ್ಷಿಸುವ ಶಕ್ತಿ ರುದ್ರಾಂತರ್ಗತವಾದ ನರಸಿಂಹನಿಗೆ ಮಾತ್ರ ಸಾಧ್ಯವೆಂದು ಅವರು ಭಾವಿಸುತ್ತಾರೆ. ಬಂಧನ-ವಿಮೋಚನಗಳೆಂಬ ಕಾರ್ಯಗಳೆರಡೂ ಒಬ್ಬನೇ ಆದ ಪರಮಾತ್ಮನಲ್ಲಿ ಅಡಕವಾಗಿದೆಯೆಂಬುದು ಅವರ ಸ್ಪಷ್ಟ ಅಭಿಪ್ರಾಯವಾಗಿದೆ. ತ್ರಿಮೂರ್ತಿಗಳ ಮೂಲಕವಾಗಿ ಜಗತ್ತನ್ನು ಸೃಷ್ಟಿ-ಸ್ಥಿತಿ-ಸಂಹಾರ ಕ್ರಿಯೆಗಳಿಂದ ನಿರ್ವಹಿಸುತ್ತಿರುವವನೂ ಅವನೇ ಆಗಿದ್ದಾನೆ ಎಂಬುದು ಅವರ ವಿಚಾರವಾಗಿದೆ.

ಅನೇಕ ಅವತಾರಗಳನ್ನೆತ್ತಿ ಭಗವಂತನು ಜಗತ್ತನ್ನು ಸಮತೋಲನವನ್ನು ಕಾಪಾಡುತ್ತಾನೆ. ಸುಖ-ದುಃಖಗಳ ಕಾರಣಕರ್ತನಾಗಿರುತ್ತಾನೆ. ಆತನ ಮಹಿಮೆಯನ್ನು ವೇದಗಳು ಬಣ್ಣಿಸುತ್ತಿವೆ. ಪ್ರಾಣ, ಇಂದ್ರಿಯ, ಮನಸ್ಸುಗಳನ್ನು ಮಾತ್ರವಲ್ಲದೆ ಪಂಚಭೂತಗಳನ್ನೂ ಅವನು ತನ್ನ ಅಧೀನದಲ್ಲಿಟ್ಟುಕೊಂಡಿದ್ದಾನೆ. ಕಾಲನಾಗಿ ಕರ್ಮಪ್ರದನಾದರೆ, ಯಜ್ಞನಾಗಿ ಕರ್ಮ ಪ್ರವರ್ತಕನಾಗಿದ್ದಾನೆ. ಧರ್ಮನಾಗಿ ಲೋಕರಕ್ಷಕನೂ ಆಗಿರುವ ಇವನಿಂದ ಮಾತ್ರ ಹಾಲಾಹಲದ ಪ್ರಕೋಪವನ್ನು ತಗ್ಗಿಸಲು ಸಾಧ್ಯವಾಗುತ್ತದೆಯೆಂಬುದು ಅವರ ಅಭಿಮತವಾಗಿದೆ.

ಓಂಕಾರ ಮಹಿಮೆಯ ಮಂತ್ರದಿಂದ ಸ್ತುತಿಸಲ್ಪಡುತ್ತಿರುವ ಈತನ ಕಾರಣವಾಗಿ ಸೃಷ್ಟಿಕಾರ್ಯವು ನಡೆದುಬಂದಿದೆ. ಇವನ ಪಾದದಿಂದ ಭೂಮಿಯು ಹುಟ್ಟಿದರೆ, ನಡೆಯು ವಿಕೆಯಿಂದ ಕಾಲಗತಿಯು ಜನ್ಮತಳೆದಿದೆ. ಕಿವಿಯಿಂದ ದಿಗ್ದೇವತೆಗಳು, ನಾಲಿಗೆಯಿಂದ ವರುಣನು, ನಾಭಿಯಿಂದ ಆಕಾಶವು ಜನ್ಮತಳೆದಿವೆ. ಈತನ ಕಣ್ಣಿಂದಲೇ ಸೂರ್ಯನು ಹುಟ್ಟಿದ್ದಾನೆ. ಇವನ ರೇತಸ್ಸಿನಿಂದ ಜಲವು, ಬುದ್ಧಿಯಿಂದ ಚತುರ್ಮುಖ ಬ್ರಹ್ಮನು, ಮನಸ್ಸಿನಿಂದ ಚಂದ್ರನು, ತಲೆಯಿಂದ ದ್ಯುಲೋಕವು ಸೃಷ್ಟಿಯಾಗಿವೆ. ಈತನ ಹೊಟ್ಟೆಯಿಂದ ಸಮುದ್ರವು, ಅಸ್ಥಿಗಳಿಂದ ಗಿರಿಗಳು, ರೋಮಗಳಿಂದ ಔಷಧಿ ಹಾಗೂ ಮರಗಳು, ಧಾತುಗಳಿಂದ ಏಳು ಛಂದಸ್ಸುಗಳು ಮತ್ತು ಹೃದಯದಿಂದ ಧರ್ಮನು ರೂಪ ತಳೆದಿರುತ್ತಾರೆ.

## ಮಂಗಳ

ಐದು ಉಪನಿಷತ್ತುಗಳು ಭಗವಂತನ ಐದು ಮುಖಗಳಿಂದ ಹುಟ್ಟಿದವು. ಇಲ್ಲಿ ಪಂಚಾನನನಾದ ಶಿವನ ಮಹಿಮೆಯೂ ಅಡಕವಾಗಿದೆ. 'ಪಂಚವಕ್ತ್ರ' ನರಸಿಂಹನ ಹಿರಿಮೆಯೂ ಇದರಿಂದ ವ್ಯಕ್ತಗೊಂಡಿರುತ್ತದೆ. ಶಿವನಾಮಕ ಶಿವನಿಯಾಮಕವೆಂಬ ಮಾತುಗಳು ಈ ಸಂದರ್ಭದಲ್ಲಿ ಬಂದಿದ್ದು ಶಂಕರನ ಶಿವರೂಪದ ಛಾಯೆ ಕಂಡುಬಂದಿದೆ. ಶಿವಶಬ್ದವನ್ನು ಮಂಗಳಕರನಾದವನು ಎಂಬರ್ಥದಲ್ಲಿ ಬಳಸಿರುವುದರಿಂದ ಅದು ವಾಚ್ಯವಾಗಿದೆಯೆಂದು ಭಾವಿಸಬಹುದಾಗಿದೆ.

ರುದ್ರನಲ್ಲಿ ಮೂಡಿರುವ ಮೂರು ಕಣ್ಣುಗಳು ಸತ್ತ್ವ-ರಜಸ್-ತಮಸ್‌ಗಳೆಂಬುದಾಗಿದ್ದು, ಅದರ ಕಾರಣನು ಈತನೇ ಆಗಿದ್ದಾನೆ. ಶಿವನ 'ಕಾಮದಹನ' ಮತ್ತು 'ದಕ್ಷ ಯಜ್ಞ' ಗಳಂತಹ ಪ್ರಸಂಗಗಳನ್ನು ನಡೆಸಿರುವನು ಇವನೇ ಆಗಿದ್ದಾನೆ. ಪ್ರಳಯಕಾಲದಲ್ಲಿ ಶಿವಮುಖವಾದ ನೇತ್ರಾಗ್ನಿಯಿಂದ ಜಗತ್ತನ್ನು ಸುಡಲು ಪ್ರೇರಕನಾದವನು ಈತನೇ ಆಗಿರುತ್ತಾನೆ. ಇಲ್ಲೆಲ್ಲ ಶಿವನ ಹಿರಿಮೆಯು ವ್ಯಕ್ತವಾಗುವಂತೆ ಹೊರನೋಟಕ್ಕೆ ಕಂಡುಬರುತ್ತದೆ. ಉಗ್ರರೂಪನಾದ ನರಸಿಂಹನ ಮತ್ತೊಂದು ಮುಖವೂ ಆದ ಅವನ ಮಹಿಮಾ ರೂಪವನ್ನು ಶ್ರುತಪಡಿಸುತ್ತಿರುವುದು 'ರುದ್ರ-ನರಸಿಂಹ' ಸ್ತೋತ್ರದ ವಿಶಿಷ್ಟತೆಯೆನ್ನಬಹುದು.

## ಮಂತ್ರರಾಜ ಪದ ಸ್ತೋತ್ರ

ನರಸಿಂಹಸ್ವಾಮಿಯ ಮಹಿಮೆ ಪ್ರಭಾವಗಳು ವಿಸ್ತೃತವಾದಂತೆ ಆತನ ಪರವಾದ ಸ್ತೋತ್ರ ಸಾಹಿತ್ಯವೂ ವಿಸ್ತಾರವಾಗಿ ಸಾಗಿಬಂದಿದೆ. ವಿಷ್ಣುವಿನ ಅವತಾರ ರೂಪಿಯಾದ ಈತನನ್ನು ಮತ್ತೊಬ್ಬ ಅವತಾರರೂಪಿಯಾದ ಮರ್ಯಾದಾ ಪುರುಷೋತ್ತಮ ಪೂರ್ಣಾವತಾರಿಯಾದ ಶ್ರೀರಾಮಚಂದ್ರನು ಅರ್ಚಿಸಿದನೆಂದು ಪಂಚಾಮೃತ ಸ್ತೋತ್ರದಲ್ಲಿ ಹೇಳಲಾಗಿದೆ. ಇದರಂತೆ ಮತ್ತೊಂದು ಪ್ರಸಂಗವನ್ನು ಸ್ತೋತ್ರಸಾಹಿತ್ಯವು ಉಲ್ಲೇಖಿಸುತ್ತಿದೆ. ಅದೇನೆಂದರೆ, ತ್ರಿಮೂರ್ತಿಗಳಲ್ಲೊಬ್ಬನಾದ ಸದಾಶಿವನು ತನ್ನ ಮಡದಿ ಪಾರ್ವತಿಗೆ ನರಸಿಂಹ ಮಂತ್ರವನ್ನು ತಿಳಿಸಿಕೊಟ್ಟಿದ್ದಾನೆ.

ಮಂತ್ರರಾಜ ಪದ ಸ್ತೋತ್ರವೆಂದು ಪ್ರಚಲಿತವಾಗಿರುವ ಈ ಆರಾಧನಾ ಸಾಹಿತ್ಯದ ವಿಶಿಷ್ಟತೆಯೇನೆಂದರೆ, ಇದು 'ಮಂತ್ರಗಳಲ್ಲಿಯೇ ಪರಮಮಂತ್ರ'ವೆಂದು ಖ್ಯಾತವಾಗಿದೆ. ರಹಸ್ಯಗಳಲ್ಲಿ ರಹಸ್ಯವಾಗಿದ್ದು ಅತಿ ದುರ್ಲಭವಾಗಿದೆ. ಶಂಕರನು ಗರುಡಧ್ವಜನಾದ, ತಾಪತ್ರಯ ಹರನಾದ, ಕ್ಲೇಶಕಾರಕನಾದ ನರಸಿಂಹವಿಭುವನ್ನು ಗುರುಸಮಾನನೆಂದು ಪರಿಗಣಿಸಿದ್ದಾನೆ. ಈತನನ್ನು ನಮಸ್ಕರಿಸುತ್ತಲೇ ಈ ಪವಿತ್ರ ಮಂತ್ರವನ್ನು ತನ್ನ ಮಡದಿಗೆ ಬೋಧಿಸಿದ್ದಾನೆ.

'ನರಸಿಂಹಸ್ತೋತ್ರಮಾಲಿಕೆ'ಯಲ್ಲಿ ಅಳವಡಿಸಬಹುದಾದ ಇದರಲ್ಲಿ ಹನ್ನೊಂದು ಪದ್ಯಗಳಿವೆ. ಪ್ರತಿಯೊಂದು ಪದ್ಯವು 'ನಮಾಮ್ಯಹಂ' ಎಂಬುದರಿಂದ ಮುಕ್ತಾಯವಾಗುತ್ತದೆ. ಇದೊಂದು ಗೌರವ ಭಾವನೆಯ ಸೂಚನೆಯಾಗಿಯೂ ಕಂಡುಬರುತ್ತದೆ. ಸಹಜವಾಗಿ ಶಾಂತನೂ, ಸುಂದರನೂ ಆದ ಮಹಾವಿಷ್ಣುವು ನರಸಿಂಹ ರೂಪವನ್ನು ಧರಿಸಿ ಶತ್ರು ಸಂಹಾರಮಾಡಿದ ಕಾರ್ಯದ ಹಿನ್ನೆಲೆಯಲ್ಲಿ ಕ್ಷಣಾವತಾರದ ಹಿರಿಮೆಯಿದೆ. ಈತನಿಗೆ ಆ ಸಂದರ್ಭದಲ್ಲಿ ಉಗ್ರವೂ ವಿಚಿತ್ರವೂ ಆದ ರೂಪವು ಅನಿವಾರ್ಯವೇ ಆಗಿದೆ. ಅದರ ವಿವರಣೆಯನ್ನು ಇಲ್ಲಿ ಮನಗಾಣಬಹುದು.

ನರಸಿಂಹಸ್ವಾಮಿಯ ಕಣ್ಣುಗಳು ದುಂಡಗೆ ವೃತ್ತಾಕಾರದಲ್ಲಿ ಶೋಭಿಸುತ್ತ ಪ್ರಖರವಾಗಿ ಹೊಳೆಯುತ್ತಿವೆ. ಶತ್ರುಪಕ್ಷವನ್ನು ನಾಶಗೊಳಿಸಿದ ಮಹಾ ಉದ್ದೇಶಕ್ಕಾಗಿ ಆತನು ದೀಕ್ಷೆ ತೊಟ್ಟವನಂತೆ ಕಂಡುಬರುತ್ತಿದ್ದಾನೆ. ಆತನ ಅಟ್ಟಹಾಸಕ್ಕೆ ಎಂತಹ ದುಷ್ಟನಿಗೂ ಹೆದರಿಕೆ ಆಗುತ್ತದೆ. ಬಲಶಾಲಿಯಾದ ದಿತಿಪುತ್ರನಾದ ರಾಕ್ಷಸ ವೈರಿಯನ್ನು ಸಕಲರಿಂದಲೂ ವಂದಿಸಿ ಕೊಳ್ಳುವವನನ್ನು, ತನ್ನ ಚಕ್ರದ ಹಾಗೆ ಇರುವ ಚೂಪಾದ ನಖಾಯುಧದಿಂದ ತುಂಡು ತುಂಡು ಮಾಡಿದ ನರಸಿಂಹನು ವೀರಪುರುಷನಂತೆ ಕಂಗೊಳಿಸುತ್ತಿದ್ದಾನೆ. ಎಲ್ಲ ಕಡೆ ಹರಡಿಕೊಂಡಿರುವ ಆತನು ಪಾತಾಳದವರೆಗೆ ತನ್ನ ಪದಗಳನ್ನೂರಿ ಸರ್ವವನ್ನು ವ್ಯಾಪಿಸಿ ಕೊಂಡಿದ್ದಾನೆ.

ಮಹಾವಿಷ್ಣು ಸ್ವರೂಪಿಯಾದ ಈತನ ಮೂರ್ಧನ್ಯಭಾಗವು ಮೂರುಲೋಕಗಳಲ್ಲಿ ಆವರಿಸಿದೆ. ಪರಾಕ್ರಮ ಸೂಚಕವಾದ ಭುಜಗಳು ಎಂಟುದಿಕ್ಕುಗಳಿಗೂ ಪ್ರವೇಶಿಸಿ ತಮ್ಮ ಸಾಮರ್ಥ್ಯವನ್ನು ವ್ಯಕ್ತಪಡಿಸುತ್ತಿವೆ. ಅವನು ತೇಜೋರೂಪನಾಗಿದ್ದಾನೆ. ಸೂರ್ಯ-ಚಂದ್ರರು, ನಕ್ಷತ್ರಗಳು, ಪ್ರಜ್ವಲಿಸುವ ಸಮಸ್ತವೂ ಅವನೇ ಆಗಿರುತ್ತಾನೆ. ಅವುಗಳ ಪ್ರಕಾಶಕ್ಕೆ ಕಾರಣೀಭೂತನಾಗಿರುತ್ತಾನೆ. ಈತನಿಗೆ ನಮಸ್ಕರಿಸಿ ಈತನ ಕೃಪೆಗೆ ಪಾತ್ರರಾಗುವುದು ಭಕ್ತರಾದವರ ಕರ್ತವ್ಯವಾಗಿರುತ್ತದೆ.

ಪರಮಾತ್ಮನಲ್ಲಿರುವ ಗುಣಗಳನ್ನು ಅರಿಯಲು ಆಳವಾದ ಅರಿವು ನಿಷ್ಠೆಗಳ ಅತ್ಯಗತ್ಯ. ಇದಕ್ಕನುಸಾರವಾಗಿ ಭಕ್ತನ ನಡವಳಿಕೆಯು ಹೊರಪಡುತ್ತದೆ. ಇಂದ್ರಿಯಾನುಭವಗಳು ಕೇವಲ ಮನುಷ್ಯನಲ್ಲಿರುವ ಗುಣವಾಗಿದೆ. ಆದರೆ ಭಗವಂತನು ಈ ಇಂದ್ರಿಯಾನುಭವಗಳಿಗೆ ಅತೀತನಾದವನಾಗಿದ್ದಾನೆ. ಹೀಗಿದ್ದರೂ ಸಹ ಆತನು ಸರ್ವೇಂದ್ರಿಯಗಳ ನಿಯಂತ್ರಕನೂ ಆಗಿರುತ್ತಾನೆ. ಆತನನ್ನು ಬಿಟ್ಟು ಏನನ್ನೂ ಅರಿಯಲು ಸಾಧ್ಯವಾಗಲಾರದು. ಅರಿಯುವುದರ ಹಿಂದಿನ ಶಕ್ತಿ ಅವನೇ ಆಗಿದ್ದಾನೆ. ಸರ್ವವೂ, ಸರ್ವತ್ರ ಸರ್ವಕಾಲಗಳೂ ಭಗವಂತನಿಗೆ ಸೇರಿದ್ದಾಗಿವೆ. ಈ ರೀತಿ ಇರುವಾತನನ್ನು ಆದ್ಯಂತವಾಗಿ ಅರಿತುಕೊಳ್ಳುವ ಪ್ರಯತ್ನದಿಂದ ಇಂದ್ರಿಯಗಳು ಮುನ್ನಡೆದಿವೆ. ಆತನ ಸರ್ವತೋಮುಖ ಗುಣಕ್ಕೆ ತಲೆಬಾಗಿವೆ. ಸರ್ವಶ್ರೇಷ್ಠ ನಾದ ಪುರುಷೋತ್ತಮನು ಆತನೇ ಆಗಿದ್ದು, ಆತನನ್ನು ಆಶ್ರಯಿಸುವುದಲ್ಲದೆ ಬೇರೊಂದು ಮಾರ್ಗವಿಲ್ಲವೆನ್ನಬಹುದು.

## ಕಡೆಯ ನುಡಿ

ನರರೂಪಧಾರಿಯೂ, ಸಿಂಹದಂತೆ ಕಂಗೊಳಿಸುತ್ತಿರುವವನೂ ಆದ ಆತನು ಮಹಾ ಕೇಸರಗಳಿಂದಲೂ, ಮಹಾ ದಂಷ್ಟ್ರಗಳಿಂದಲೂ ಕೂಡಿ ಉಗ್ರರೂಪಿಯಾಗಿದ್ದಾನೆ. ಈತನ ನಾಮಸ್ಮರಣೆಯಿಂದ ಭೀತಿ ನಿವಾರಣೆಯಾಗುತ್ತದೆ. ಭೂತ-ಬೇತಾಳ, ರಾಕ್ಷಸ ಭೀತಿಗಳು ತೊಲಗಿ ಹೋಗುವುದರಲ್ಲಿ ಸಂಶಯವಿಲ್ಲ. ಈ ರೀತಿಯಲ್ಲಿ ಅನಿಷ್ಟ ನಿವಾರಕನಾದ ಆತನನ್ನು ನಮಿಸಿ ಕೃತಾರ್ಥರಾಗಬೇಕಾಗಿದೆ.

## ಲಕ್ಷ್ಮೀನರಸಿಂಹ ಪ್ರಪತ್ತಿ

'ಲಕ್ಷ್ಮೀನರಸಿಂಹ ಪ್ರಪತ್ತಿ'ಯನ್ನು ತಪೋಧನರಾಗಿದ್ದ ಪರಾಂಕುಶಯತಿಗಳು ರಚಿಸಿದ್ದಾರೆ. ಇವರು ವಿದ್ವತ್ಪೂರ್ಣವಾದ ಪರಂಪರೆಯನ್ನು ಹೊಂದಿದ್ದರೆಂಬುದು ಇವರ ಕೃತಿಯಿಂದಲೇ ವೇದ್ಯವಾಗುತ್ತದೆ. ಶ್ರೀನಿವಾಸರೆಂಬ ಯೋಗಿವರ್ಯರನ್ನು ನಾರಾಯಣರೆಂಬ ಯೋಗಿಶ್ರೇಷ್ಠರನ್ನು ಮತ್ತೊಬ್ಬ ಯೋಗಿವರ್ಯರಾದ ರಘುವೀರವೇದರನ್ನು ಪರಾಂಕುಶರು ತಮ್ಮ ಕೃತಿ ರಚನೆಯ ಆರಂಭದಲ್ಲಿ ಸ್ತುತಿಸಿದ್ದಾರೆ.

ಪರಾಂಕುಶರ ಸ್ತೋತ್ರದಲ್ಲಿ ನಾಲ್ಕು ಸಾಲಿನ ಪದ್ಯಗಳಿವೆ. ಮೊದಲನೆ ಪದ್ಯದಲ್ಲಿ ಅಹೋಬಿಲೇಶನ ವಾಸಸ್ಥಳದ ವಿವರವಿದೆ. ಗರುಡಾದ್ರಿಯೆಂಬ ಶೈಲದ ನಡುವೆ ಅಹೋಬಿಲ ವೆಂಬ ಪ್ರಕೃತಿ ಮಹಿಮೆಯಿಂದ ಕೂಡಿದ ಪ್ರದೇಶದಲ್ಲಿ ಭಗವಂತನ ಕೃಪಾಕಟಾಕ್ಷವನ್ನು ಕಲ್ಪಿಸಿದ ಸನ್ನಿಧಾನವಿದೆ. ಅಲ್ಲಿ ತನ್ನ ವಾಮಭಾಗದಲ್ಲಿ ಲಕ್ಷ್ಮಿಯನ್ನು ಆಲಂಗಿಸಿಕೊಂಡಿರುವ ಲಕ್ಷ್ಮೀನರಸಿಂಹನು ನೆಲೆಸಿದ್ದಾನೆ. ಈತನನ್ನು ತಾನು ಶರಣುಹೊಂದುತ್ತೇನೆಂದು ಕೃತಿಕಾರರು ಹೇಳುತ್ತಾರೆ. ಅಹೋಬಿಲದ ಸ್ಥಳಮಹಾತ್ಮೆಯನ್ನು ತಿಳಿಸಿಕೊಟ್ಟಿರುವ ಈ ರಚನೆಯಲ್ಲಿ ಜನತೆಯ ಮೇಲಿನ ಕೃಪೆಯಿಂದ ಭಗವಂತನು ಎಂತೆಂತಹ ಸ್ಥಳವನ್ನು ಆಯ್ದುಕೊಂಡು ಅಲ್ಲಿ ನೆಲೆಸಿರುತ್ತಾನೆಂಬ ವಿಚಾರವನ್ನು ಅತ್ಯಂತ ಸುಂದರವಾದ ಪದಗಳ ಮೂಲಕ ಪ್ರತಿಪಾದಿಸಲಾಗಿದೆ.

ಶ್ರೀವಣ್‌ಶಠಾರಿಮುನಿಗಳಿಗೆ ಅವರ ಮೇಲಿನ ಪ್ರೀತಿಯಿಂದ ಭಗವಂತನು ಅನುಗ್ರಹಿಸಿರುತ್ತಾನೆ. ತನಗೆ ಪೂಜೆ ಮಾಡಲು ಪ್ರೇರಣೆ ನೀಡಿದ ಕಾರಣ ಲಕ್ಷ್ಮೀನರಸಿಂಹನನ್ನು ಇವರು ಶರಣು ಹೋಗಿರುವುದು ತಿಳಿದುಬರುತ್ತದೆ. ಸಮಸ್ತ ಜನರ ಆಸೆಗಳನ್ನು ಪೂರೈಸುವ ನದಿಯಂತಿರುವ ಶ್ರೀಸಮೇತನಾಗಿರುವ ಲಕ್ಷ್ಮೀನರಸಿಂಹನಿಗೆ ತಾವು ಶರಣೆಂದು ಹೇಳುತ್ತಾರೆ. ಜನತೆಯ ಸಂಕಷ್ಟ ಪರಿಹಾರಕನೂ ಸರ್ವಜನತೆಯನ್ನು ತಂದೆಯಂತೆ ಪರಿಪಾಲಿಸುವವನೂ ಸ್ತಂಭದಲ್ಲಿ ಅವತರಿಸಿದವನೂ ಆದ ಅನನ್ಯ ಲಭ್ಯನಾಗಿರುವ ಲಕ್ಷ್ಮೀನರಸಿಂಹನಲ್ಲಿ ಪರಾಂಕುಶ ಯತಿಗಳು ತಮ್ಮ ಶರಣಾಗತ ಭಾವವನ್ನು ವ್ಯಕ್ತಪಡಿಸಿದ್ದಾರೆ.

ಹಿರಣ್ಯ ಕಶಿಪುವನ್ನು ತಾನು ಸಂಹಾರ ಮಾಡುವಾಗ ತನ್ನ ಘೋರರೂಪವನ್ನು ಬ್ರಹ್ಮನಾದಿಯಾಗಿ ಯಾವ ದೇವತೆಗಳಿಗೂ ಕಾಣಲು ಸಾಧ್ಯವಾಗಲಿಲ್ಲ. ಭಕ್ತಜನರ ಅದರಲ್ಲಿಯೂ ವಿಶೇಷವಾಗಿ ಪ್ರಹ್ಲಾದನ ಸ್ತೋತ್ರಾವಳಿಗೆ ಅನುಗ್ರಹೀತನಾದ ನರಸಿಂಹನನ್ನು ತಾನು ಶರಣು ಹೊಂದುತ್ತೇನೆಂದು ಕೃತಿಕಾರರು ಹೇಳುತ್ತಿದ್ದಾರೆ. ನರಸಿಂಹನು ತನ್ನನ್ನು ಆಶ್ರಯಿಸಿ ಬಂದವರನ್ನು ನಿರಾನುಗ್ರಹ ತಾಳದೆ ಅನುಗ್ರಹಿಸುತ್ತಿದ್ದಾನೆ. ಪ್ರಪಂಚದಲ್ಲಿ ಅಪರಾಧ ಮಾಡದವರೇ ಯಾರೂ ಇಲ್ಲ. ಎಂದರೆ ಎಲ್ಲರ ಅಪರಾಧಗಳಿಗೂ ಯಾವು ದಾದರೂ ಕಾರಣವಿದ್ದೇ ಇರುತ್ತದೆ. ಅದಾವುದನ್ನೂ ಲೆಕ್ಕಿಸದೆ ಅವರನ್ನು ಸಂತೈಸಬಲ್ಲವನಾದ ಭಗವಂತನನ್ನು ಶರಣು ಹೊಂದಿದ್ದಾರೆ.

ರಹಸ್ಯತ್ರಯಗಳನ್ನು ಅನುಗ್ರಹಿಸಿದವನು, ಭಾಷ್ಯಗಳನ್ನು ಬರೆಯುವ ಸಂದರ್ಭದಲ್ಲಿ ತನ್ನ ಸ್ವಪ್ನದಲ್ಲಿ ರಘೂದ್ವಹರು ಪ್ರತ್ಯಕ್ಷರಾಗಲು ಕಾರಣನಾದವನು ನರಸಿಂಹನೇ ಆಗಿದ್ದಾನೆ. ತನ್ನಲ್ಲಿ ಅದ್ವಿತೀಯ ಭಕ್ತಿಯುಂಟಾಗಲು ಕಾರಣಕರ್ತನಾದವನನ್ನು ಶರಣಾಗತಿ ಹೊಂದು ತ್ತಿರುವೆನೆಂದು ಹೇಳುತ್ತಾರೆ. ಶ್ರೀನಿವಾಸ ಯತೀಂದ್ರರ ಸಾಮೀಪ್ಯದಲ್ಲಿ ವೇದಾಂತದ ಪಾಠಗಳನ್ನು ಕಲಿಯಲು ಆ ನರಸಿಂಹನೇ ಕಾರಣನಾಗಿದ್ದಾನೆ. ತನ್ನ ಸ್ವಪ್ನದಲ್ಲಿ ರಮಾವಾಸರೆಂಬ ಯತಿಗಳ ಮೂಲಕ ತಾನು ನಿಜಜೀವನದಲ್ಲಿ ತ್ರಿದಂಡ ಕಾಷಾಯಗಳನ್ನು ಪಡೆಯಲು ನರಸಿಂಹನೇ ಕಾರಣನೆಂಬುದರಿಂದ ಆತನಲ್ಲಿ ಪರಾಂಕುಶರು ಶರಣುಹೋಗಿದ್ದಾರೆ.

ಆರಾಧಿಸಲು ಇನ್ನು ಶಕ್ಯನಲ್ಲವೇನೋ ಎನ್ನುವ ಸಂದರ್ಭವೊಂದಗಿ ಭೀತರಾಗಿದ್ದ ತಮಗೆ ಆ ನರಸಿಂಹಸ್ವಾಮಿಯು ಪದ್ಮಲತಾಮುಖನಾಗಿ ಆಶ್ವಾಸನೆ ನೀಡಿದಂತೆ ಭಾಸವಾಗು ತ್ತದೆ. ಇದು ಕಾರಣವಾಗಿ ಲಕ್ಷ್ಮೀನರಸಿಂಹನಲ್ಲಿ ತಮ್ಮ ಶರಣಪ್ರಪತ್ತಿಯನ್ನು ಹೇಳುತ್ತಿದ್ದಾರೆ. ಇದರಿಂದ ತನಗೆ ಮಾತಿನ ವೈಭವವು ಪ್ರಾಪ್ತವಾಗಿ ಕಿಂಕರತೆಯನ್ನು ಹೊಂದಿದ ತಾವು ನರಸಿಂಹನನ್ನು ಸ್ತುತಿಸಲು ಸಾಧ್ಯವಾಗಿದೆಯೆಂದು ಪರಾಂಕುಶರು ವಿನಮ್ರವಾಗಿ ನಿವೇದಿಸುತ್ತಾರೆ.

# ನೃಸಿಂಹ ಮಂಗಲಂ

ನರಸಿಂಹ ಮಂತ್ರವು ಎರಡು ಪಾದಗಳಿಂದಲೂ, ಮೂವತ್ತೆರಡು ಅಕ್ಷರಗಳಿಂದಲೂ ಕೂಡಿದ್ದು, ಭಗವಂತನ ಭಕ್ತರಾದವರಿಗೆ ಸುಧಾಪಾನದಂತೆ ಅಮೂಲ್ಯವಾದ ನಿಧಿಯಂತಿದೆ. ಈ ಮಂತ್ರವನ್ನು ಅನೇಕ ರೀತಿಯಲ್ಲಿ ಪಾರಾಯಣ ಮಾಡುವ ಪದ್ಧತಿಯಿದೆ. ಆದರೆ ಇದಿಷ್ಟೇ ಅಲ್ಲದೆ, ಇದರ ಒಂದೊಂದು ಪದವನ್ನೂ ಅದರ ಅರ್ಥವಿಶೇಷವನ್ನೂ ಭಗವದ್ ಭಕ್ತರಿಗೆ ಅನುಭವಯೋಗ್ಯವಾಗುವಂತೆ ಮಾಡಿರುವ ಕೆಲವೊಂದು ಪ್ರಯತ್ನಗಳು ಗಮನಾರ್ಹವಾಗಿವೆ. ಇವುಗಳಲ್ಲಿ ಮುಖ್ಯವಾಗಿ 'ಶ್ರೀ ನೃಸಿಂಹ ಮಂಗಲ'ವೆಂಬುದು ಇಲ್ಲಿ ವಿಚಾರಯೋಗ್ಯವಾಗಿದೆ. ಇದನ್ನು ಈ ಶತಕದ ಆದಿಯಲ್ಲಿ ಶ್ರೀನಿವಾಸ ವರದಾಚಾರ್ಯರನ್ನು ಆಶ್ರಯಿಸಿದ 'ವೇದಾನ್ತದ್ವಯ' ರಲ್ಲೊಬ್ಬರಾದ ಶ್ರೀ ಜಗ್ಗೂ ವೆಂಕಟನಾಥಾರ್ಯರೆಂಬುವವರು ರಚಿಸಿರುತ್ತಾರೆ. ಅವರ ಗುರುಗಳ ಉಪದೇಶದ ಫಲವಾಗಿ ಇಂತಹುದೊಂದು ಅರ್ಥಪೂರ್ಣವಾದ ರಚನೆ ನಮಗೆ ಲಭ್ಯವಾಗಿರುತ್ತದೆ.

ದ್ವಾದಶ ಮಂಗಲ ಶ್ಲೋಕಗಳನ್ನು ಹೋಲುವ ಈ ಕೃತಿಯಲ್ಲಿ ಮೊದಲಿಗೆ ನರಸಿಂಹನು ಕಂಭದಿಂದ ಉದ್ಭವಿಸಲು ಉಂಟಾದ ಕಾರಣವನ್ನು, ಅದರ ಕಾರ್ಯವನ್ನು ತಿಳಿಸಿಕೊಟ್ಟಿರುತ್ತೆ. ಮುಂದಿನ ಹನ್ನೊಂದು ರಚನೆಗಳಲ್ಲಿ ಒಂದೊಂದು ಪದಃಪುಂಜವನ್ನು ವಿವರಿಸಲಾಗಿದೆ. ನರಸಿಂಹನು 'ಉಗ್ರ'ನಾಗಿ ತೋರಿದ್ದು ಹಿರಣ್ಯಕಶಿಪುವನ್ನು ಸ್ತಬ್ದನನ್ನಾಗಿ ಮಾಡುವ ಕಾರಣಕ್ಕಾಗಿ. ಆತನ ಕೋರೆಹಲ್ಲು, ಕರಾಳವದನ, ಚಂಚಲನಾಲಿಗೆ ಮತ್ತು ಕಣ್ಣುಗಳ ಆ ಸಂದರ್ಭದ ನೋಟ ಎಂತಹವರಿಗಾದರೂ ಭಯಂಕರವಾದದ್ದೇ ಆಗಿರುತ್ತದೆ. 'ವೀರ'ನೆಂಬ ಆತನ ವಿಶೇಷಣವು ದೈಹಿಕ ವಿಶಿಷ್ಟವಾದದ್ದು ಆಗಿದೆ. ತಪಃಶಕ್ತಿ, ದೈಹಿಕ ಶಕ್ತಿಗಳಿಂದ ವಿಜೃಂಭಿತನಾಗಿ ಯಾರಿಂದಲೂ ಕೊಲ್ಲಲಾಗದೆ ಇದ್ದ ದಾನವನನ್ನು ಕೊಲ್ಲಲು ಅರ್ಥಾತ್ ತನ್ನ ಉಗುರುಗಳಿಂದ ಸೀಳಲು ಭಗವಂತನಿಗೆ ಅಗತ್ಯವಾದ ಕಾರ್ಯವನ್ನು ಇದು ನಿರ್ದೇಶಿಸುತ್ತಿದೆ.

'ಮಹಾವಿಷ್ಣು'ವಿನ ನಾಲ್ಕನೇ ಅವತಾರವಾಗಿರುವ ನರಸಿಂಹನು ಸಕಲವನ್ನು ವ್ಯಾಪಿಸಿ ನೆಲೆಸಿರುವ, ಆಕಾಶ ಭೂಮಿ ಮತ್ತು ದಿಕ್ಕುಗಳನ್ನೆಲ್ಲ ತನ್ನ ಅವಯವಗಳಿಂದ ಆವರಿಸಿಕೊಂಡಿರುವ ಗುಣವನ್ನು ಹೊಂದಿದ್ದಾನೆ. 'ವಿಶ್' ಎಂಬುದರ ಅರ್ಥವೂ ಸಹ ಹರಡುವುದೇ ಆಗಿದೆ. 'ಜ್ವಲಂತಂ' ಎಂಬುದು ಪ್ರಕಾಶಿಸುವುದರ ಸಂಗ್ರಹರೂಪ. ಇದನ್ನು ಸೂರ್ಯ-ಚಂದ್ರರ ಕಾಂತಿಯಲ್ಲಿ, ತಾರೆಗಳ ಬೆಳಕಿನಲ್ಲಿ ನಾವು ನೋಡುತ್ತೇವೆ. ಇವೆಲ್ಲವುದಕ್ಕೆ ಕಾರಣನು ಆ ಸ್ವಾಮಿಯೇ ಆಗಿದ್ದಾನೆ. ಅರ್ಥಾತ್ ಅವನ ಕಾಂತಿಯಿಂದಲೇ ಇವೆಲ್ಲವೂ ಹೊಳೆಯುವ ತಮ್ಮ ಗುಣವನ್ನು ಧರಿಸಿವೆಯೆಂದು ಹೇಳಬಹುದು. ನರಸಿಂಹ ಮಂತ್ರದ ಮೊದಲ ಸಾಲಿನ ಕಡೆಯ ಶಬ್ದ 'ಸರ್ವತೋಮುಖ'. ದೇಶದಿಂದ, ಕಾಲದಿಂದ ಮತ್ತು ಇಂದ್ರಿಯಗಳಿಂದ ನಿಯಮಾತೀತನಾದ ಭಗವಂತನು ಎಲ್ಲವನ್ನು ವಿಶದವಾಗಿ ನೋಡುತ್ತಿದ್ದಾನೆ. ನರಸಿಂಹ ರೂಪಿಯಾದ ಆತನಿಗೆ ಕೃತಿಕಾರರು ಮಂಗಳವೆಂದು ಹೇಳಿದ್ದಾರೆ.

'ನೃಸಿಂಹ'ರೂಪವು ವಿಚಿತ್ರವಾದದ್ದು. 'ನ ಮೃಗಾಯ ನ ಮರ್ತ್ಯಾಯ' ಎಂದರೆ ಸಿಂಹವೂ ಅಲ್ಲದೆ, ನರನೂ ಅಲ್ಲದೆ ತೋರಿಬಂದ ಅವನಿಗೆ ಮಾತಾಪಿತೃಗಳೂ ಯಾರೂ ಇಲ್ಲ ವೆನ್ನಬಹುದು. ಇಂತಹ ಮಹಿಮಾಶಾಲಿಯಾದವನು ಆ ಅವತಾರಪುರುಷ. 'ಭೀಷಣ'ನೆಂದು ಆತನನ್ನು ಕರೆದಿರುವುದರಲ್ಲಿ ತನ್ನ ನಾಮಸ್ಮರಣೆಯಿಂದಾಗಲೀ, ತನ್ನನ್ನು ಕೀರ್ತಿಸುವುದರಿಂದಾಗಲೀ ಸಕಲರೋಗ ಬಾಧೆಗಳು ಪರಿಹಾರವಾಗುವುದೆಂಬುದರ ಅರ್ಥವಿದೆ. 'ಭದ್ರಂ' ಎಂಬುದು ಮಂಗಳಕರ ಎಂಬುದರ ಪರ್ಯಾಯ ರೂಪ. ಸರ್ವಮಂಗಳಮಯನಾಗಿ ಶ್ರೀದೇವಿಯೊಂದಿಗೆ ವಿರಾಜಿಸುತ್ತಿರುವ ಆತನ ಆಸರೆಯಿಂದ ಶಾಂತಿ, ಸಮಾಧಾನಗಳನ್ನು ಹೊಂದಬಹುದೆಂಬುದು ಇಲ್ಲಿನ ಆಶಯ. ತನ್ನ ಭಕ್ತನಾದ ಪ್ರಹ್ಲಾದನಿಗೆ ಒದಗಿಬಂದ ಮರಣದ ನಿವಾರಕನಾದ ಸ್ವಾಮಿಯು 'ಮೃತ್ಯುಮೃತ್ಯು'ವೇ ಆಗಿರುತ್ತಾನೆ. ಈ ರೀತಿ ಇರುವ ನರಸಿಂಹಸ್ವಾಮಿಗೆ ಮಂಗಲವನ್ನು ಹೇಳುತ್ತಿರುವುದರ ಹಿನ್ನೆಲೆಯಲ್ಲಿ ತನಗೆ ಮಂಗಳವುಂಟಾಗಲೆಂಬ ನಿವೇದನೆಯೂ ತುಂಬಿದೆ.

ಕಡೆಯಲ್ಲಿ ಬರುವ 'ನಮಾಮ್ಯಹಂ' ಎಂಬ ಪದಃಪುಂಜವು, ನೃಸಿಂಹಮಂತ್ರವನ್ನು ಭಜಿಸುವ ಆರಾಧಕನನ್ನು ಕುರಿತು ಹೇಳಿರುವುದು. ನಮ ಎಂದುಸಿರಿ ನಮಿಸುವ ಭಕ್ತನು ಭಗವಂತನ ಪಾದರೇಣು. ಇವನು ಸರ್ವಾಭೀಷ್ಟಗಳನ್ನು ಹೊಂದುವನು. 'ತದ್ದಾಸ್ಯಂ' ಎಂದರೆ ಪರಮಾತ್ಮನ ಅಡಿಯಾಳುಗಳಾಗಿ ಇರುವುದೇ ಉಚಿತವಾದದ್ದು ಎಂಬ ಹಿರಿದಾದ ಅಪೇಕ್ಷೆಯನ್ನು ಸರ್ವರಿಗೂ ಅನ್ವಯವಾಗುವಂತೆ ಹೇಳಿರುವುದು ಇಲ್ಲಿನ ಸಾರಾಂಶವಾಗಿದೆ.



## ಅಧ್ಯಾಯ - 15

# ನರಸಿಂಹ ಸಹಸ್ರನಾಮ

ಭಗವಂತನ ಆರಾಧನೆಗೆ ಮೂರು ಮಾರ್ಗಗಳು ಪ್ರಧಾನವಾಗಿವೆ. ಇವನ್ನು ಕಾಯ- ವಚನ- ಮನಸ್ಸುಗಳೆಂದು ಕರೆಯುತ್ತಾರೆ. ಶರೀರಕ್ಕೆ ಸಂಬಂಧಪಡುವ ಅವಯವಗಳ - ಕೈ ಕಾಲು, ಕಣ್ಣುಗಳು - ಮೂಲಕವಾಗಿ ಪರಮಾತ್ಮನನ್ನು ನೋಡಿ, ಪೂಜಿಸಿ, ನಮಿಸುವ ಬಗೆಯನ್ನು ಮೊದಲನೆಯ ಮಾರ್ಗದಲ್ಲಿ ಕಂಡುಕೊಳ್ಳಬಹುದು. ಇಲ್ಲಿ ಹಣ್ಣು-ಕಾಯಿ, ಹಾಲು-ಹೂಗಳು ಪ್ರಧಾನವಾಗುತ್ತವೆ. ಧನವೂ ಇದಕ್ಕೆ ಅಗತ್ಯವೆಂದು ಹೇಳಬೇಕಾದೀತು. ಅನುಕೂಲವಿಲ್ಲದ ಭಕ್ತನಿಗೆ ಈ ರೀತಿಯ ಆರಾಧನೆ ಅಸಾಧ್ಯ. ಮತ್ತೊಂದು ರೀತಿಯದು ಮಾನಸಿಕಾರಾಧನೆ. ಪ್ರಾಪಂಚಿಕವಾದ ವಿಷಯಾಸಕ್ತಿಗಳಿಂದ ನಮ್ಮ ಮನಸ್ಸನ್ನು ಒಂದೇ ನೆಲೆಯಲ್ಲಿರಿಸಬೇಕಾದರೆ ಯಮ-ನಿಯಮಾದಿಗಳ ಕಠಿಣ ಮಾರ್ಗವು ಅಗತ್ಯವಾದದ್ದು. ಈ ಮಾರ್ಗದಲ್ಲಿ ನಡೆಯುವುದು ಸಾಮಾನ್ಯ ಜನರಿಗೆ ಸಾಧ್ಯವಾಗಲಾರದು. ಆದ್ದರಿಂದ ಭಗವಂತನ ಸುಲಭೋಪಾಸನೆಯ ದಾರಿಯೆಂದರೆ ವಾಚಿಕಾರಾಧನೆ. ಮಾತು ಮಾನವನ ಅಂತರಂಗಿಕ ಶಕ್ತಿಯಾಗಿದೆ. ಮಾತೇ ಮಾಣಿಕ್ಯವೆನ್ನುತ್ತಾರೆ. ಮಾತೆಂಬುದು ಜ್ಯೋತಿರ್ಲಿಂಗ. ಇದು ಸಕಲರಿಗೂ ಅನುಗ್ರಹಿತವಾದ ವರವೆಂದೂ ಬೇಕಾದರೆ ಹೇಳಬಹುದು. ಮಾತಿನ ಸಾಮರ್ಥ್ಯದಿಂದ ಅವನವನಿಗೆ ಯೋಗ್ಯವಾದ ರೀತಿಯಲ್ಲಿ ತನ್ನ ಇಷ್ಟದೈವವನ್ನು ಆರಾಧಿಸಬಹುದು. ಶ್ರೇಷ್ಠವಾದ ವಚನಗಳ - ಎಂದರೆ ಬಾಯಿಮಾತಿನ- ಮೂಲಕವಾಗಿ ಸ್ವಾಮಿಯನ್ನು ಪೂಜಿಸಲು ನಮಗೆ ಒದಗಿಬಂದಿರುವ ಸಾಧನಗಳೇ ಸ್ತೋತ್ರ, ಅಷ್ಟೋತ್ತರ, ಸಹಸ್ರನಾಮಗಳೆಂದು ಹೇಳಬಹುದಾಗಿದೆ.

ಪ್ರಕೃತಿಯ ಶಿಶುವಾಗಿರುವ ಜೀವನವನ್ನು ಮತ್ತು ಒಡೆಯನಾದ ಪರಮಾತ್ಮನನ್ನು ಹತ್ತಿರಕ್ಕೆ ತರುವ ಹಲವಾರು ಮಾರ್ಗಗಳಲ್ಲಿ ಯೋಗವೂ ಒಂದು. ಇದಕ್ಕೆ ಹಲವು ಮುಖಗಳಿವೆ. ಭಕ್ತಿ, ಜ್ಞಾನ, ಧ್ಯಾನ, ಕರ್ಮಗಳೆಂಬ ಹಲಕೆಲವು ಹೆಸರಿನಿಂದ ಇದನ್ನು ಕರೆದಿದ್ದಾರೆ. ಇದರಲ್ಲಿ ಭಕ್ತಿಯೋಗಕ್ಕೆ ಪ್ರಾಧಾನ್ಯವಿದ್ದು ಇದನ್ನು ಶ್ರೀಕೃಷ್ಣನು ಸುಲಭ ರೂಪದಲ್ಲಿ ಬೋಧಿಸಿದ್ದಾನೆ. ಭಗವಂತನ ಮನಮೋಹಕ ರೂಪವನ್ನು ಮನಸ್ಸಿನಲ್ಲಿ ಚಿಂತಸೆ ಮಾಡುತ್ತ, ಆತನ ಅನಂತಗುಣಗಳನ್ನು ಮೆಲುಕು ಹಾಕುತ್ತ, ಜೀವಿಸುವ ಬಯಕೆಯನ್ನು

ಭಕ್ತನು ಹೊಂದಿರುತ್ತಾನೆ. ತನ್ನ ಭಕ್ತಶ್ರೇಷ್ಠನ ಮನದ ಆಸೆಯನ್ನು ನೆರವೇರಿಸಲು ಭಗವಂತನು ಅನೇಕ ಲೀಲಾವತಾರಗಳನ್ನೆತ್ತುತ್ತಾನೆ. ಆತನ ಈ ಲೀಲೆಗಳನ್ನು ನಮ್ಮ ಮುಂದೆ ತರುವ ಮಾರ್ಗಗಳಾಗಿ ಸಹಸ್ರನಾಮಗಳೇ ಮುಂತಾದವು ಪ್ರಮುಖಪಾತ್ರವನ್ನು ನಿರ್ವಹಿಸುತ್ತವೆ. ಒಟ್ಟಿನಲ್ಲಿ ಪರಮಾತ್ಮನ ಸುಗುಣ-ನಿರ್ಗುಣಗಳ ವಿಶೇಷ ವರ್ಣನೆಯನ್ನು 'ಸಹಸ್ರನಾಮ'ವೆಂದು ಕರೆಯಬಹುದು.

'ವಿಷ್ಣು ಸಹಸ್ರನಾಮ', 'ಲಲಿತಾ ಸಹಸ್ರನಾಮ', 'ಶಿವ ಸಹಸ್ರನಾಮ' ಇವುಗಳನ್ನು ಪ್ರತಿನಿತ್ಯ ಪಠಿಸುವುದು, ಅದರ ಮೂಲಕವಾಗಿ ಭಗವಂತನ ಧ್ಯಾನ ಮಾಡುವುದು ಪರಂಪರಾಗತವಾಗಿ ಬಂದಿರುವ ನಮ್ಮ ಪೂಜಾಪದ್ಧತಿಯ ಅಂಗವಾಗಿದೆ. 'ನರಸಿಂಹ ಸಹಸ್ರನಾಮ'ವೂ ಇವುಗಳ ಸಾಲಿಗೇ ಸೇರುತ್ತದೆ. ಈ ನಾಮಾವಳಿಯು ಅರ್ಚನಾವೃತ್ತಿಯಲ್ಲಿ ಪ್ರಮುಖ ಸ್ಥಾನ ಪಡೆದಿದೆ. ಭಗವಂತನನ್ನು ಸ್ಮರಿಸಲು ಕೋಟಿನಾಮಗಳಿದ್ದರೂ ಸಾಕಾಗುವುದಿಲ್ಲವೆಂಬ ಪರಿಸ್ಥಿತಿಯಲ್ಲಿ ಸಹಸ್ರನಾಮಗಳನ್ನು ಉಚ್ಚರಿಸಿ ಆತನ ಮಹಿಮೆಗಳನ್ನು ಹೊಗಳುತ್ತಿದ್ದೇವೆ. ಸ್ವಲ್ಪಮಟ್ಟಿನ ಸಮಾಧಾನ, ಸಂತೃಪ್ತಿಗಳನ್ನು ಹೊಂದುತ್ತಲಿದ್ದೇವೆ. ಸಹಸ್ರ, ಸಾವಿರ, ಸಾಸಿರ ಸಂಖ್ಯೆಯು ನಮ್ಮ ಅಳತೆಗೆ ಒಳಪಡುವುದಾದ್ದರಿಂದ ಇದನ್ನು ತಕ್ಕಮಟ್ಟಿಗೆ ಜನಪ್ರಿಯಗೊಳಿಸಿಕೊಂಡಿರುತ್ತೇವೆ. 'ಸಹಸ್ರಶೀರ್ಷ ಪುರುಷಃ' ಎಂಬುದು ವೇದೋಕ್ತ ಸೂಕ್ತಿಯಾಗಿಯೂ ಇರುವುದಾಗಿದೆ. ಸಾವಿರವೆಂಬುದು ಲೆಕ್ಕಾಚಾರದಲ್ಲಿ ಕಡಮೆಯೇನಲ್ಲ. ಗಣನೆಯಲ್ಲಿ ಅಗಣಿತ ಎಂಬುದನ್ನು ಇದರ ಬಗ್ಗೆ ಹೇಳಬೇಕಾಗುತ್ತದೆ.

ಭಗವಂತನ ಗುಣ, ಲೀಲೆ, ಧರ್ಮಗಳನ್ನು ಪುರಾಣೇತಿಹಾಸಗಳಲ್ಲಿ ವಿವಿಧ ರೀತಿಗಳಲ್ಲಿ ವರ್ಣಿಸಲಾಗಿದೆ. ಅಷ್ಟೋತ್ತರ ಶತನಾಮ, ಸಹಸ್ರನಾಮಗಳೆಂಬುದು ಇವುಗಳಲ್ಲಿ ಪ್ರಮುಖ ಪ್ರಭೇದಗಳೆಂದು ಹೇಳಬಹುದು. ಇವನ್ನು ಶ್ಲೋಕರೂಪದಲ್ಲೂ, ಬಿಡಿಬಿಡಿ ಯಾಗಿಯೂ ಪಾರಾಯಣ ಮಾಡಲು ಅವಕಾಶವಿದೆ. ಪೂಜೆಯ ಮೂಲಕವಾಗಿ ಇದನ್ನು ನಿವೇದಿಸುವುದು ಹೆಚ್ಚಿನ ಫಲಪ್ರಾಪ್ತಿಗಾಗಿ ಆರಾಧಕನು ಅನುಸರಿಸುತ್ತಿರುವ ಸುಲಭವಾದ ವಾಚಿಕ ವಿಧಾನವೆಂದೆನ್ನಬಹುದು.

ನರಸಿಂಹಸ್ವಾಮಿಯಲ್ಲಿ ಶಾಂತ, ಉಗ್ರಸ್ವಭಾವಗಳೆರಡರ ಸಮ್ಮಿಲನವಿದೆ. ಇದನ್ನು ಕ್ರೌರ್ಯ, ವಾತ್ಸಲ್ಯಗಳೆಂಬ ಹೆಸರಿನಿಂದಲೂ ಕರೆಯಬಹುದಾಗಿದೆ. ಹಿರಣ್ಯಕಶ್ಯಪನನ್ನು ಸಂಹಾರ ಮಾಡುವುದಕ್ಕೆ ಆತನಿಗೆ ಶೌರ್ಯ-ವೀರ್ಯಗಳಿಂದ ಕೂಡಿದ ಕ್ರೌರ್ಯವು ಅಗತ್ಯವಾಗಿತ್ತು. ದ್ವೇಷ, ಸ್ವಾರ್ಥ, ದುರಹಂಕಾರದ ಸಾಕಾರಮೂರ್ತಿಯನ್ನು ದಮನ ಮಾಡುವ ಕ್ರಿಯೆಯ ಹಿನ್ನೆಲೆಯಲ್ಲಿ ಉಗ್ರಸ್ವಭಾವವು ಅಡಗಿ ಕುಳಿತಿರುವುದು. ಭಾಗವತೋತ್ತಮಮೂ ಪರಮಶಾಂತ ಮೃದುಹೃದಯನಾದ ಪ್ರಹ್ಲಾದನ ಅನುಗ್ರಹಕ್ಕೆ ಕರುಣೆಯಿಂದ ಕೂಡಿದ ವಾತ್ಸಲ್ಯವು ಕಾರಣವಾಯಿತೆಂದು ಹೇಳಬೇಕು. ನರಸಿಂಹನು ನಿಗ್ರಹಾನುಗ್ರಹಗಳನ್ನು ದುಷ್ಟಶಿಷ್ಟರಿಗೆ ಮಾಡಲೋಸುಗ ಅವತಾರ ತಾಳಿಬಂದವನಾಗಿರುತ್ತಾನೆ. ಲೋಕಕಂಟಕನಾದ ರಾಕ್ಷಸನನ್ನು ಸಂಹರಿಸಿದ ಬಳಿಕ ಆತನ ಕಾರ್ಯದಿಂದ ಸಂತುಷ್ಟನಾದ

ಬ್ರಹ್ಮದೇವನು ಸ್ವಾಮಿಯನ್ನು ಸ್ತೋತ್ರಮಾಡಿರುತ್ತಾನೆ. ಸಹಸ್ರನಾಮವೆಂದು ಜನಪ್ರಿಯವಾದ ಇದು ಆಸ್ತಿಕರ ಪಾಲಿಗೆ ಅಮೂಲ್ಯವಾದ ಸಂಪತ್ತಿನಂತಿದೆ.

ನರಸಿಂಹ ಸಹಸ್ರನಾಮದಲ್ಲಿ ಎರಡು ಸಾಲಿನ (ದ್ವಿಪದ) ಸುಮಾರು ೧೬೭ ಪದ್ಯಗಳಿವೆ. ಈ ಪದ್ಯಗಳ ರಚನೆ ಸರಳವೂ ಸುಂದರವೂ ಆಗಿರುವುದೆಂದು ಹೇಳಬಹುದು. ಬಾಯಿಪಾಠಕ್ಕೆ ಅನುಕೂಲವಾಗಿ, ಮನನ ಮಾಡಿಕೊಳ್ಳಲು ಸುಲಭವಾಗಿ ಇದನ್ನು ಅಳವಡಿಸಲಾಗಿದೆ. ಪದ್ಯದ ಬಂಧಕ್ಕೆ ಅನುಗುಣವಾದ ಪದಮೈತ್ರಿಯನ್ನು ಲಾಲಿತ್ಯವನ್ನು ನಾವಿಲ್ಲಿ ಕಾಣಬಹುದಾಗಿದೆ. ಕವಿಹೃದಯದಿಂದ ಕೂಡಿದವರ ಸಂಯೋಜನೆಯೆಂದು ಬೇಕಾದರೂ ಕರೆಯಬಹುದು. ಹೊರನೋಟಕ್ಕೆ ಶಬ್ದಚಮತ್ಕಾರದಂತೆ ಕಂಡುಬರುತ್ತಿರುವುದಾದರೂ ಆಂತರ್ಯದಲ್ಲಿ ವಿಶೇಷವಾದ ಅರ್ಥಕಾಂತಿಗಳನ್ನು ಮೇಳವಿಸಿಕೊಂಡಿರುವ ನಾಮಾವಳಿಯನ್ನು ಜಪಿಸುವವರು ಜನ್ಮವ್ಯಾಧಿ, ಜರಾಮರಣಗಳನ್ನು ದೂರಮಾಡಿಕೊಂಡು ನೆಮ್ಮದಿಯಿಂದ ಜೀವಿಸಬಲ್ಲರು.

'ಓಂ ನಮೋ ನರಸಿಂಹಾಯ' ಎಂದು ಆರಂಭವಾಗುವ ನರಸಿಂಹ ಸಹಸ್ರನಾಮವು 'ನಮೋ ನಮಸ್ತೇ ನರಸಿಂಹರೂಪ' ಎಂಬುದರಿಂದ ಕೊನೆಯಾಗುತ್ತದೆ. ಮೊದಲನೆಯದಾದ ನರಸಿಂಹ ನಾಮವನ್ನು ಉಗ್ರ ನರಸಿಂಹನನ್ನು ಉದ್ದೇಶಿಸಿ ಹೇಳುವಂತೆ ಕಂಡುಬರುವುದಾದರೆ, ಕಡೆಯ ನರಸಿಂಹ ನಾಮದಲ್ಲಿ ಶಾಂತನಾದ ನರಸಿಂಹನನ್ನು ಸಂಬೋಧಿಸುವಂತಿರುವ ಧ್ವನಿಯನ್ನು ಕಾಣಬಹುದು. ಉಗ್ರಸ್ವಭಾವದಿಂದ ಕೂಡಿದ ಸ್ವಾಮಿಯನ್ನು ಶಾಂತಚಿತ್ತನಾಗುವಂತೆ ಪರಿವರ್ತಿಸುವ ಕಾರ್ಯದಲ್ಲಿ ಬ್ರಹ್ಮದೇವನು ನಿರ್ವಹಿಸಿದ ಪಾತ್ರವು ಮಹತ್ವದ್ದಾಗಿ, ಪರಿಣಾಮಕಾರಿಯಾಗಿರುವುದನ್ನು ಇಲ್ಲಿನ ನಾಮವಿಶೇಷಗಳು ನಿರ್ದೇಶಿಸುತ್ತವೆ. ಇದರ ಕಾರಣದಿಂದಾಗಿಯೇ ಕರುಣಾಳುವಾದ ಭಗವಂತನು ತನ್ನ ಉಗ್ರರೂಪವನ್ನು ಉಪಸಂಹರಿಸಿದ ಎಂಬುದಾಗಿ ತಿಳಿಯಬಹುದು.

ನರಸಿಂಹನ ರೂಪ, ಗುಣ, ಕ್ರಿಯೆಗಳಿಗೆ ಹೊಂದಿಕೊಳ್ಳುವಂತಹ ಹೆಸರುಗಳ ವಿವಿಧ ಬಗೆಗಳನ್ನು ಸಹಸ್ರನಾಮದಲ್ಲಿ ಕಾಣುತ್ತೇವೆ. ಉದಾಹರಣೆಗೆ ನೋಡುವುದಾದರೆ ಆತನ ವರದ ಸ್ವಭಾವವು ವರದಾಯ, ವರಾಯ, ವರೇಣ್ಯ ವರರೂಪಿಣೆ, ವರಿಷ್ಠ, ಪ್ರಹ್ಲಾದವರದ, ಪ್ರತ್ಯಕ್ಷವರದ, ವರದಾಭಯಹಸ್ತ ಮೊದಲಾದ ರೂಪಗಳ ಮೂಲಕ ಗೋಚರಿಸುತ್ತವೆ. ಸರ್ವಕ್ಕೂ ಒಡೆಯನಾದ ಈತನನ್ನು ಸರ್ವಭೂತಾತ್ಮ, ಸರ್ವಾರಿಷ್ಟವಿನಾಶ, ಸರ್ವಸಂಪತ್ಕರ ಸರ್ವಾಧಾರ, ಸರ್ವಾಧಿಹರ, ಸರ್ವದುಃಖಪ್ರಶಾಂತ, ಸರ್ವಸೌಭಾಗ್ಯಧಾಮ, ಸರ್ವಶಕ್ತಿಧರ, ಸರ್ವೈಶ್ವರ ಪ್ರದಾತ್ರ, ಸರ್ವಕಾರ್ಯ ವಿಧಾಯ, ಸರ್ವಜ್ವರವಿನಾಶ, ಸರ್ವರೋಗಾಪಹರ ಸರ್ವೋತ್ಪಾತನಿಘಾತವೆಂಬಂತಹ ಹತ್ತಾರು ರೂಪಗಳಿಂದ ಕಂಡುಕೊಳ್ಳಬಹುದಾಗಿರುತ್ತದೆ. ಬ್ರಹ್ಮರೂಪದಿಂದ ಶಬ್ದಬ್ರಹ್ಮಸ್ವರೂಪ, ಬ್ರಹ್ಮರೂಪಧರ, ಬ್ರಹ್ಮಣೇ, ಬ್ರಹ್ಮರೂಪ, ಬ್ರಹ್ಮನೇತ್ರ ಬ್ರಹ್ಮದಯ, ಬ್ರಾಹ್ಮಣ, ಬ್ರಹ್ಮಾತ್ಮ, ಸುಬ್ರಹ್ಮಣ್ಯ ಪರಬ್ರಹ್ಮಸ್ವರೂಪ, ಪಂಚಬ್ರಹ್ಮತ, ಬ್ರಹ್ಮಶಿರಸೇ ಇತ್ಯಾದಿ ನಾಮಗಳು ಸಿದ್ಧಗೊಂಡಿವೆ. ಮಹಾ

ಎಂಬುದರಿಂದ ಮಹಾಪೂರ, ಮಹಾವಕ್ತ್ರ ಮಹಾದಂಷ್ಟ್ರ, ಮಹಾಭುಜ, ಮಹಾರೌದ್ರ, ಮಹಾನಂದ, ಮಹಾಕಾಯ, ಮಹಾಬಲಿವೆಂಬ ಹೆಸರುಗಳನ್ನು ಸಾಧಿಸಲಾಗಿದೆ.

ಸಿಂಹರೂಪಕ್ಕೆ ಸಂಬಂಧಿಸಿದ ಹೆಸರುಗಳು ಸಹಸ್ರನಾಮಾವಳಿಯಲ್ಲಿ ಸಾಕಷ್ಟು ಸಂಖ್ಯೆಯಲ್ಲಿವೆ. ನರಸಿಂಹ, ವೀರಸಿಂಹ, ದಿವ್ಯಸಿಂಹ, ವ್ಯಾಘ್ರಸಿಂಹ, ಪುಚ್ಛಸಿಂಹ, ಪೂರ್ಣಸಿಂಹ, ರೌದ್ರ ಸಿಂಹ, ದೈತ್ಯಸಿಂಹ ಮುಂತಾದವು. ಇವುಗಳ ಹಿಂದೆ ನಾರಾಯಣ ನಾಮವನ್ನು ಸೇರಿಸಿ ಹೇಳುವಾಗ ಇದರ ಘನತೆ ಮತ್ತಷ್ಟು ಹೆಚ್ಚುತ್ತದೆ. ಭೀಷಣಭದ್ರಸಿಂಹ, ವಿಹ್ವಲಿನೇತ್ರಸಿಂಹ, ಭೂಹತಭೂತಸಿಂಹ, ನಿರ್ಮಲಚಿತ್ರಸಿಂಹ, ನಿರ್ಜಿತಕಾಲಿಸಿಂಹ, ಕಲ್ಪಿತಕಲ್ಪಿಸಿಂಹಗಳೆಂಬ ರೂಪಗಳಲ್ಲಿ ಆತನ ಗುಣ- ಸ್ವಭಾವಗಳ ನಿದರ್ಶನವಿದೆ. ಇದಿಷ್ಟೇ ಅಲ್ಲದೆ ಚಂಡಸಿಂಹ, ಸತ್ಯಸಿಂಹ, ಶ್ವೇತಸಿಂಹ, ಪೀತಸಿಂಹ, ನೀಲಿಸಿಂಹ, ರಕ್ತಸಿಂಹ, ಅದಾರಿದ್ರಸಿಂಹ, ಧೂಮ್ರಸಿಂಹ, ಮೂಲಿಸಿಂಹ, ಬೃಹತ್ಸಿಂಹ, ಪಾತಾಲಸ್ಥಿತಸಿಂಹ, ಪರ್ವತವಾಸಿಸಿಂಹ, ಜಲಿಸ್ಥಸಿಂಹ, ಅಂತರಿಕ್ಷಸ್ಥಿತಸಿಂಹ, ಕಾಲಾಗ್ನಿರುದ್ರಸಿಂಹ, ಚಂಡಸಿಂಹ, ಅನಂತಜಿತಸಿಂಹ, ವಿಚಿತ್ರಸಿಂಹ, ಅಭಯಂಕರಸಿಂಹಗಳೆಂಬ 'ಬಹುಸಿಂಹರೂಪ' ಗಳಿಂದ ಭಗವಂತನ ರೂಪವೈವಿಧ್ಯವು ಸಹಸ್ರನಾಮಸ್ತೋತ್ರದಲ್ಲಿ ಅಂತರ್ಗತವಾಗಿದೆ. ಭಕ್ತರ ಮನಗಳಲ್ಲಿ ಪ್ರಕಟಗೊಳ್ಳುವಂತಿದೆ.

ಸಹಸ್ರನಾಮದಲ್ಲಿನ ರೂಪಗಳಿಗೆ ವಿಶಿಷ್ಟವಾದ ಅರ್ಥವೂ ಇರುವುದನ್ನು ಕೆಲವು ಉದಾಹರಣೆಗಳ ಮೂಲಕ ತಿಳಿದುಕೊಳ್ಳಬಹುದಾಗಿದೆ. ಮಹಾದಂಷ್ಟ್ರನೆಂಬುದು ಶಕ್ತಿಯುತ ವಾದ ಕೋರೆಹಲ್ಲುಗಳನ್ನು ಹೊಂದಿದವರಿಗೆ ಸಾಮಾನ್ಯವಾಗಿ ಅನ್ವಯವಾಗುತ್ತದೆ. ಆದರೆ ಇಲ್ಲಿ ಇದು ವಿಷ್ಣುವಿನ ವರಾಹವತಾರದ ಪ್ರಸಂಗವನ್ನು ಮನಕ್ಕೆ ತರಿಸುತ್ತದೆ. ವರಾಹ-ನರಸಿಂಹರ ಅವತಾರ ಗಳೆರಡಕ್ಕೂ ಸಂಬಂಧವಿರುವುದು ಮನನೀಯವಾದದ್ದು. ರಣಸಿಂಹನೆಂಬ ರೂಪದಿಂದ ಸಮರವೀರನೊಬ್ಬನನ್ನು ಕಲ್ಪಿಸಿಕೊಳ್ಳಬಹುದು. ಮನಸ್ಸು ಬುದ್ಧಿಗಳ ದ್ವಂದ್ವಯುದ್ಧದ ಕಲ್ಪನೆಯೂ ಇದರಿಂದ ಭಾಸವಾಗಬಹುದು. ಇವು ಒಂದೆರಡು ತುಣುಕುಗಳಷ್ಟೆ. ಈ ರೀತಿಯೂ ಇನ್ನೆಷ್ಟೋ ಅರ್ಥಪರಿಪಾಕವುಳ್ಳ ತರಂಗಗಳನ್ನು ಭಗವಂತನ ಸ್ತೋತ್ರಪ್ರವಾಹದಲ್ಲಿ ಕಾಣಲು ಸಾಧ್ಯ.

ಅನಾದಿಕಾಲದಿಂದಲೂ ಆರ್ಯಾವರ್ತದಲ್ಲಿ ಪ್ರಚಲಿತವಾಗಿರುವ ನರಸಿಂಹ ಸಹಸ್ರನಾಮ ಸ್ತೋತ್ರವನ್ನು ಭಕ್ತರು ಉಪಾಸನೆ ಮಾಡಿಕೊಂಡು ಬಂದಿರುತ್ತಾರೆ. ತಮ್ಮ ಆರಾಧ್ಯಸ್ವಾಮಿಯಾದ ವನ ಒಂದೊಂದು ಗುಣವೂ ಇದರಲ್ಲಿ ಪ್ರತಿಧ್ವನಿಸುತ್ತಿರುವುದನ್ನು ಕಂಡುಕೊಂಡಿದ್ದಾರೆ. ಅನನ್ಯ ಭಕ್ತಿಯಿಂದ ತಮ್ಮ ಕ್ರೌರ್ಯ ಸ್ವಭಾವಗಳನ್ನು ಹೋಗಲಾಡಿಸಿ ಕೊಂಡು ಪ್ರಸನ್ನತೆಯನ್ನು ಪ್ರಸಾದಿಸುವ ಲಕ್ಷ್ಮೀನರಸಿಂಹಸ್ವಾಮಿಗೆ ಈ ಸ್ತೋತ್ರವಾಹಿನಿಯ ಮೂಲಕ ಪೂಜಾದಿಗಳನ್ನು ಸಲ್ಲಿಸುತ್ತಿದ್ದಾರೆ.



# ಅಧ್ಯಾಯ - 16

# ಸುಪ್ರಭಾತ

ಪರಮಾತ್ಮನ ಪಂಚರೂಪಗಳು ಪ್ರಸಿದ್ಧವಾದದ್ದು. ಇವುಗಳನ್ನು ವೈಕುಂಠದಲ್ಲಿ 'ಪರ'ರೂಪವೆಂದೂ, ಕ್ಷೀರಸಾಗರದಲ್ಲಿ 'ವ್ಯೂಹ' ರೂಪವೆಂದೂ, ಅವತಾರಗಳಲ್ಲಿ 'ವಿಭವ' ರೂಪವೆಂದೂ, ದೇವಾಲಯಗಳಲ್ಲಿ 'ಅರ್ಚಾ' ರೂಪವೆಂದೂ, ಒಬ್ಬೊಬ್ಬರ ಹೃದಯದಲ್ಲೂ 'ಅಂತರ್ಯಾಮಿ' ರೂಪವೆಂದೂ ವಿವರಿಸಲಾಗುತ್ತಿದೆ. ದಯಾಮಯನಾದ ನಿರಾಕಾರನಾದ ಭಗವಂತನು ನಮ್ಮನ್ನು ಅನುಗ್ರಹಿಸಲು ಸಾಕಾರನಾಗಿದ್ದಾನೆ. ಈತನನ್ನು ದೇವಾಲಯಗಳಲ್ಲಿ ವಿವಿಧ ರೂಪಗಳಲ್ಲಿ ಆರಾಧಿಸುತ್ತಿದ್ದೇವೆ. ಪೂಜಿಸಿ, ಅರ್ಚಿಸಿ, ಸ್ತುತಿಸಿ, ಹಾಡಿ ಆತನನ್ನು ಒಲಿಸಿಕೊಳ್ಳುತ್ತಿದ್ದೇವೆ. ಕೃತಾರ್ಥರಾಗಲು ಹಂಬಲಿಸುತ್ತಿದ್ದೇವೆ.

ಭಗವಂತನ ಆರಾಧನೆಯನ್ನು ಪ್ರಿಯವಾದ ಪೂಜಾಸಾಮಗ್ರಿಗಳಿಂದ ಮಾಡುವುದು ಒಂದು ಬಗೆಯಾದರೆ, ಮಧುರವಾದ ನುಡಿಗಳಿಂದ ಸುಂದರವಾದ ಪದರಚನೆಗಳಿಂದ ಪ್ರಾರ್ಥಿಸುವುದು ಮತ್ತೊಂದು ತೆರನಾದದ್ದು. ವೇದಗಳಲ್ಲಿ ಸಹ ಅನೇಕ ಸೂಕ್ತಿಗಳು ದೊರೆಯುತ್ತಿವೆ. ಪ್ರಾಚೀನರಾದ ಆಳ್ವಾರರು-ಆಚಾರ್ಯರು, ಮಠಾಧಿಪತಿಗಳೆಲ್ಲರೂ ಈತನ ಕೃಪೆಯನ್ನು ಯಾಚಿಸಿ ನಾನಾ ತೆರನಾದ ಸಾಹಿತ್ಯವನ್ನು ಸೃಷ್ಟಿಸಿದ್ದಾರೆ. ಶ್ರೀಸೂಕ್ತ-ಪುರುಷಸೂಕ್ತಗಳು, ರುದ್ರ-ಚಮಕಗಳು, ಅಷ್ಟೋತ್ತರ-ಸಹಸ್ರನಾಮಾವಳಿಗಳ ಮೂಲಕವಾಗಿ ಈತನನ್ನು ಬೇಡಿಕೊಳ್ಳಲಾಗಿದೆ. ಈ ಸಾಲಿಗೆ ಸೇರುವ 'ಸುಪ್ರಭಾತ'ವು ಸಹ ವಿಶಿಷ್ಟ ಬಗೆಯ ರಚನೆಯಾಗಿರುತ್ತದೆ.

'ಸುಪ್ರಭಾತ'ವು ಸಮಾಧಿಸ್ಥಿತಿಯಿಂದ ಜಾಗೃದವಸ್ಥೆಗೆ ಮರಳಿಸುವ ಮಂತ್ರಸಾಹಿತ್ಯದಂತೆ ಕಂಡುಬರುವುದಾಗಿದೆ. ಇದರ ಆದಿಯನ್ನು ಹುಡುಕುವುದಕ್ಕಿಂತಲೂ ಇಂದು ಇದರ ವ್ಯಾಪಕತೆಯನ್ನು ಅರಿತುಕೊಂಡಲ್ಲಿ ಈ 'ಉತ್ತಿಷ್ಠಗೀತ'ದ ಪ್ರಾಮುಖ್ಯತೆ ಮತ್ತು ಮಹತ್ವಗಳನ್ನು ತಿಳಿದು ಕೊಂಡಂತಾಗುತ್ತದೆ. ಜಗತ್ತಿನ ಬೆಳಕು ಉದಯಿಸುತ್ತಿರುವಂತೆ ಪೂಜಾಸ್ಥಳಗಳಲ್ಲಿ, ಪ್ರಾರ್ಥನಾ ಮಂದಿರಗಳಲ್ಲಿ ಸುಪ್ರಭಾತದ ಕಹಳೆಯ ಕೂಗು ಕೇಳುತ್ತದೆ. ಧರ್ಮ ಕಾರ್ಯಗಳಿಗೊಂದು ಚಾಲನೆ ದೊರೆಯುತ್ತದೆ: ಪೂಜಾಕಲ್ಪದ ಆರಂಭಕ್ಕೆ ಚಾಲನೆ ದೊರೆಯುತ್ತದೆ.

ತಿರುಮಲೆಯ ವೆಂಕಟೇಶನ ಆರಾಧನೆಯು ಪ್ರಭಾವಯುತವಾಗಿ ಬೆಳೆದ ಹಾಗೆ ಪೂಜಾಕ್ರಿಯೆಗಳಿಗೊಂದು ವಿಶೇಷ ಮನ್ನಣೆ ದೊರೆಯಿತು. ಸೇವಾ ಕೈಂಕರ್ಯಗಳು ಹೆಚ್ಚಾದವು. 'ಸುಪ್ರಭಾತ' ಸೇವೆಗೊಂದು ಮಹತ್ವ ದೊರೆಯಿತು. ಇದರ ಕಾಲದ ಗಡುವನ್ನು ನಿರ್ಧರಿಸಲು ಹೊರಡುವುದಕ್ಕಿಂತ ಈ ಪ್ರಕ್ರಿಯೆಯು ಬಹುಪಾಲು ದೇವಾಲಯಗಳಲ್ಲಿ ಹರಡಿಕೊಂಡ ಕುರುಹಾಗಿ ಜನಮನವನ್ನು ಸೂರೆಗೊಂಡ ನೂರಾರು ದೇವಾಲಯಗಳಲ್ಲಿ ಇಂದು 'ಸುಪ್ರಭಾತ'ದ ದನಿ ಮೊಳಗುತ್ತಿದೆ.

ತಿರುಮಲೆಯ ವೆಂಕಟೇಶ, ಧರ್ಮಸ್ಥಳದ ಮಂಜುನಾಥ, ಕೊಲ್ಲೂರು ಮೂಕಾಂಬಿಕೆ ಮೊದಲಾದ ಮಹತ್ತ್ವವಾದ ದೇವರುಗಳನ್ನು ಮಾತ್ರವಲ್ಲದೆ ಬಾಹುಬಲಿಯನ್ನು ಸಹ ಇಂದು ಸುಪ್ರಭಾತದ ಮೂಲಕ ಸ್ತುತಿಸುತ್ತಿದ್ದೇವೆ. ಇದರೊಂದಿಗೆ ರಾಘವೇಂದ್ರಸ್ವಾಮಿಗಳು, ಶಿರಡಿ ಸಾಯಿಬಾಬ ಇವರುಗಳ ಸುಪ್ರಭಾತವೂ ಕೇಳಿಬರುತ್ತಿದೆ. ಅವತಾರಗಳಲ್ಲಿ ನಾಲ್ಕನೆಯದಾದ, ಮಹತ್ತ್ವಪೂರ್ಣವಾದ ವಿಭವರೂಪವಾಗಿರುವ ನರಸಿಂಹಸ್ವಾಮಿಯನ್ನು ಕುರಿತ ಸುಪ್ರಭಾತಗಳನ್ನು ಈ ಸಂದರ್ಭದಲ್ಲಿ ಗಮನಿಸಬಹುದು. ಅಹೋಬಿಲ, ದೇವರಾಯನದುರ್ಗ, ತೊರವಿ, ಯಾದಗಿರಿ, ಸಿಂಹಾಚಲ ಮೊದಲಾದ ಪ್ರಸಿದ್ಧ ಸ್ಥಳಗಳಲ್ಲಿ ನೆಲೆಸಿರುವ ನರಸಿಂಹನನ್ನು ಸುಪ್ರಭಾತಸಾಹಿತ್ಯದ ಮೂಲಕವಾಗಿ ಯತಿವರೇಣ್ಯರು, ವಿದ್ವಾಂಸರು ವರ್ಣಿಸಿದ್ದಾರೆ.

## ವಿಶಿಷ್ಟ ರಚನೆ

ಶ್ರೀನಿವಾಸ ಯತೀಂದ್ರರು ರಚಿಸಿದ ಶ್ರೀಲಕ್ಷ್ಮಿ ನೃಸಿಂಹ ಸುಪ್ರಭಾತವನ್ನು ಉದಾಹರಣೆಗಾಗಿ ಇಲ್ಲಿ ಗಮನಿಸಬಹುದು. 'ಕೌಸಲ್ಯಾ ಸುಪ್ರಜಾ ರಾಮ' ಎಂದು ಆರಂಭ ಮಾಡಿ ತಮ್ಮ ಗುರುಗಳಾದ ರಾಮಾನುಜರನ್ನು ಸ್ಮರಿಸಿ ಸಾಗುವ ಕೃತಿಕಾರರು 'ಜಯತಾಂ ಶ್ರೀನಿವಾಸೋ ಯತೀಂದ್ರಃ' ಎಂಬುದಾಗಿ ತಮ್ಮ ವ್ಯಕ್ತಿತ್ವವನ್ನು ಮೆರೆದಿದ್ದಾರೆ.

ಈ ಕೃತಿಯ ಆರಂಭದ ನಾಲ್ಕು ಪದ್ಯಗಳಲ್ಲಿ ಮಹಾತಾಯಿಯಾದ ಲಕ್ಷ್ಮಿಯನ್ನು ಕುರಿತ ವಿವರಣೆಯಿದೆ. ಅರುಣಾಬ್ಜಲೋಚನೆಯಾದ ತರುಣೇಂದು ಬಿಂಬದಂತೆ ಕಾಣುವ, ಶರಣಾಗತರನ್ನು ರಕ್ಷಿಸುವವಳಾದ ಈಕೆಯು ಕರುಣಾರಸೌಘದಂತೆ ಕಂಡುಬರುತ್ತಿದ್ದಾಳೆ. ಅಮರೇಂದ್ರ ಸುಂದರಿಯಂತಿರುವ ಈಕೆಯ ಕರಪಲ್ಲವಗಳು ಶೋಭಾಯಮನವಾಗಿದೆ. ಕನಕಕುಂಡಲಗಳಿಂದ ಈಕೆಯ ಕಾಂತಿಯು ಪ್ರವರ್ಧಿಸುತ್ತಿದೆ. ಅಮರಾರಿ ವಲ್ಲಭೆಯಾದ ಲಕ್ಷ್ಮಿದೇವಿಯು ಸ್ವರಸೀರುಹದಲ್ಲಿ ತನ್ನ ವಲ್ಲಭನ ತೊಡೆಯ ಮೇಲೆ ವಿರಾಜಿಸುತ್ತಿದ್ದಾಳೆ. ತನ್ನ ಕರಪಲ್ಲವಗಳಲ್ಲಿ ಜಲಜಕುಟ್ಮಲಗಳನ್ನು ಹಿಡಿದು ಕೋಟಿ ಸೂರ್ಯಕಿರಣ ಪ್ರಕಾಶಿತಳಾಗಿದ್ದಾಳೆ. ಕುರುವಿಂದ ಮಾಲಿಕಾಧರಳಾಗಿರುತ್ತಾಳೆ. ಆರ್ತಜನರ ದುಃಖನಿವಾರಣೆ ಮಾಡುತ್ತಿರುವ ಈಕೆಯು ಶರಣಾಗತರಾದವರಿಗೆ ಅಭಯಪ್ರದಾನವನ್ನು ಮಾಡುತ್ತಿದ್ದಾಳೆ.

'ಲಕ್ಷ್ಮೀನರಸಿಂಹ ಸುಪ್ರಭಾತ' ದಲ್ಲಿನ ಮುಂದಿನ ಏಳು ಪದ್ಯಗಳು 'ಲಕ್ಷ್ಮೀನೃಕೇಸರಿ ವಿಭೋ ತವಸುಪ್ರಭಾತಂ' ಎಂದು ಕಡೆಯಾಗುತ್ತವೆ. ಚತುರ್ಮುಖ ಬ್ರಹ್ಮ, ಪುರಂದರ ನಾಮಖ್ಯಾತನಾದ ದೇವೇಂದ್ರ, ಶಂಕರ, ಸಿದ್ಧ ಸನಾತನ ಸನಂದನ ನಾರದಾದಿಗಳು ತಮ್ಮ ಕರಗಳಲ್ಲಿ ವಿವಿಧ ಬಗೆಯ ಪುಷ್ಪಗಳನ್ನು ಹಿಡಿದು ನೃಸಿಂಹನನ್ನು ಅರ್ಚಿಸುತ್ತಿರುತ್ತಾರೆ. ದಿವಾಕರನಂತೆ ಈತನು ಪ್ರಕಾಶಿಸುತ್ತಿದ್ದಾನೆ. ತನ್ನ ದಿವ್ಯವಾದ ಸಹಸ್ರ ಕರಗಳಿಂದ ಭೂಷಿತನಾಗಿ ತನ್ನೆರೆಡು ಪಾದಗಳನ್ನು ಸಹಸ್ರಪಾದಗಳಂತೆ ಎಲ್ಲ ದಿಕ್ಕುಗಳಿಗೆ ಹರಡಿದ್ದಾನೆ. ವೇದತ್ರಯಗಳು ತಮ್ಮ ಅಗಣಿತವಾದ ಶಬ್ದಸಂಪತ್ತಿನಿಂದ ಈತನ ಗುಣಗಳನ್ನು ಸ್ತುತಿಸುತ್ತಿವೆ.

ವಿಪ್ರರು ಸ್ನಾತರಾಗಿ ವಿಶುದ್ಧ ಮನಸ್ಸಿನಿಂದ ಕೂಡಿದವರಾಗಿ ತಮ್ಮ ಪವಿತ್ರವಾದ ವಚನಗಳಿಂದ ನರಸಿಂಹನ ಗರಿಷ್ಠಗುಣ. ಕ್ರಿಯಾದಿಗಳನ್ನು ಸ್ತೋತ್ರ ಮಾಡುತ್ತಿದ್ದಾರೆ. ತಮ್ಮ ಕರಯುಗಗಳನ್ನು ಜೋಡಿಸಿಕೊಂಡು ಹಾಡುತ್ತಿದ್ದಾರೆ. ಈ ರೀತಿಯ ಗುಣಸಂಪನ್ನತೆ ಯನ್ನು ಹೊಂದಿರುವ ಸ್ವಾಮಿಗೆ ಶ್ರೀನಿವಾಸ ಯತೀಂದ್ರರು ತಮ್ಮ ಪ್ರೌಢವಾದ ಪದ ರಚನೆಗಳಿಂದ ಸುಪ್ರಭಾತವನ್ನು ಹಾಡಿ ತಮ್ಮ ಸೇವೆಯನ್ನು ಸಲ್ಲಿಸಿದ್ದಾರೆ.

ಇಲ್ಲಿನ ಪದ್ಯಗಳಲ್ಲಿ ಭಗವಂತನ ಸೇವೆಗೆ ಸಂದಿರುವ ಉನ್ನತ ಅಶ್ವ, ಗಜಗಳನ್ನು ಶ್ಲಾಘಿಸಲಾಗಿದೆ. ಸೇವಕರ ದಾಸ್ಯಭಾವವನ್ನು ಹೊಗಳಲಾಗಿದೆ. ಕಿಂಕರತ್ವ ಸ್ವಭಾವವನ್ನು ಬೇಡಿಕೊಳ್ಳುವ ಪರಿಯಿದೆ. ಆತನ ಕರುಣಾದೃಷ್ಟಿಯ ಕೃಪಾಸಾಗರವನ್ನು ಯಾಚಿಸಲಾಗಿದೆ. ಆತನ ಪಾದಾಂಬುಜದಲ್ಲಿ ಭೃತನ ಪರಿಚಾರಕತೆಯ ಅಗತ್ಯತೆಯನ್ನು ಕುರಿತು ಹೇಳಲಾಗಿದೆ. ಭಕ್ತಿಯ ಸಂಚಾರಭಾವನೆಗಳನ್ನು ಸಮುದ್ರದಲ್ಲಿನ ತರಂಗಗಳ ಹೋಲಿಕೆಯ ಮೂಲಕ ಶ್ಲಾಘಿಸಲಾಗಿದೆ. ಇಂತಹ ಸ್ತೋತ್ರಸಾಹಿತ್ಯವು ಸುಪ್ರಸಿದ್ಧ ನರಸಿಂಹ ದೇವಾಲಯಗಳಲ್ಲಿ ನಿತ್ಯಕಟ್ಟಳೆಯಾಗಿ ಭಗವಂತನ ನಿರಂತರ ಆರಾಧನೆಯ ಮಾರ್ಗದಲ್ಲಿ ಮುಖ್ಯವಾದ ಪಾತ್ರವನ್ನು ನಿರ್ವಹಿಸುತ್ತಿದೆ. ನಮ್ಮ ಸ್ತೋತ್ರ ಪರಂಪರೆಯ ಕುಸುಮವಾಗಿ ತನ್ನ ನರುಗಂಪನ್ನು ಬೀರುತ್ತಿದೆ.

'ಕೌಸಲ್ಯಾಸುಪ್ರಜಾರಾಮ....' ಎಂದು ಆರಂಭವಾಗುವ ಸುಪ್ರಭಾತ ಶ್ಲೋಕದ ಎರಡನೆಯ ಚರಣ 'ಉತ್ತಿಷ್ಠ ನರಶಾರ್ದೂಲ ಕರ್ತವ್ಯಂ ದೈವಮಾಹ್ನಿಕಂ' ಎಂದಿರುತ್ತದೆ. ಮಾನವರೂಪಿಯಾದ ಸಿಂಹದಂತಿರುವನು ಮೇಲೆದ್ದು ಕರ್ತವ್ಯಮುಖನಾಗಲೆಂಬ ಸದಾಶಯ ವನ್ನು ಇಲ್ಲಿ ಸಾರಲಾಗಿದೆ. ಭಗವಂತನೂ ಸಹ ಸೃಷ್ಟಿಪಾಲನದಂತಹ ಅಗಾಧ ಕಾರ್ಯವನ್ನು ಮಾಡಬೇಕಾದರೆ ನರಸಿಂಹನಂತಹ ಅಸಾಧಾರಣ ರೂಪವನ್ನು ಧರಿಸಿದಾಗಲೇ ಸಾಧ್ಯವಾಗು ವುದು. ಅಂತಹ ಸ್ವಾಮಿಗೆ ಸಲ್ಲುವ ಸೇವೆಗಳಲ್ಲಿ ಸುಪ್ರಭಾತವೂ ಒಂದು ಗಣನೀಯವಾದ ಸ್ಥಾನವನ್ನು ಪಡೆದಿದೆ.

# ಪಂಚಾನನ ನರಸಿಂಹ



ಈಶ್ವರ ಸಂಹಿತೆಯಲ್ಲಿ 'ಐಮೊಗದ' ನರಸಿಂಹನ ಕಲ್ಪನೆಯನ್ನು ತಿಳಿಸಿ, ಈ ರೀತಿಯ ನರಸಿಂಹನ ರೂಪ ವಿವರಗಳನ್ನು ನೀಡಲಾಗಿದೆ. ನರಸಿಂಹನ ಐದು ಮುಖಗಳಲ್ಲಿ ನಾಲ್ಕು ದಿಕ್ಕುಗಳಿಗೆ ನಾಲ್ಕು ಮತ್ತೊಂದು ಊರ್ಧ್ವದಿಕ್ಕಿಗೆ - ಇದು ಮಧ್ಯದ ಮುಖ - ತಿರುಗಿದಂತೆ ಇರಬೇಕು. ಹತ್ತು ಕೈಗಳಲ್ಲಿ ಖಡ್ಗ ಅಕ್ಷಮಾಲೆ, ಗದೆ, ಬಾಣ, ಚಕ್ರ, ಶಂಖ, ಪಾಶ, ಮುಸಲ, ಪದ್ಮ ಮತ್ತು ಧನಸು, ಬಾಣಕ್ಕೆ ಬದಲು ಶೂಲ, ಖಡ್ಗಕ್ಕೆ ಬದಲು ಹರದಹಸ್ತವೂ ಇರಬಹುದೆಂದು ಊಹಿಸಬಹುದು. ರುಂಡಮಾಲೆ ಇಲ್ಲವೆ ಅಂಡಮಾಲೆ ಧರಿಸಿದ ಸ್ವಾಮಿಯು ಯಜ್ಞೋಪವೀತಧಾರಿ ಯಾಗಿರುತ್ತಾನೆ. ಅಗ್ನಿಯಂತೆ ತೇಜೋವಂತನಾಗಿರುವ ಈತನು ಸಕಲ ದೇವತಾ ಸ್ವರೂಪನಾಗಿರುತ್ತಾನೆ. ಸಕಲ ವ್ಯಾಧಿಗಳಿಂದ ಮುಕ್ತಿಪಡೆಯಲು ಈ ಮೂರ್ತಿಯನ್ನು ಆರಾಧಿಸಬಹುದು.

ನರಸಿಂಹಾಷ್ಟೋತ್ತರ ಮತ್ತು ನರಸಿಂಹ ಸಹಸ್ರನಾಮಾವಳಿಗಳಲ್ಲಿಯೂ 'ಪಂಚಾನನ' 'ಪಂಚರೂಪ' ವೆಂಬ ಹೆಸರುಗಳಿವೆ. ಐದು ಒಂದು ವಿಶಿಷ್ಟ ಬಗೆಯ ಸಂಖ್ಯೆಯಾಗಿದ್ದು ಪಂಚಭೂತಗಳು, ಪಂಚಕೋಶಗಳು, ಪಂಚಪ್ರಾಣಗಳ ಅರ್ಥವಿವರಣೆಯ ರಹಸ್ಯದಿಂದ ಕೂಡಿದೆ. ಶಿವನಿಗೂ ಪಂಚಾನನ ಎಂಬ ಹೆಸರಿದೆ. ನರಸಿಂಹನ ಪಂಚವಕ್ತ್ರ ಕಲ್ಪನೆಯಲ್ಲಿ ಈಶ್ವರ ಸಂಬಂಧವಾದ ತತ್ತ್ವವೂ ಅಡಗಿರಬಹುದೆಂದು ತಿಳಿಯಲಡ್ಡಿಯಿಲ್ಲ.



# ಕೇಶವ-ನರಸಿಂಹ

ಕೇಶವಾದಿ ಚತುರ್ವಿಂಶತಿ ಮೂರ್ತಿಗಳ ಬಳಕೆಯನ್ನು ಪಾಂಚರಾತ್ರಾಗಮವು ತಿಳಿಸುತ್ತದೆ. ಈ ಮೂರ್ತಿಗಳ ಲಕ್ಷಣಶಾಸ್ತ್ರವೂ ವಿಶೇಷವಾದದ್ದಾಗಿದೆ. ಮಹಾ ಭಾರತದ ಅನುಶಾಸನ ಪರ್ವದಲ್ಲಿ ಹೇಳಿರುವ ಸಹಸ್ರನಾಮದಿಂದ ಇಪ್ಪತ್ತನಾಲ್ಕು ರೂಪಗಳನ್ನು ಆರಿಸಿ ಕೊಂಡು, ಅದಕ್ಕೆ ಮೂರ್ತಿ ಲಕ್ಷಣವನ್ನು ನಿರ್ದೇಶಿಸಲಾಗಿದೆ. ಇದನ್ನು ಪದ್ಮಪುರಾಣದ ಪಾತಾಲಖಂಡದಲ್ಲಿಯೂ, ರೂಪಮಂಡನವೆಂಬ ಪ್ರಕರಣ ಗ್ರಂಥದಲ್ಲೂ ಗಮನಿಸಬಹುದು. ಕೇಶವನಾಮಗಳಲ್ಲಿ ಹತ್ತೊಂಬತ್ತನೆಯದು ನರಸಿಂಹ. ಸ್ವಾಮಿಗೆ ಪೂರ್ಣವಾಗಿ ಮನುಷ್ಯರೂಪವನ್ನು ನೀಡಿ ಆತನ ನಾಲ್ಕು ಕೈಗಳಲ್ಲಿ ಪದ್ಮ, ಗದೆ, ಶಂಖ, ಚಕ್ರಗಳನ್ನು ಅಳವಡಿಸಿರುವುದನ್ನು ಗಮನಿಸಬೇಕು. ಚತುರ್ವಿಂಶತಿ ಮೂರ್ತಿಗಳಿಗೆ ಹೊಯ್ಸಳ ಕಾಲದ ಶಿಲಾಪಟ್ಟಿಕೆಗಳಲ್ಲಿ ಪ್ರಾಧಾನ್ಯತೆಯಿರುವುದು ಕಂಡುಬರುತ್ತದೆ.



# ದ್ವಿಭುಜ ನರಸಿಂಹ

ನರಸಿಂಹಮೂರ್ತಿಯನ್ನು ಬಹುಬಗೆಗಳಲ್ಲಿ ರೂಪಿಸಿರುವ ವಿಧಾನವನ್ನು ಪ್ರಾಚೀನ ಕಾಲದಿಂದ ಗಮನಿಸಿಕೊಂಡು ಬರಬಹುದಾಗಿದೆ. ಉತ್ತರ ಕನ್ನಡ ಜಿಲ್ಲೆಯಲ್ಲಿ ನರಸಿಂಹನ ದ್ವಿಭುಜಮೂರ್ತಿಗಳ ಸಂಖ್ಯೆ ಹೆಚ್ಚಾಗಿವೆ. ಈ ಮೂರ್ತಿಗಳು ಆಸೀನ ಭಂಗಿಯುಲ್ಲಿರುವುದು ಸಾಮಾನ್ಯ. ನಿಂತಿರುವ ಎರಡು ತೋಳಿನ ನರಸಿಂಹಮೂರ್ತಿಯದೊಂದು ಬಗೆಯನ್ನು ಮನದಲ್ಲಿ ಮೂಡಿಸಿಕೊಂಡು ಅದಕ್ಕೊಂದು ರೂಪ ಚಿತ್ರಣವನ್ನು ನೀಡಬಹುದಾದ ವಿಚಾರ ರೇಖಾಚಿತ್ರದಲ್ಲಿ ಗಮನಿಸಬಹುದಾಗಿದೆ.

ಈಶ್ವರ ಸಂಹಿತೆಯಲ್ಲಿರುವ ೨ ತೋಳಿನ ನರಸಿಂಹ ವರ್ಣನೆ ಪುಚ್ಛ ನರಸಿಂಹನಿಗೆ, ಬಾಲವಿರುವ ನರಸಿಂಹನಿಗೆ ಅನ್ವಯವಾಗುವಂತಿದೆ. ಈ ರೀತಿಯ ಮೂರ್ತಿಗಳನ್ನು ಮಂತ್ರಸಿದ್ಧಿಗಾಗಿ ರೂಪಿಸಿ ಪೂಜಿಸಲಾಗುತ್ತದೆ.

# ನೃಸಿಂಹ ತಾಪಿನೀ ಉಪನಿಷತ್ತಿನ ತಾತ್ಪರ್ಯ ಸಂಗ್ರಹ

ಸೃಷ್ಟಿಯ ಆದಿಯಲ್ಲಿ ಅವ್ಯಕ್ತವಾಗಿದ್ದ ಪರತತ್ವವು ಕಮಲದೆಲೆಯ ಮೇಲಿನ ನೀರಿನಂತೆ ನಿರ್ಲಿಪ್ತವಾಗಿರುತ್ತಾ ವ್ಯಕ್ತರೂಪವನ್ನು ತಾಳಿತು. ಅದರಲ್ಲಿ ಒಂದು ಸಂಕಲ್ಪ ಉಂಟಾಯಿತು. ಈ ಸಂಕಲ್ಪದ ಪರಿಣಾಮವಾಗಿ ರೇತೋರೂಪವಾದ ಪುರುಷ ಬೀಜವು ಉತ್ಪನ್ನವಾಯಿತು. ಆ ಪುರುಷನು ತಪಸ್ಸನ್ನು ಆಚರಿಸಿ ನಾರಸಿಂಹ ರೂಪವಾದ ಮಂತ್ರವನ್ನು ಕಂಡುಕೊಂಡನು. "ಉಗ್ರಂ, ವೀರಂ, ಮಹಾವಿಷ್ಣುಂ, ಜ್ವಲಂತಂ, ಸರ್ವತೋಮುಖಂ, ನೃಸಿಂಹಂ ಭೀಷಣಂ, ಭದ್ರಂ, ಮೃತ್ಯುಮೃತ್ಯುಂ ನಮಾಮ್ಯಹಂ" ಎಂಬ ಮೂವತ್ಮೂರು ಅಕ್ಷರಗಳಿರುವ ಈ ಮಂತ್ರದಲ್ಲಿ ಉಪಾಸನಾ ಭೇದದಿಂದ ಎಲ್ಲ ಸಿದ್ಧಿಗಳೂ ಉಂಟಾಗುವುವೆಂದು ಹೇಳಲಾಗಿದೆ. ಈ ಮೂವತ್ಮೂರು ಅಕ್ಷರಗಳಲ್ಲಿ ಕೆಲವು ಫಲಗಳ ಪ್ರಾಪ್ತಿಗಾಗಿ ಕೆಲವು ಉಪಾಸನಾ ವಿಧಿಗಳು ವಿಧಿಸಲಾಗಿವೆ. ಇಲ್ಲಿನ ಸೂರ್ಯತೇಜಸ್ಸು, ಲಕ್ಷ್ಮೀ ಮತ್ತು ಓಂಕಾರಗಳನ್ನು ಉಪಾಸನೆ ಮಾಡುವುದು ವಿಧಾಯಕ. ಇದರಿಂದ ಆಗುವ ಫಲ ಆಯುರ್ವೃದ್ಧಿ, ಕೀರ್ತಿ, ಜ್ಞಾನ, ಐಶ್ವರ್ಯ ಇವುಗಳ ಲಾಭ. ಸಾಮವೇದ ಮಾರ್ಗದಲ್ಲಿ ಉಪಾಸನೆ ಮಾಡುವುದು ಮೋಕ್ಷ ಸಂಪಾದನೆಯ ಮಾರ್ಗ. ಜಪ ಮೊದಲಾದವುಗಳಿಂದ ಇದೇ ಶರೀರದಲ್ಲಿಯೇ ದೇವತೆಯನ್ನು ದರ್ಶನ ಮಾಡುವ ಯೋಗ್ಯತೆ ಉಂಟಾಗವುದು.

ಸಾಮವೇ ಬ್ರಹ್ಮ. ಅದು ತ್ರಿಗುಣಗಳ ಕಾರಣದಿಂದ ತ್ರಿಮೂರ್ತಿಗಳು (ಬ್ರಹ್ಮ, ವಿಷ್ಣು, ಮಹೇಶ್ವರ) ಎನಿಸುವುದು. ಸಾಮದಿಂದ ಪ್ರಮಾದ ಪರಿಹಾರ. ಅದರಿಂದ ಮೃತ್ಯುವನ್ನು ಜಯಿಸುವ ದಾರಿ. ಅದನ್ನು ತಿಳಿಯುವುದಕ್ಕಾಗಿ ಓಂಕಾರದ ಪ್ರತೀಕಗಳಾದ ಶೈವ, ವೈಷ್ಣವ, ಶಾಕ್ತ ಮಾರ್ಗಗಳನ್ನು ಉಪಾಸನೆ ಮಾಡಬೇಕು. ವೈರಾಜವು ಎಲ್ಲವನ್ನೂ ಒಳಗೊಂಡಿದ್ದು, ವೈಷ್ಣವವು ಎಲ್ಲೆಲ್ಲಿಯೂ ಹರಡಿರುವುದು. ಶಾಕ್ತವು ಎಲ್ಲ ಶಕ್ತಿಗಳನ್ನೂ ತುಂಬಿಕೊಂಡಿರುವುದು. ಪ್ರಾಜಾಪತ್ಯಯು ಸೃಷ್ಟಿ ಪರವಾದದ್ದು. ಶೈವವು ಸರ್ವ ಮಂಗಳಕರವಾದದ್ದು. ಸರ್ವತೋ ಮುಖನಾಗಿ ಸರ್ವಕ್ಕೂ ಆಧಾರವಾಗಿ ಎಲ್ಲವನ್ನೂ ಒಟ್ಟುಗೂಡಿಸಿರುವ ಬ್ರಹ್ಮಚೈತನ್ಯವೇ ನೃಸಿಂಹಶಬ್ದದ ತಾತ್ಪರ್ಯ. ನೃಸಿಂಹ ಶಬ್ದ ಸಂಕೇತವಾದ ಬ್ರಹ್ಮವು ಸುಗುಣವೂ ಹೌದು. ಅವ್ಯಕ್ತವೂ ಹೌದು. ಅದನ್ನು ಭ್ರಮರಕೀಟ ನ್ಯಾಯದಿಂದ ಜೀವ ಬ್ರಹ್ಮೈಕ್ಯವನ್ನು ಸಾಧಿಸಬಹುದು. ನೃಸಿಂಹಮಂತ್ರ ರಾಜವು ಸಾಮಸ್ವರಗಳಲ್ಲಿ ಪ್ರತಿಷ್ಠಿತವಾಗಿರುವುದರಿಂದ ಅದು ನಮಗೆ ಸಮೀಪವಾದದ್ದು. ಉಪಾಸನಾ ಕ್ರಮ ಕಾರಣ ಶಬ್ದಜ್ಞಾನ ಆಯಾಯ ದೇವತಾಫಲ ಪ್ರಾಪ್ತಿಗಾಗಿ ಅಂಗನ್ಯಾಸಾದಿಗಳು, ನಿರ್ಮಲವಾದ ಶಬ್ದ ವಿಭಾಗ, ಅನುಸಂಧಾನ ಪ್ರಕಾರ ಇವುಗಳ ಸಮನ್ವಯ. ಶಬ್ದಗಳ ಯೌಗಿಕಾರ್ಥ ವಿವರಣೆ ಇತ್ಯಾದಿಗಳನ್ನು ವಿಚಾರ ಮಾಡುವುದು ಅಪೇಕ್ಷಿತ.

ಉತ್ತರ ನೃಸಿಂಹ ತಾಪಿನಿಯಲ್ಲಿ ಮಾಂಡೂಕ್ಯವನ್ನು ಅನುಸರಿಸಿ ವೃಕ್ಷಗರ್ಭದಲ್ಲಿ ಅಡಗಿರುವ ಬೀಜದಂತೆ ಇರುವ ಓಂಕಾರವನ್ನು ವಿಚಾರ ಮಾಡಿ ಬೇರೆ ಬೇರೆಯಾಗಿ ಹದಿನಾರು ಕಲೆಗಳ ಉಪಾಸನೆಯನ್ನು ವಿವರಿಸಿ, ಪ್ರಪಂಚ ಸಮಾಪ್ತಿ ರೂಪವಾದ ಶಾಂತವೂ, ಮಂಗಳಕರವೂ, ಅದ್ವೈತವೂ ಆದ ಪರಮಾರ್ಥ ತತ್ವವನ್ನು ಉಪದೇಶಿಸುತ್ತದೆ.

ವಿಶ್ವ, ತೈಜಸ, ಪ್ರಾಜ್ಞ, ತುರೀಯಾ, ಜಾಗ್ರತ್, ಸ್ವಪ್ನ ಸುಷುಪ್ತಿ ತುರೀಯಾ ಅವಸ್ಥೆಗಳು ಸ್ಥೂಲ, ಸೂಕ್ಷ್ಮ ಕಾರಣ ದೇಹಗಳೂ ಪರಾ, ಪಶ್ಯಂತೀ, ಮಧ್ಯಮಾ, ವೈಖರೀ ಎಂಬ ನಾದೋತ್ಪತ್ತಿ ಸ್ಥಾನಗಳೂ ಓಂಕಾರಕ್ಕೆ ಉಪಾಧಿಯಾಗಿರುವುದರಿಂದ ಅವುಗಳನ್ನೂ ಉಪಾಸನೆ ಮಾಡಬೇಕು ಎಂಬುದು ಇಲ್ಲಿಯ ಉಪದೇಶ. ಅದರಿಂದ ದ್ವೈತಾಭಾವದ ಗುರುತಾದ ಜ್ಞಾನ ಸ್ವರೂಪವೇ ಬ್ರಹ್ಮಸ್ವರೂಪವೆಂಬುದು ಉಪನಿಷತ್ತಿನ ಸಾರ ಎಂದು ತಿಳಿಯಲಾಗುತ್ತದೆ.

ತತ್ವದ ಸ್ವರೂಪ ಇದು. ಸದ್ವಿದ್ಯೆಯು ಸದ್ಗತಿಯನ್ನುಂಟು ಮಾಡುವ ಸಾಮ. ಮಂತ್ರರಾಜದ ಪದಗಳು ದೇವತೆಗಳು. ಚಿಚ್ಛಕ್ತಿ (ಜ್ಞಾನಶಕ್ತಿ) ವೈಖರೀ, ಮಧ್ಯಮಾ, ಪಶ್ಯಂತೀ ಮತ್ತು ಪರಾ ಇವು ಅಕಾರ ಉಕಾರ ಮಕಾರಾರ್ಥಗಳು. ಓಂಕಾರದ ಭಾಗಗಳು ಬೀಜಶಕ್ತಿಗಳು. ಇವುಗಳ ಸಮಷ್ಟಿಭಾವವೇ ಓಂಕಾರ ವೃಕ್ಷ. ನೃ ಶಬ್ದವು ಅವಿದ್ಯೆಗೆ ಕಾರಣವಾದ ಕರ್ಮಗಳು ಎಂಬುದಾಗಿ ತಿಳಿಯಬೇಕು. ಸಿಂಹ ಶಬ್ದಕ್ಕೆ ಎಲ್ಲವನ್ನೂ ಉಪಸಂಹಾರ ಮಾಡುವ ಸದ್ರೂಪಿಯಾದ ಪರದೇವತೆ ಎಂದು ತಾತ್ಪರ್ಯ. ನೃಸಿಂಹ ಶಬ್ದದಿಂದ ಹೊರಪಡುವ ಅಂಶವೆಂದರೆ ಅದು ಪರಬ್ರಹ್ಮದ ಜ್ಞಾನಶಕ್ತಿ ಎಂಬುದು. ನೃಸಿಂಹವು ಸಗುಣವೂ, ಸಾಕಾರವೂ ಆದ ಪರಬ್ರಹ್ಮವೇ ಆಗಿರುವುದರಿಂದ ಅದನ್ನು ಹರಿ ಮತ್ತು ಹರ ಇವರ ಅಂದರೆ ಸೃಷ್ಟಿ ಮತ್ತು ಸಂಹಾರಗಳ ಪ್ರತೀಕವೆಂದು ತಿಳಿಯಬೇಕು.

"ದೇವಾ ಹವ್ವೈ ಮೃತ್ಯೋಃ ಪಾಪ್ಮಭ್ಯಃ ಸಂಸಾರಾಚ್ಚ ಬಿಭೀಯುಸ್ತೇ ಪ್ರಜಾಪತಿ ಮುಪಾಧಾವಂಸ್ತೇಭ್ಯ ಏತಂ ಮಂತ್ರರಾಜಂ ನಾರಸಿಂಹಮಾನುಷ್ಟುಭಂ ಪ್ರಾಯಚ್ಛತ್ತೇನವೈ ತೇ ಮೃತ್ಯುಮಜಯನ್ ಪಾಪ್ಮಾನಂ ಚಾತರಂ, ಸಂಸಾರಂಚಾತರಂಸ್ತಸ್ಮಾದ್ಯೋ ಮೃತ್ಯೋಃ ಪಾಪ್ಮಭ್ಯ ಸಂಸಾರಾಚ್ಚ ಬಿಭೀಯಾ ತ್ಸ ಏವಂ ಮಂತ್ರರಾಜಂ ನಾರಸಿಂಹಾಮಾನುಷ್ಟುಭಂ ಪ್ರತಿಗೃಹೀಯಾ ತ್ಸ ಮೃತ್ಯುಂ ತರತಿ ಸ ಪಾಪ್ಮಾನಂ ತರತಿ ಸ ಸಂಸಾರಂ ತರತಿ"

- ಅಥರ್ವಣೀಯ ನೃಸಿಂಹ ತಾಪಿನೀ ಉಪನಿಷತ್ತಿನ ದ್ವಿತೀಯ ಖಂಡದಲ್ಲಿ ಬರುವ ಮಂತ್ರರಾಜವಾದ ಈ ನಾರಸಿಂಹ ಅನುಷ್ಟುಭ ಮಂತ್ರವನ್ನು ಶಾಸ್ತ್ರೋಕ್ತವಾಗಿ ಗುರುಗಳಿಂದ ಪಡೆದು ಪಠಿಸಿದರೆ, ಪಠಿಸಿದವರು ಭಯಮುಕ್ತರಾಗುತ್ತಾರೆ. ಮೃತ್ಯುವನ್ನು ಜಯಿಸುತ್ತಾರೆ. ಪಾಪಗಳಿಂದ ಮುಕ್ತರಾಗುತ್ತಾರೆ. ಸಂಸಾರದಿಂದ ಮುಕ್ತರಾಗುವರು.

# ಉಪಸಂಹಾರ

'ದೇವರು-ದೇವಸ್ಥಾನ' ಎಂಬ ಈ ಎರಡು ಪದಗಳ ಅರ್ಥವಿಶ್ಲೇಷಣೆಯು ಅಷ್ಟೊಂದು ಸುಲಭವಾದ ಕಾರ್ಯವೇನಲ್ಲ. ಮಾನವನ ಬದುಕಿನೊಂದಿಗೆ ಬೆರೆತುಕೊಂಡು ಬೇಧಿಸಲಾರದ ವ್ಯೂಹವಾಗಿರುವವನು 'ದೇವರು'. ತನ್ನ ಆಲೋಚನೆ ಅಭಿರುಚಿಗಳಿಗೆ ತಕ್ಕಂತೆ ಲೆಕ್ಕವಿರದಷ್ಟು ದೇವರುಗಳನ್ನು ಕಂಡುಕೊಂಡು ಅವನನ್ನು ಒಲಿಸಿಕೊಳ್ಳುವುದಕ್ಕಾಗಿ ಪೂಜೆ, ಪ್ರಾರ್ಥನೆಗಳನ್ನು ಸಲ್ಲಿಸುತ್ತಿರುವ ಮಾನವನಿಗೆ ಭಗವಂತನ ಹಲವಾರು ರೂಪಗಳು ಇನ್ನೂ ಬಿಡಿಸಲಾರದ ಕಗ್ಗಂಟಾಗಿಯೇ ಉಳಿದಿರಬಹುದು. ಈ ಸಾಲಿನಲ್ಲಿ ನರಸಿಂಹನು ಮುಂಚೂಣಿಯಲ್ಲಿರುವಂತೆ ಕಾಣುತ್ತಾನೆ. ಈತನ ಬಗೆಗೆ ಪುರಾಣಗಳು ಬಿತ್ತರಿಸುತ್ತಿರುವ ಕಥಾಪ್ರಸಂಗಗಳೂ ರೋಚಕವಾಗಿವೆ. ಯಾವ ಪುರಾಣ ಮೊದಲು, ಯಾವುದು ನಂತರದ್ದೆಂಬ ನಿರ್ಧಾರಕ್ಕೆ ಅಂಟಿಕೊಳ್ಳಲು ಸಾಧ್ಯವಾಗುವುದಿಲ್ಲ. ಇವುಗಳನ್ನೊಳಗೊಂಡ ಆಲೋಚನೆ, ವಿವೇಚನೆಗಳ ಆಧಾರದ ಮೇಲೆ ನರಸಿಂಹರೂಪದ ವಿಚಾರವಂತಿಕೆಯನ್ನು ಬೆಳಸಿಕೊಂಡು ಬರಲಾಗಿದೆ.

ಕೇಶವನಾಮಗಳ ಹಿನ್ನೆಲೆಯಲ್ಲಿ ನೋಡುವುದಾದರೆ, ಮೊದಲಿನ ಮನುಷ್ಯಾಕಾರದ ಕಲ್ಪನೆ ಗರಿಕೆದರಿ 'ಭಾಗವತ'ದಂತಹ ಬೆಳೆದುನಿಂತ ಕೃತಿಯ ಮೂಲಕವಾಗಿ ನರಸಿಂಹನ ಮನುಷ್ಯ-ಪ್ರಾಣಿ ಸಂಯೋಜನೆಯಾಗಿ ಹೊರಹೊಮ್ಮಿದೆ. ಇದರ ಎಳೆಗಳಾದ ಹರಿವಂಶ, ವಿಷ್ಣುಪುರಾಣ, ನರಸಿಂಹ ಪುರಾಣಗಳ ಸಂಮಿಶ್ರದಿಂದ ನರಸಿಂಹತತ್ವದ ತಳಹದಿಯು ಬಲಗೊಂಡಿದೆಯೆಂದು ಹೇಳಬಹುದು. ಅಂತೂ ಒಟ್ಟನಲ್ಲಿ ಇತಿಹಾಸ ಗಣನೆಯ ಕಾಲದ ಆಚೆಗಿನ 'ನರಸಿಂಹಕಿಡಿ'ಯು ಕ್ರಿಸ್ತಶಕದ ಏಳು-ಎಂಟನೇ ಶತಮಾನಗಳ ಹೊತ್ತಿಗೆ ಪ್ರಜ್ವಲಿಸುವ ಉರಿಯಂತೆ ಕಂಡಿರುವುದಾಗಿದೆ. ಈ ಹಂತವನ್ನು ತಲುಪಿದುದರ ಅಧ್ಯಯನದ ಸಾರವೇ ಇಲ್ಲಿನ ಸಾರಾಂಶವೆಂದು ಮನಗಾಣಬಹುದು. ಇಂತಹ ಅಪರೂಪದ ಅವತಾರದ ಬಗ್ಗೆ ವಿಚಾರಮಂಥನ ಮಾಡಿದ್ದನ್ನು ಇಲ್ಲಿ ಕಾಣಬಹುದಾಗಿದೆ.

ಅಶಿಷ್ಟತೆಯ ದಮನಕ್ಕಾಗಿ ಆವಿರ್ಭವಿಸಿದವನೆಂದು ಪರಿಭಾವಿಸಬಹುದಾದ ನರಸಿಂಹನಿಗೆ ಶಿಷ್ಟತೆಯ ಆವರಣ ದೊರೆತದ್ದು ವಿಚಾರಣೀಯವಾದದ್ದು. ಇದರ ಹಿನ್ನೆಲೆಯಲ್ಲಿ ಜಾನಪದರ ಬೇಡತನವಿರಬಹುದು. ನಾಗರಿಕರ ಜಾಣತನವೂ ಇರಬಹುದು. ಚಂಚುಲಕ್ಷ್ಮಿಯೊಂದಿಗಿನ ನರಸಿಂಹನ ಒರಟುತನವು ಶ್ರೀದೇವಿಯೊಂದಿಗಿರುವಾಗ ಸಿರಿತನವಾಗಿ ಪರಿವರ್ತಿತಗೊಂಡಿರುವುದು. ಪುರಾಣದ ಮುಸುಕು ಜಾರಿದಂತೆ ಕ್ರೂರ-ಕರ್ಕಶತೆಗಳಿಂದ ದೂರನಾದಂತೆ ಕಾಣುವ ಸ್ವಾಮಿಯು ಕೋಮಲ-ವರದ ಸ್ವಭಾವಗಳಿಗೆ ಹತ್ತಿರವಾಗಿ ಕಾಣುತ್ತಿದ್ದಾನೆ. ಇದೊಂದು ಗಮನಾರ್ಹವಾದ ಪರಿವರ್ತನೆ, ಪರಿಣಾಮವೆಂದು ಅರಿತುಕೊಳ್ಳಬಹುದು. ವೈಕುಂಠದಿಂದ ಧರೆಗೆ ಇಳಿದು ಬಂದ ವಿಷ್ಣುವಿನ ಅವತಾರ ರೂಪಿಯಾದವನಿಗೆ ಆ

ಲೋಕದ ಭೋಗ-ಭಾಗ್ಯಗಳನ್ನು ತೊಡಿಸಲಾಗಿದೆ. ಲಕ್ಷ್ಮಿಯ ಸಖ್ಯವನ್ನು ಕಲ್ಪಿಸಲಾಗಿದೆ. ಲಕ್ಷ್ಮೀನರಸಿಂಹ, ಯೋಗಾನರಸಿಂಹರ ಪ್ರಚಲಿತ ರೂಪಗಳೊಂದಿಗೆ ಪ್ರಹ್ಲಾದವರದನ ಆಕಾರಗಳನ್ನು ಮನಗಂಡ ಭಗವಂತನ ಉಪಾಸಕರು, ಆಚಾರ್ಯವರೇಣ್ಯರು, ಸಾಧುಸಜ್ಜನರೆಲ್ಲ ನರಸಿಂಹನ ಹತ್ತಿರಕ್ಕೆ ಬಂದಿದ್ದಾರೆ. ಸ್ತೋತ್ರ-ಕಾವ್ಯಗಳ, ಶತಕ-ಕೀರ್ತನೆಗಳ ಸಾಹಿತ್ಯ ಸಂಪತ್ತಿನಲ್ಲಿ ನರಸಿಂಹನ ಘೋರ- ಉಗ್ರರೂಪವು ಕರಗಿ ಹೋಗಿದೆಯೆಂಬ ಮಾತು ಸಂದರ್ಭಕ್ಕೆ ಸರಿಹೊಂದಬಹುದು.

ಆರಂಭದಲ್ಲಿ ತಾಂತ್ರಿಕಾರಾಧನೆಯ ಮೂಲಕವಾಗಿ ನೆರವೇರುತ್ತಿದ್ದಿರಬಹುದಾದ ನರಸಿಂಹಾರಾಧನೆಗೆ ಕಾಲಕಳೆದಂತೆ ದೊರೆತಿರುವ ಮನ್ನಣೆ ಸಂಭಾವಿತತನದ್ದಾಗಿದೆ. ನೃಸಿಂಹೋಪಾಸನೆಯಲ್ಲಿ ಬೀಜಾಕ್ಷರಗಳು, ಯಂತ್ರಗಳು, ಸುದರ್ಶನ ನೃಸಿಂಹ ಮಂತ್ರ, ಶರಣಾಗತ-ವಜ್ರಪಂಜರ ನರಸಿಂಹ ಮಂತ್ರ, ನೃಸಿಂಹ ಮಾಲಾಮಂತ್ರಗಳು ಸೇರಿವೆ. ನರಸಿಂಹ ರೂಪದ ಮೂಲಭೂತ ವಿಚಾರಗಳ ಅಥವಾ ಪ್ರಾಥಮಿಕ ಹಂತದ ಉಪಾಸನೆಯ ಉದಾಹರಣೆಗಳಾಗಿ ಇವುಗಳನ್ನು ಗಮನಿಸಬಹುದಾಗಿದೆ. ಈ ಘಟ್ಟವನ್ನು ದಾಟಿ ಮುಂದಕ್ಕೆ ಹೋಗಿರುವ ರೂಪ ಆವಿಷ್ಕಾರವು ಪ್ರಸ್ತುತ ಅಧ್ಯಯನದಲ್ಲಿ ಮನದಟ್ಟಾಗಿರಬಹುದು.

ಭಗವಂತನ ವಿಚಾರದ ತಾತ್ತ್ವಿಕ ವಿವೇಚನೆಯು ಪ್ರಜ್ಞಾವಂತರ ಬೌದ್ಧಿಕ ಪರಿಧಿಗೆ ಸೀಮಿತವಾದದ್ದಾಗಿರಬಹುದು. ಆದರೆ ಸಾಮಾನ್ಯ ಜನವರ್ಗದವರ ಬುದ್ಧಿಮಟ್ಟಕ್ಕೆ ಎಟುಕುತ್ತಿರುವುದು ಕಣ್ಣಿಗೆ ಕಾಣುವ ಆ ದಯಾಮಯನಾದವನ ರೂಪ- ಆಕಾರಗಳು ಮಾತ್ರ. ಇದಕ್ಕೆ ಸಾಕ್ಷಿಯಾಗಿ ನರಸಿಂಹನ ಆರಾಧನಾ ನೆಲೆಗಳನ್ನು, ನೂರೆಂಟು ದೇವಾಲಯಗಳನ್ನು ನಾವಿಂದು ಕಾಣುತ್ತಿದ್ದೇವೆ. ಮೊದಲ ಭಾಗದಲ್ಲಿ ನರಸಿಂಹ ಸಂಹಿತೆಯೆಂದು ಕರೆಯಬಹುದಾದ ವಿಚಾರ ಸಾಮಗ್ರಿಯಿದೆ. ಆದ್ದರಿಂದಲೇ ಇದು ಪದಾರ್ಥ. ಮುಂದಿನ ಭಾಗ ಇದರ ಸಾಕಾರಗೊಂಡ ವಿವೇಚನೆ. ಭಗವಂತನ ಪೂಜಾರ್ಚನೆಗಳು ನಿರಂತರವಾಗಿ ನಡೆಯುತ್ತಿರುವ ಗುಡಿಗಳ ಸ್ಥೂಲಚಿತ್ರಣ. ಆಲಯಗಳ ದರ್ಶನ. ಅಲ್ಲಿ ಅರಳಿರುವ ಕಲೆಗಾರಿಕೆಯ ಅವಲೋಕನ. ಹೀಗಾದಾಗ ದೇವರು-ದೇವಸ್ಥಾನವೆಂಬ ಅಧ್ಯಾತ್ಮಚಕ್ರದ ಪರಿಭ್ರಮಣವನ್ನು ಸಾಧಿಸಿದಂತಾದೀತೆಂದು ಮನಗಂಡು ಮುಂದಿನ ಭಾಗಕ್ಕೆ ಸೂಚನೆ ನೀಡಲಾಗಿದೆ.

*ನಂಬದಿದ್ದನು ತಂದೆ, ನಂಬಿದನು ಪ್ರಹ್ಲಾದ*
*ನಂಬಿಯುಂ ನಂಬದಿರುವಿಬ್ಬಂದಿ ನೀನು//*
*ಕಂಬದಿನೋ ಬಿಂಬದಿನೋ ಮೋಕ್ಷವವರಿಂಗಾಯ್ತು*
*ಸಿಂಬಳದಿ ನೊಣನೀನು - ಮಂಕುತಿಮ್ಮ //*

(ಡಿವಿಜಿ ಅವರ ಮಂಕುತಿಮ್ಮನ ಕಗ್ಗದಿಂದ)

# ಗ್ರಂಥ ಋಣ

೦೧. ಶುಭಂ ಭವತು - ವಿದ್ವಾನ್ ಆದ್ಯರಾಮಾಚಾರ್ಯ
೦೨. ಶ್ರೀಮದ್ಭಾಗವತ - ಸಂಪುಟ ೪ - ಭಾರತ ದರ್ಶನ ಪ್ರಕಾಶನ
೦೩. ಶ್ರೀ ವಿಷ್ಣುಪುರಾಣಂ- ಸಂಪುಟ ೧ - ವಿದ್ವಾನ್ ರಂಗನಾಥಶರ್ಮ
೦೪. ಶ್ರೀ ನರಸಿಂಹ ಪುರಾಣ - ಅನು: ಎನ್.ವಿ.ಪದ್ಮನಾಭಾಚಾರ್ಯ
೦೫. ಹರಿವಂಶ ಪುರಾಣ - ಪಂಡರೀನಾಥಾಚಾರ್ಯ ಗಲಗಲಿ
೦೬. ಯುಗಯಾತ್ರೀ ಭಾರತೀಯ ಸಂಸ್ಕೃತಿ-ಸಂ.೨ - ಪ್ರಸಂ: ಡಾ||ಕೆ.ವಿ. ಪುಟ್ಟಪ್ಪ
೦೭. ಯುಗಯಾತ್ರೀ ಭಾರತೀಯ ಸಂಸ್ಕೃತಿ-ಸಂ.೪ - ಸಂ: ಹರಿದಾಸಭಟ್ಟಾಚಾರ್ಯ
೦೮. ಶ್ರೀಪಾದರಾಜರ ಕೃತಿಗಳು -ಸಂ: ಡಾ|| ಜಿ. ವರದರಾಜಾರಾವ್
೦೯. ವಾದಿರಾಜತೀರ್ಥ ಪ್ರಬಂಧ - ಅನು: ಪ್ರೊ. ವಿ.ಪ್ರಭಂಜನಾಚಾರ್ಯ
೧೦. ಪುರಂದರ ಸಾಹಿತ್ಯ ದರ್ಶನ - ಸಂ: ಪ್ರೊ.ಎಸ್.ಕೆ.ರಾಮಚಂದ್ರರಾವ್
೧೧. ಗೋಪಾಲದಾಸರ ಕೃತಿಗಳು - ಸಂ: ಡಾ|| ಟಿ.ಎನ್. ನಾಗರತ್ನ
೧೨. ಜಗನ್ನಾಥದಾಸರ ಕೃತಿಗಳು - ಸಂ: ಡಾ|| ಟಿ.ಎನ್. ನಾಗರತ್ನ
೧೩. ಕನ್ನಡ ಭಾಗವತ - ಪ್ರೊ. ಕೆ. ವೆಂಕಟರಾಮಪ್ಪ
೧೪. ಪ್ರಸನ್ನ ವೆಂಕಟದಾಸರ ಭಾಗವತ - ಸಂ: ಟಿ.ಕೆ. ಇಂದೂಬಾಯಿ
೧೫. ಹೆಳವನಕಟ್ಟೆ ಗಿರಿಯಮ್ಮನ ಹಾಡುಗಳು - ಸಂ: ಟಿ.ಕೆ. ಇಂದೂಬಾಯಿ
೧೬. ಕನ್ನಡ ಸಾಹಿತ್ಯ ಚರಿತ್ರೆ - ಡಾ|| ರಂ.ಶ್ರೀ. ಮುಗಳಿ
೧೭. ಮಲ್ಲರಸ ವಿರಚಿತ ದಶಾವತಾರ ಚರಿತೆ - ಸಂ: ವೈ.ಸಿ. ಭಾನುಮತಿ
೧೮. ನರಸಿಂಹ ಶತಕ -ಸವ್ಯಸಾಚಿ ಮತ್ತು ನಾರಾಯಣಾಚಾರ್
೧೯. ಮೂರ್ತಿಶಿಲ್ಪ ನೆಲೆ-ಹಿನ್ನೆಲೆ - ಪ್ರೊ. ಎಸ್.ಕೆ. ರಾಮಚಂದ್ರರಾವ್
೨೦. ಶ್ರೀ ನರಸಿಂಹ ಕಟಾಕ್ಷಂ - ಸಂಕಲನ ವೆಂಕಟಾಚಾರ್ಯಭಟ್ಟಾರಕ
೨೧. ನರಸಿಂಹ ದರ್ಶನ
ರಜತ ಮಹೋತ್ಸವ ಸ್ಮರಣ ಸಂಚಿಕೆ - ಶ್ರೀಕ್ಷೇತ್ರ ತೊರವಿ
೨೨. ಶ್ರೀ ನೃಸಿಂಹ ಸಹಸ್ರನಾಮಾವಳಿ ಸಂ. ೧,೨ - ಎಚ್.ಎಸ್. ನರಸಿಂಹಮೂರ್ತಿ

೨೩. ನರಸಿಂಹನ ಶಿಲ್ಪದಲ್ಲಿ ಸ್ವಾರಸ್ಯ (ಸುಧಾ) - ಪ್ರೊ, ಎಸ್.ಕೆ. ರಾಮಚಂದ್ರರಾವ್

೨೪. ನರಸಿಂಹ (ಸಂಶೋಧನಾತ್ಮಕ ಪ್ರಬಂಧ) - ಮೂಲ: ಆತ್ರೇಯ ಭಾಃ ಕಾಶ್ಯಪ

೨೫. ಶಿವ ಸ್ತುತಿ - ನರಸಿಂಹ ಸ್ತುತಿ - ಬನ್ನಂಜೆ ಗೋವಿಂದಾಚಾರ್ಯ

೨೬. ಶಂಕರ ವಿರಚಿತ ಲಕ್ಷ್ಮೀನರಸಿಂಹ ಸ್ತೋತ್ರಮು - ಅನು: ಅನಂತಾಚಾರ್ಯುಲು

೨೭. ತಾಳ್ಳಪಾಕ ಅನ್ನಮಾಚಾರ್ಯುಲ
ಜೀವಿತ ಚರಿತ್ರ (ಮೂಲ: ಚಿನ್ನನ್ನ) - ಸಂ: ಡಾ॥ ಮೇಡಸಾನಿ ಮೋಹನ್

೨೮. ಕರ್ನಾಟಕ ರಾಜ್ಯ ಗೆಜೆಟಿಯರ್ ಭಾಗ-೩ - ಕರ್ನಾಟಕ ರಾಜ್ಯ ಸರ್ಕಾರ

೨೯. ಕರ್ನಾಟಕ ಕನ್ನಡ ವಿಷಯ ವಿಶ್ವಕೋಶ - ಮೈ.ವಿ.ವಿ.ಪ್ರಸಂ. ಡಾ॥ ಹಾ.ಮಾ.ನಾ

೩೦. ಸಪ್ತಗಿರಿ ಮಾಸಿಕದ ಬಿಡಿ ಲೇಖನಗಳು - ವಿವಿಧ ಲೇಖಕರು

೩೧. ಭಾರತೀಯ ತೀರ್ಥ ಕಲಾಕ್ಷೇತ್ರ ಸಂದರ್ಶಿನಿ - ಡಾ॥ ಎನ್.ಎಸ್. ಅನಂತರಂಗಾಚಾರ್

೩೨. ಆಂಧ್ರಪ್ರದೇಶಂಲೋನಿ ಪ್ರಸಿದ್ಧ ಪುಣ್ಯಕ್ಷೇತ್ರಾಲು - ಡಾ॥ ಜಿ.ಎಸ್. ಮೋಹನ್

೩೩. ಆಂಧ್ರಪ್ರದೇಶಂಲೋನಿ ಸುಪ್ರಸಿದ್ಧ ನರಸಿಂಹ ಕ್ಷೇತ್ರಾಲು- ಬಿ.ಎಂ.ಡಿ. ಖಾಜಾ

೩೪. ಬ್ರಾಹ್ಮೀಯ ಚಿತ್ರಕರ್ಮ ಶಾಸ್ತ್ರಂ -ಸಂ.೧ - ಸಂ: ಜಿ. ಜ್ಞಾನಾನಂದ

೩೫. ಹೊಯ್ಸಳ ವಾಸ್ತುಶಿಲ್ಪ - ಡಾ॥ ಎಸ್. ಶ್ರೀಕಂಠಶಾಸ್ತ್ರಿ

೩೬. ಅನ್ನಮಯ್ಯ ನೃಸಿಂಹ ಸಂಕೀರ್ತನಂ - ಜಿ. ಬಾಲಕೃಷ್ಣ ಪ್ರಸಾದ್

೩೭. ತಾಳ್ಳಪಾಕಂ ಅನ್ನಮಯ್ಯ ಸಂಕೀರ್ತನಂಲ್ಲೋ
ಗ್ರಾಮೀಣ ಜೀವಿತಂ - ಡಾ॥ ಬಿ. ಶ್ರೀರಾಮುಲು

೩೮. ತೆಲುಗು ಪೋತನ ಭಾಗವತ ಸಪ್ತಮ ಸ್ಕಂಧ

39. Mysore Gazetter Vol-5 - Ed. By C. HayavadanRao

40. Mysore Gazetter - Kolar Dist. (1968)

41. Elements of Hindu Iconography - T.A. Gopinatha Rao

42. Vishnu-Kosha -Pr.S.K. RamachandraRao

43. 108 Vaishnavite Divya Deshams
Vol 1 & 6 - Miss. M.S. Ramesh

44. Vishnu Mayam Jagath - Pr. K.K. Murthy

45. A Hand book of South Indian
Images - T.N. Srinivasan

# ತಿದ್ದೋಲೆ

ಪುಟ ೨೧೫ ಮತ್ತು ೨೧೬ರಲ್ಲಿರುವ ಕೇಶವನರಸಿಂಹ ಮತ್ತು ದ್ವಿಭುಜ ನರಸಿಂಹ ಚಿತ್ರಗಳ ವಿವರಣೆಗಳು ಅದಲುಬದಲಾಗಿದೆ ಅದನ್ನು ಸರಿಪಡಿಸಿಕೊಂಡು ಓದಿಕೊಳ್ಳಬೇಕಾಗಿ ವಿನಂತಿ.







ಕೋಲಾರ ಸಾಹಿತ್ಯವಲಯದಲ್ಲಿ ಚಿರಪರಿಚಿತವಾದ ಹೆಸರು ಕೆ.ಆರ್. ನರಸಿಂಹನ್ ಅವರದು. ಬೋಧನೆಯ ಜೊತೆಗೆ ಬರವಣಿಗೆಯನ್ನೂ ಗಂಭೀರವಾಗಿ ಪರಿಗಣಿಸಿರುವ ಶ್ರೀಯುತರಿಂದ ಕೋಲಾರ ಜಿಲ್ಲೆಯ ವೆಂಕಟೇಶ್ವರಸ್ವಾಮಿ ಮತ್ತು ವಿಷ್ಣು ದೇವಾಲಯಗಳು ಕೃತಿಯ ಜೊತೆಗೆ ಜಿಲ್ಲೆಯ ಬಗೆಗಿನ ಅನೇಕ ಲೇಖನಗಳು ಹೊರ ಬಂದಿವೆ.

ಪ್ರಸ್ತುತ ಎರಡು ಭಾಗಗಳಲ್ಲಿ ಪ್ರಕಟವಾಗಿರುವ ನರಸಿಂಹ ಪದಾರ್ಥ ಕೃತಿಯಲ್ಲಿ, ವೇದ - ಪುರಾಣ ಸಂಹಿತೆ - ಆಗಮ ಶಿಲ್ಪ ಶಾಸ್ತ್ರಗಳ ವಿಶ್ಲೇಷಣೆಯಲ್ಲಿ ನರಸಿಂಹಸ್ವಾಮಿಯ ನೆಲೆ - ಹಿನ್ನೆಲೆಯನ್ನು ಗುರುತಿಸಿದ್ದಾರೆ. ಅಲ್ಲದೆ ನರಸಿಂಹ ಅವತಾರದ ಒಟ್ಟು ಕಲ್ಪನೆಯನ್ನು ಸಂಚಯಿಸಿರುವ ಪ್ರಯತ್ನ ಶ್ಲಾಘನೀಯ. ಎರಡನೆಯದಾಗಿ ಭಾರತದಲ್ಲಿರುವ ಅನೇಕ ನರಸಿಂಹ ಕ್ಷೇತ್ರಗಳ ಕಿರು ಪರಿಚಯವನ್ನು ನೀಡಿ, ಓದುಗರಿಗೆ - ಯಾತ್ರಿಕರಿಗೆ ನರಸಿಂಹಸ್ವಾಮಿಯನ್ನು ಅರ್ಥ ಮಾಡಿಕೊಳ್ಳಲು ಅನುವು ಮಾಡಿಕೊಟ್ಟಿದ್ದಾರೆ.

ಪಿ.ಚಂದ್ರಪ್ರಕಾಶ್



